# ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ

ಡಾ. ಎಂ. ಚಿದಾನಂದ ಮೂರ್ತಿ




ಸಪ್ನ

# ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ

**ಡಾ. ಎಂ. ಚಿದಾನಂದ ಮೂರ್ತಿ,** ಎಂ.ಎ., ಪಿ.ಎಚ್‌ಡಿ. (ಮೈ.); ಡಿ.ಲಿಟ್ (ಬೆಂ.)
ಕನ್ನಡ ಪ್ರಾಧ್ಯಾಪಕ (ನಿವೃತ್ತ), ಬೆಂಗಳೂರು ವಿಶ್ವವಿದ್ಯಾಲಯ




ಸಪ್ನ ಬುಕ್ ಹೌಸ್®
3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು - 560 009
ದೂರವಾಣಿ : 40114455

**Madhyakalina Karnataka Mattu Asprushyathe** : by **Dr. M. Chidananda Murthy,** published by **Sapna Book House (P) Ltd.,** R.O. # 11, 3rd Main Road, Gandhinagar, Bangalore - 9. Tel. : 40114455.

[K.B. 1753]

**ISBN : 978-81-280-1585-4**



**ಮೂರನೆಯ ಮುದ್ರಣ : ನವೆಂಬರ್ 2011**

ಪುಟಗಳು : **vi + 198 = 204**

ಹಂಚಿಕೆದಾರರು : **ಎಸ್‌ಬಿಎಸ್ ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್**
ರೈಲ್ವೇ ಪ್ಯಾರಲಲ್ ರೋಡ್
ಕುಮಾರ ಪಾರ್ಕ್ ಈಸ್ಟ್, ಬೆಂಗಳೂರು–1
ದೂರವಾಣಿ : 22268956

ಅಕ್ಷರ ಜೋಡಣೆ : **ದಿವ್ಯ ಪ್ರಿಂಟ್ರಾನಿಕ್ಸ್, ಬೆಂಗಳೂರು**

ಮುಖಪುಟ ವಿನ್ಯಾಸ : **ಶ್ರೀಪಾದ, ಬೆಂಗಳೂರು**

# ಪ್ರಸ್ತಾವನೆ

ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಆಶ್ರಯದಲ್ಲಿ ಕೊಟ್ಟ ಮೂರು ಉಪನ್ಯಾಸಗಳು (ಫೆಬ್ರವರಿ 18, 19 ಹಾಗೂ 20, 1982) ಇಲ್ಲಿ ಪ್ರಕಟವಾಗಿವೆ. ನನ್ನನ್ನು ಆ ಉಪನ್ಯಾಸಗಳಿಗೆ ಆಹ್ವಾನಿಸಿದ ಅಂದಿನ ನಿರ್ದೇಶಕರಾದ ಪ್ರೊ. ಚೆನ್ನವೀರ ಕಣವಿಯವರಿಗೂ, ಅಂದು ಉಪನಿರ್ದೇಶಕರಾಗಿದ್ದು ಈಗ ನಿರ್ದೇಶಕರಾಗಿರುವ ಶ್ರೀ ಎಸ್. ಬಿ. ನಾಯಕ ಅವರಿಗೂ ನಾನು ಬಹುವಾಗಿ ಕೃತಜ್ಞನಾಗಿದ್ದೇನೆ. ಶ್ರೀ ಎಸ್. ಬಿ. ನಾಯಕ ಈ ಕೃತಿಯ ಪ್ರಕಟಣೆಯ ವಿಷಯದಲ್ಲಿ ಆಸ್ಥೆ ವಹಿಸಿ, ನನ್ನ ಕೃತಿಯ ಹಸ್ತಪ್ರತಿಯನ್ನು ಬೆರಳಚ್ಚು ಮಾಡಿಸಿ ಅಚ್ಚಿಗೆ ಸಿದ್ಧಪಡಿಸಿ ಕೊಟ್ಟಿದ್ದಾರೆ. ಅವರ ಸೌಜನ್ಯಕ್ಕೆ ನಾನು ಋಣಿಯಾಗಿದ್ದೇನೆ.

ಆ ಮೂರೂ ದಿನ ಧಾರವಾಡದ ವಿಚಾರವಂತರು ಹೆಚ್ಚಿನ ಸಂಖ್ಯೆಯಲ್ಲಿ ಉಪನ್ಯಾಸಗಳಿಗೆ ಬಂದು ತೀವ್ರಾಸಕ್ತಿಯಿಂದ ಭಾಗವಹಿಸಿದರು. ಅದೊಂದು ಅಪೂರ್ವ ಅನುಭವವೆಂದು ನಾನು ಭಾವಿಸಿದ್ದೇನೆ. ಆ ಮೂರು ದಿನ ಶ್ರೀ ಪಾಟೀಲ ಪುಟ್ಟಪ್ಪ, ಡಾ. ಆರ್. ಸಿ. ಹಿರೇಮಠ, ಡಾ. ಆರ್. ವಾಯ್. ಧಾರವಾಡಕರ ಅವರು ಅಧ್ಯಕ್ಷತೆ ವಹಿಸಿದುದಲ್ಲದೆ ಬಹು ಉಚಿತವಾದ ರೀತಿಯಲ್ಲಿ ಮಾತನಾಡಿ ನನ್ನ ಉಪನ್ಯಾಸಗಳಿಗೆ ಬೆಲೆ ತಂದುಕೊಟ್ಟರು. ಅಂದು ಭಾಗವಹಿಸಿದ್ದ ಶ್ರೋತೃಗಳ ಪ್ರತಿಕ್ರಿಯೆ, ಪ್ರಶ್ನೆಗಳನ್ನು ಅನುಬಂಧದಲ್ಲಿ ಕೊಟ್ಟಿದ್ದೇನೆ.

ಈ ಕೃತಿಯ ಮೊದಲ ಹೆಸರು "ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ" ಎಂದಿದ್ದರೂ, ವಾಸ್ತವವಾಗಿ ಆಧುನಿಕ ಪೂರ್ವದ ಕರ್ನಾಟಕದ ಅಸ್ಪೃಶ್ಯತೆಯ ಇತಿಹಾಸವನ್ನೇ ಈ ಕೃತಿ ಒಳಗೊಂಡಿದೆ. ಇಲ್ಲಿ ಮೂಲ ಆಕರಗಳಾಗಿ ಸಾಹಿತ್ಯಕ್ಕೆ ಪ್ರಾಧಾನ್ಯ ದೊರಕಿದ್ದರೂ ಶಾಸನಗಳನ್ನೂ ಇತರ (ಕಡತ ಗಳಂತಹ) ದಾಖಲೆಗಳನ್ನೂ ಬಳಸಿಕೊಂಡಿದ್ದೇನೆ. ವಿಶೇಷವಾಗಿ ವಚನ ಸಾಹಿತ್ಯ ವನ್ನೂ, ಕರ್ನಾಟಕದ ಸಾಮಾಜಿಕ ಚರಿತ್ರೆಯನ್ನೂ, ಅಸ್ಪೃಶ್ಯತೆಯನ್ನು ಕುರಿತಾದ ಸಮಸ್ಯೆ ಯನ್ನೂ ಅಭ್ಯಸಿಸುವ ಸಂಶೋಧಕರಿಗೆ ಇಲ್ಲಿ ಸಾಕಷ್ಟು ಸಾಮಗ್ರಿಯೂ ಚಿಂತನೆ ಒಳನೋಟಗಳೂ ಉಂಟು ಎಂಬುದನ್ನು ಹೇಳಲೇಬೇಕೆಂದು ಮನಸ್ಸಾಗುತ್ತದೆ. ಈ ಆಕರ ಪ್ರಾಯವಾದ ಕೃತಿಯ ಹೆಸರನ್ನು "ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ" ಎಂದು ಮೊಟಕು ಮಾಡಿ ತೋರಿಸಿದೆ. ಬಳಕೆಯ ಅನುಕೂಲತೆಯ ದೃಷ್ಟಿಯಿಂದ ಹೀಗೆ ಮಾಡಲಾಗಿದೆ ಎಂಬುದು ಸ್ಪಷ್ಟವಾಗಿಯೇ ಇದೆ. ಇದು ಇಂಗ್ಲೀಷಿಗೆ ಅನುವಾದಗೊಂಡು, ಕರ್ನಾಟಕದ ಹೊರಗಿನ ವಿದ್ವಾಂಸರಿಗೂ ಈ ಉಪನ್ಯಾಸಗಳು ಲಭ್ಯವಾಗುವ ಕಾಲ ಬಂದರೆ ನಾನಂತೂ ಸಂತೋಷಿಸುತ್ತೇನೆ.

**ಈ ಸಂದರ್ಭದಲ್ಲಿ ನನಗೆ ಹಿರೇಕೋಗಲೂರಿನ (ದಿ.) ಬೇಡರ ಕರಿಯಪ್ಪ ಜ್ಞಾಪಕಕ್ಕೆ ಬರುತ್ತಿದ್ದಾನೆ. ಕರಿಯಪ್ಪ ಈ ದಿನ ಶಿವಮೊಗ್ಗ ಜಿಲ್ಲೆಯ ಜನ ಮರೆತಿರುವ ವ್ಯಕ್ತಿ. ಸಹಜವೇ. ಅವಿದ್ಯಾವಂತ, ಕೆಳಜಾತಿಯವ, ನನ್ನ ಬಾಲ್ಯದಲ್ಲಿ ಸದಾ ಖಾದಿ ಧರಿಸಿ ಅಪ್ಪಟ ದೇಶಾಭಿಮಾನಿಯಾಗಿ ಬ್ರಿಟಿಷರ ಪರದಾಗಿದ್ದ ಊರಿನ ಗೌಡ ಪಟೇಲರ ವಿರುದ್ಧವೇ ಬದುಕುತ್ತ ಕೊನೆಯವರೆಗೂ (ದಿ.) ಎಚ್. ಸಿದ್ಧಯ್ಯನವರ ನಿಷ್ಠಾವಂತ ಅನುಯಾಯಿಯಾಗಿ ಉಳಿದು, ಸ್ವಾತಂತ್ರ್ಯ ಬಂದ ಮೇಲೆ ದಾರಿದ್ರ್ಯದಲ್ಲೂ ದೇಶಾಭಿಮಾನ5ವನ್ನೂ ಉಳಿಸಿಕೊಂಡೇ ಸತ್ತ ಅನಾಮಧೇಯ. ಇಂಥವರ ಹೆಸರು ಸ್ವಾತಂತ್ರ್ಯದ ಚಳವಳಿಯ ಚರಿತ್ರೆಯಲ್ಲಿ ದಾಖಲಾಗುವುದಿಲ್ಲ. ಆದರೆ ನನ್ನಂತಹ ಹಲವರಿಗೆ ರಾಷ್ಟ್ರಪ್ರೇಮದ ಮೊದಲ ಶಿಕ್ಷಣ ಆದುದು ಇಂಥವರಿಂದಲೇ, ಅಥದಾ ಇವನಿಂದಲೇ.**

**ಆತ ನನ್ನ ಬಗ್ಗೆ ತೋರಿದ ಪ್ರೀತಿ ದಾತ್ಸಲ್ಯಕ್ಕೆ ಈ ಕೃತಿಯನ್ನು ಆತನ ಹೆಸರಿಗೆ ಅಂಕಿತಗೊಳಿಸಲು ಬಯಸುತ್ತೇನೆ.**

ಧಾರವಾಡದ ಡಾ. ಎಸ್. ಎಂ. ಕೊಟ್ರಶೆಟ್ಟಿ, ಡಾ. ಬಿ. ವಿ. ಮಲ್ಲಾಪುರ, ಡಾ. ದೇವೇಂದ್ರಕುಮಾರ ಹಕಾರಿ, ಪ್ರೊ. ಎಚ್. ವಿ. ನಾಗೇಶ ಇವರೇ ಮೊದಲಾದ ಮಿತ್ರರು ನನ್ನನ್ನು ಆ ಉಪನ್ಯಾಸಗಳ ಸಂದರ್ಭದಲ್ಲಿ ಸಜ್ಜನಿಕೆಯಿಂದ ನೋಡಿಕೊಂಡು ದಲ್ಲದೆ ನನ್ನ ವಿಚಾರಗಳು ಹರಿತವಾಗಲು ಅವರು ಕಾರಣರಾದರು. ಈ ಎಲ್ಲರಿಗೂ ನಾನು ಅನಂತ ವಂದನೆಗಳನ್ನರ್ಪಿಸುತ್ತೇನೆ.

ಬೆಂಗಳೂರು
12.4.1985

**ಎಂ. ಚಿದಾನಂದಮೂರ್ತಿ**
(080–23300687)

## ಈಚಿನ ಆವೃತ್ತಿ (2011)

ಈ ಕೃತಿಯನ್ನು ಬರೆದಾಗ ಕರ್ನಾಟಕ ಸರ್ಕಾರದ ವಚನ ಸಂಪುಟಗಳು ಹೊರಬಂದಿರಲಿಲ್ಲ. ಇಲ್ಲಿ ಉಲ್ಲೇಖವಾಗಿರುವ ವಚನಕಾರರ ವಚನಗಳು ಬೇರೆ ಬೇರೆ ಆವೃತ್ತಿಗಳಿಂದ ತೆಗೆದುಕೊಂಡವು ಎಂಬುದನ್ನು ಓದುಗರು ಗಮನಿಸಬೇಕು.

ಇದು ಹಿಂದಿನ ಮುದ್ರಣಗಳ ಮರುಮುದ್ರಣ. ಇದನ್ನು ಪ್ರಕಟಿಸಿರುವ 'ಸಪ್ನ ಬುಕ್ ಹೌಸ್' ಪ್ರಕಾಶಕರಾದ ಶ್ರೀ ನಿತಿನ್ ಶಾ ಮತ್ತು ಶ್ರೀ ದೊಡ್ಡೆಗೌಡರಿಗೆ ನಾನು ಬಹು ಕೃತಜ್ಞನಾಗಿದ್ದೇನೆ.

21.8.2011

**ಎಂ. ಚಿದಾನಂದಮೂರ್ತಿ**

# ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ

# ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ

## ಉಪನ್ಯಾಸ – I*

**ಆಕರಗಳು, ಉದ್ದೇಶ :**

ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗ ವಿಭಾಗದ ನಿರ್ದೇಶಕರಾದ ಶ್ರೀ ಚೆನ್ನವೀರಕಣವಿಯವರಿಂದ ಮೂರು ವಿಶೇಷ ಉಪನ್ಯಾಸಗಳನ್ನು ಕೊಡಲು ಆಹ್ವಾನ ಬಂದಾಗ ನನ್ನ ಮನಸ್ಸಿನ ತುಂಬ ದೇಶದಲ್ಲಿ ಅಲ್ಲಲ್ಲಿ ನಡೆಯುತ್ತಿದ್ದ ಮತಾಂತರದ ವಿಷಯವೇ ತುಂಬಿಕೊಂಡಿದ್ದು ಯಾವುದೋ ಒಂದು ನಿಗೂಢವಾದ ವ್ಯಾಕುಲವನ್ನು ತೀವ್ರವಾಗಿ ಅನುಭವಿಸುತ್ತಿದ್ದೆ. ಉಪನ್ಯಾಸಗಳಿಗೆ ಮೊದಲು ಬೇರೊಂದು ವಿಷಯ ವನ್ನು ಆಯ್ಕೆ ಮಾಡಿಕೊಂಡು ಕೆಲಸವನ್ನು ಆರಂಭಿಸಿ, ಅದರಲ್ಲಿ ತಕ್ಕಮಟ್ಟಿಗೆ ಮುಂದುವರಿದು, ಸದ್ಯದ ಸಾಮಾಜಿಕ ಪರಿಸ್ಥಿತಿಗೆ ಹೆಚ್ಚು ಪ್ರಸ್ತುತವೆನಿಸಬಹುದಾದ ಮೇಲಿನ ವಿಷಯವನ್ನು ಅಂತಿಮವಾಗಿ ಆಯ್ಕೆ ಮಾಡಿಕೊಂಡೆ. ಅದರ ಪರಿಣಾಮವೇ ಈ ಉಪನ್ಯಾಸಗಳು. ವಿಷಯದ ಆಯ್ಕೆಗೆ ಪ್ರಚೋದನೆ ಯಾವುದು ಎಂಬುದನ್ನು ಸೂಚಿಸಿದ್ದೇನೆಯೇ ಹೊರತು ಈ ಉಪನ್ಯಾಸಗಳ ಉದ್ದೇಶ ಕರ್ನಾಟಕವನ್ನು, ಕನ್ನಡ ಸಾಹಿತ್ಯದ ಒಂದು ಪ್ರಮುಖ ಘಟ್ಟದ ಒಂದು ಮುಖವನ್ನು ಹೆಚ್ಚು ನಿಖರವಾಗಿ ತಿಳಿದುಕೊಳ್ಳುವುದೇ ಹೊರತು ಇನ್ನಾವುದೇ ಹುಚ್ಚು ಕಲ್ಪನೆಯ ಆಸೆಯೂ ಇಲ್ಲ. ಇದರ ಮೇಲೆ ಈ ಉಪನ್ಯಾಸಗಳು ನಮ್ಮ ಸಾಹಿತ್ಯ ಸಮಾಜಗಳನ್ನು ಕುರಿತು ಚಿಂತಿಸುವಾಗ ನಮ್ಮನ್ನು ನಾವು ಪರಿಶೀಲಿಸಿಕೊಳ್ಳುವಂತೆ ಮಾಡಿದರೆ ಅದೂ ಅಗಣನೀಯವಾದ ಉದ್ದೇಶವೇನೂ ಅಲ್ಲವೆಂದು ಇಲ್ಲಿ ನಾನು ಸೂಚಿಸ ಬಯಸುತ್ತೇನೆ.

ಈಗಾಗಲೇ ಕನ್ನಡದ ಬೇರೆ ಬೇರೆ ಬರಹಗಳಲ್ಲಿ ಈ ನನ್ನ ಉಪನ್ಯಾಸಗಳ ವಸ್ತುವನ್ನು ಕುರಿತಂತೆ ಬಗೆಬಗೆಯ ಚಿಂತನೆ ಇಣುಕಿ ಹಾಕಿದೆ. ಆದರೆ ಪ್ರಾಸಂಗಿಕ ವಾಗಿ ಅಸ್ಪೃಶ್ಯರು ಮತ್ತು ಅಸ್ಪೃಶ್ಯತೆಯ ಬಗ್ಗೆ ಬರಹಗಳು ಬಂದಿವೆಯೇ ಹೊರತು

---
* 18.2.1982

ಇಡೀ ಸಮಸ್ಯೆಯತ್ತ ಗಮನವನ್ನು ಕೇಂದ್ರೀಕರಿಸಿ ವಿಚಾರ ಮಾಡಿರುವ ಬರಹಗಳು ಇಲ್ಲವೇ ಇಲ್ಲವೆಂದರೂ ಸರಿಯೇ. ಸಾಹಿತ್ಯದ ವಿದ್ಯಾರ್ಥಿಗಳ ಬರಹಗಳೇ ಹೆಚ್ಚಾಗಿರುವುದರಿಂದ ಅಲ್ಲಿ ಎಷ್ಟೋ ಬಾರಿ ಉತ್ಪ್ರೇಕ್ಷೆ ಅತ್ಯುಕ್ತಿಗಳು ಇಣುಕಿ ಹಾಕಿರುವ ಸಂದರ್ಭಗಳೂ ಇಲ್ಲದಿಲ್ಲ. ಸಾಹಿತ್ಯವನ್ನು ಬದುಕಿನ ಅಂಗವಾಗಿ ಮತ್ತು ಅಖಂಡ ಜೀವನ ಪ್ರವಾಹದ ಒಂದು ಹೊನಲಾಗಿ ಗಮನಿಸಿ ಹಿಂದಿನ ಕನ್ನಡ ಸಾಹಿತ್ಯ ಪ್ರತಿಫಲಿಸಿರುವ ಸಮಸ್ಯೆ, ಸೂಚಿಸಿರುವ ಪರಿಹಾರ, ಕರ್ನಾಟಕದಲ್ಲಿ ಆದದ್ದು, ಹೋದದ್ದು, ಇವನ್ನು ಅಖಂಡ ಭಾರತದ ಹಿನ್ನೆಲೆಯಲ್ಲಿ ಪೃಥಕ್ಕರಿಸಿ ವಿವೇಚಿಸಿರುವ ಪ್ರಯತ್ನಗಳು ತೀರ ಕಡಿಮೆ. ವಚನ ವಾಙ್ಮಯವನ್ನು ಕೇಂದ್ರವಾಗಿ ಉಳ್ಳ ಮಧ್ಯಕಾಲೀನ ಸಾಹಿತ್ಯವನ್ನು ಈ ಎರಡು ದಶಕಗಳಿಂದ ನಾನು ಅಭ್ಯಾಸ ಮಾಡುತ್ತಿದ್ದು ಆ ಬಗ್ಗೆ ನಾನು ಲೇಖನ ಮತ್ತು ಗ್ರಂಥಗಳನ್ನು ಬರೆದಿದ್ದರೂ ಅಸ್ಪೃಶ್ಯರು ಮತ್ತು ಅಸ್ಪೃಶ್ಯತೆಯ ದೃಷ್ಟಿಯಿಂದ ಮತ್ತೊಮ್ಮೆ ಆ ವಾಙ್ಮಯವನ್ನು ಓದಿದಾಗ ನನ್ನ ಗಮನಕ್ಕೆ ಈ ಹಿಂದೆ ಬಾರದಿದ್ದ, ಬಂದರೂ ಮಹತ್ವವೆನ್ನಿಸದಿದ್ದ ಹಲವಾರು ವಿಷಯಗಳು ಗೋಚರವಾದುವು. ಈ ನನ್ನ ಉಪನ್ಯಾಸಗಳು ಈಗಾಗಲೇ ಎಲ್ಲರಿಗೂ ತಿಳಿದಿರುವ ಸಂಗತಿಗಳ ಪುನರಾವರ್ತನೆಯಲ್ಲವೆಂಬುದನ್ನು ಇಲ್ಲಿ ಸೂಚಿಸುವುದು ಅಗತ್ಯವಾಗಿದೆ.

ನಾನು ಹೇಳಿ ಕೇಳಿ ಸಾಹಿತ್ಯದ ವಿದ್ಯಾರ್ಥಿಯಾಗಿದ್ದರೂ ಸಂಸ್ಕೃತಿ, ಸಮಾಜ ವಿಜ್ಞಾನ, ಜಾನಪದ ಶಾಸ್ತ್ರಗಳನ್ನು ನಾನು ತಕ್ಕಮಟ್ಟಿಗೆ ಅಭ್ಯಾಸ ಮಾಡುವ ಅಗತ್ಯ ಬಿದ್ದುದರಿಂದ ಮತ್ತು ಮೇಲಿನ ವಿಷಯವನ್ನು ಆಯ್ಕೆ ಮಾಡಿಕೊಂಡ ಮೇಲೆ ಮತ್ತೊಮ್ಮೆ ಬೇರೆ ಬೇರೆ ಶಿಸ್ತುಗಳ ಗ್ರಂಥಗಳನ್ನು ಅಭ್ಯಾಸ ಮಾಡಬೇಕಾದ ಅಗತ್ಯ ಬಂದುದರಿಂದ, ಸಾಹಿತ್ಯ ಒದಗಿಸುವ ಸಾಮಗ್ರಿಯನ್ನು ಸಮಾಜ ವಿಜ್ಞಾನದ ಅಧ್ಯಯನಕ್ಕೆ ಹೇಗೆ ಬಳಸಿಕೊಳ್ಳಬಹುದೆಂಬುದರ ಅರಿವನ್ನು ಪಡೆಯಲು ಸಾಧ್ಯ ವಾಯಿತು. ಈ ನನ್ನ ಉಪನ್ಯಾಸಗಳಲ್ಲಿ ಅಡಿಟಿಪ್ಪಣಿಯಾಗಿ ಸಾಕಷ್ಟು ಉಲ್ಲೇಖಗಳನ್ನು ಕೊಟ್ಟಿರುವುದರಿಂದ ಮಧ್ಯಕಾಲೀನ ಸಮಾಜವನ್ನು ಅರಿಯಲು ಅಧ್ಯಯನಿಸುವ ಬಯಕೆಯುಳ್ಳ ವಿದ್ವಾಂಸರಿಗೆ ಇದೊಂದು ಆಕರಗ್ರಂಥವೂ ಆಗಬಲ್ಲುದು. ನಾನು ಏನೇ ಆದರೂ ಶುದ್ಧ ಸಮಾಜವಿಜ್ಞಾನಿಯಾಗಲು ಸಾಧ್ಯವಿಲ್ಲ. ಕೆಲವು ಒಳನೋಟ ಗಳನ್ನು ಬೀರಬಲ್ಲೆ; ಬೀರಿದ್ದೇನೆ. ಆದರೆ ಸಮಾಜವಿಜ್ಞಾನವನ್ನೇ ಅಧ್ಯಯನ ಮಾಡಿ ಆ ತಾತ್ವಿಕ ಚೌಕಟ್ಟಿನಲ್ಲಿ ವಿಚಾರ ಮಾಡುವವರಿಗೆ ಮತ್ತು ವ್ಯಾಖ್ಯಾನಿಸುವವರಿಗೆ ಈ ನನ್ನ ಗ್ರಂಥ ಉತ್ತಮ ಸಾಮಗ್ರಿಯನ್ನು ಒದಗಿಸುತ್ತದೆ.

"ಮಧ್ಯಕಾಲೀನ" ಎಂಬುದು ಕರ್ನಾಟಕಕ್ಕೆ, ಸಾಹಿತ್ಯಕ್ಕೆ ಸಂಬಂಧಿಸಿದಂತೆ ತೀರ ಸ್ಥೂಲವಾದ ಗಡಿ. ಪ್ರಾಚೀನ ಸಾಹಿತ್ಯದ ಭಾಷೆ ಹಳಗನ್ನಡ ಮತ್ತು ಅಲ್ಲಿನ ಪ್ರಮುಖ ಪ್ರಕಾರ ಚಂಪೂ; ಅದರ ಕಾಲಾವಧಿ ಕ್ರಿ.ಶ. 850ರಿಂದ ಕ್ರಿ.ಶ. 1100 ಎಂದು ಸ್ಥೂಲ ವಾಗಿ ಹೇಳಬಹುದು. ಮಧ್ಯಕಾಲೀನ ಎಂಬುದರ ಭಾಷೆ ನಡುಗನ್ನಡ ಮತ್ತು ಪ್ರಮುಖ

ಸಾಹಿತ್ಯ ಪ್ರಕಾರಗಳೆಂದರೆ ವಚನ, ರಗಳೆ, ಷಟ್ಪದಿ ಮತ್ತು ಸಾಂಗತ್ಯ. ಇದರ ಕಾಲಾವಧಿ ಮಾತ್ರ ತೀರ ದೀರ್ಘ–ಕ್ರಿ.ಶ. 1100ರಿಂದ ಮುದ್ರಣನವರೆಗೆ (ಹತ್ತೊಂಬತ್ತನೇ ಶತಮಾನದ ಅಂತ್ಯದ ವರೆಗೆ) ಅದನ್ನು ಎಳೆಯಬಹುದು. ಭಾಷೆಯ ದೃಷ್ಟಿಯಿಂದ ಹೇಳುವುದಾದರೆ "ನಡುಗನ್ನಡ" ವೆಂಬುದೆ ಇಲ್ಲ: ಹಳಗನ್ನಡವು ಹೊಸಗನ್ನಡ ವಾಗುವುದರ ಸಂಕ್ರಮಣಾವಸ್ಥೆ ಅದು–ಯಾವುದನ್ನು ನಾವು "ನಡುಗನ್ನಡ"ವೆಂದು ಕರೆಯುತ್ತೇವೆಯೋ (ಉದಾ: ವಚನಗಳ ಭಾಷೆ) ಅದು ಆಗಲೇ ಹೊಸಗನ್ನಡವೇ ಆಗಿದೆ. ಸ್ಥೂಲವಾಗಿ ಏಳು ಶತಮಾನಗಳ ಮಧ್ಯಕಾಲೀನ ಸಾಹಿತ್ಯದಲ್ಲಿ ಮುಖ್ಯವಾಗಿ ಅದರ ಪೂರ್ವ ಭಾಗವನ್ನು ನಾನು ನನ್ನ ಉಪನ್ಯಾಸಗಳಿಗೆ ಆಧಾರವಾಗಿಟ್ಟುಕೊಂಡಿದ್ದೇನೆ. ಕ್ರಿ.ಶ. 1100ರಿಂದ ಕ್ರಿ.ಶ. 1400ರ ವರೆಗಿನ ಸಾಹಿತ್ಯವು ಅಸ್ಪೃಶ್ಯರು ಮತ್ತು ಅಸ್ಪೃಶ್ಯತೆಯನ್ನು ಕುರಿತಂತೆ ಸಮೃದ್ಧವಾದ ಸಾಮಗ್ರಿಯನ್ನು ಒದಗಿಸುತ್ತದೆ. ಆ ಅವಧಿಯಲ್ಲಿ ನಡೆದುಹೋದ ಲಿಂಗಾಯತ ಸಮಾಜೋಧಾರ್ಮಿಕ ಚಳವಳಿ, ಅದರ ಅಂಗವಾಗಿ ಅಥವಾ ಫಲವಾಗಿ ಅಥವಾ ಅದಕ್ಕೆ ಸಾಧನವಾಗಿ ಬಂದ ಕನ್ನಡ ವಾಙ್ಮಯವು ಕೆಳವರ್ಗದ ಜನರ ಬದುಕಿನ ಕೆಲವು ಮುಖಗಳನ್ನು ಅನನ್ಯವಾದ ರೀತಿಯಲ್ಲಿ ಪರಿಚಯಮಾಡಿಕೊಡುತ್ತದೆ. ವಚನವಾಙ್ಮಯದಿಂದ ಪ್ರೇರಿತವಾಗಿ ಮುಂದೆ ಬಂದ ಲಿಂಗಾಯತ ಸಾಹಿತ್ಯದಲ್ಲೂ ಅದೇ ಬಗೆಯ ಸಾಮಗ್ರಿ ಮೊರಕುತ್ತದೆ. ಬಿಡಿ ಬಿಡಿಯಾಗಿ ಮೊರಕುವ ಸಂಗತಿಗಳನ್ನು ಜೋಡಿಸಿ ವಾಖ್ಯಾನಿಸಿದಾಗ ನಮಗೆ ಸಾಕಷ್ಟು ಸಮಗ್ರವಾದ ಚಿತ್ರವೇ ಮೊರಕುತ್ತದೆ. ಭಾರತೀಯ ಇತಿಹಾಸದ ಪುನಾರಚನೆಗೆ ಇರುವ ಏಕೈಕ ಮಾರ್ಗವೆಂದರೆ ಇಮೊಂದೇ : ಲಭ್ಯವಾಗುವ ಬಿಡಿ ಬಿಡಿ ಸಂಗತಿಗಳ ಸಹಾಯದಿಂದ ಇಡಿಯಾದ ಚಿತ್ರವನ್ನು ಪುನಾರಚಿಸುವುದು.

ಮಧ್ಯಕಾಲೀನ ಕನ್ನಡ ಸಾಹಿತ್ಯವು ಅದಕ್ಕಿಂತ ಹಿಂದಿನ ಸಾಹಿತ್ಯಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಋಣಿಯೇ ಆಗಿದೆ. ಕ್ರಿ.ಶ. 1100ರಲ್ಲಿದ್ದ ಕೊಂಡಗುಳಿ ಕೇಶಿರಾಜನು–ಇವನು ಮೊದಲ ವೀರಶೈವ ಕವಿ–'ಭವಿಗಳ' ಕಾವ್ಯಗಳನ್ನು ಓದಬಾರದೆಂದು ನಿಯಮಿಸಿದ್ದರೂ[1], ಹಳಗನ್ನಡ ಭಾಷೆಯ ಮೇಲೆ ಪ್ರಭುತ್ವವಾಗಲಿ ವೃತ್ತ ಕಂದಗಳ ಧಾಟಿಯಾಗಲಿ ಅವನಿಗೆ ಸಿದ್ಧಿಸಿರಬೇಕಾದರೆ ಅವನು ತನಗಿಂತ ಹಿಂದಿನ ಜೈನ ಬ್ರಾಹ್ಮಣ ಕವಿಗಳ ಕೃತಿಗಳನ್ನೇ ಅಭ್ಯಸಿಸಿರಬೇಕಲ್ಲವೇ? (ಅವನಿಗಿಂತ ಹಿಂದಿನ ಲಿಂಗಾಯತ ಸಾಹಿತ್ಯವು ಮೊರಕಿಲ್ಲ, ಅಂತಹ ಸಾಹಿತ್ಯವನ್ನು ರಚಿಸಿರುವ ಕವಿಗಳ ಹೆಸರುಗಳೂ ನಮಗೆ ತಿಳಿದಿಲ್ಲ). ವಚನ ಸಾಹಿತ್ಯಕ್ಕೂ ಚಂಪೂ ಸಾಹಿತ್ಯಕ್ಕೂ ವಸ್ತು, ಭಾಷೆ, ಘೋರಣೆ, ಶೈಲಿಗಳಲ್ಲಿ ಏನೂ ಸಂಬಂಧವಿಲ್ಲವೆಂಬಂತೆ ತೋರಿದರೂ

1. ಕೊಂಡಗುಳಿ ಕೇಶಿರಾಜನ ಕೃತಿಗಳು (ಸಂ: ಎಂ.ಎಂ. ಕಲಬುರ್ಗಿ, ಹುಬ್ಬಳ್ಳಿ. 1978) ಪು. 69. ಈ ಕೃತಿಯಲ್ಲಿ ಶೀಲ ಮಹತ್ವದ ಕಂದ, ಪದ್ಯ, 68 – "ಭವಿನುಡಿಯೇನುಂ ಕೇಳದೆ । ಭವಿ ಹೇಳಿದ ಕಬ್ಬಗೇಳ್ವ ಕಿವಿಯಂ ತಾಳದೆ। ಭವಘೋರದಲ್ಲಿ ಬೀಳದೆ। ಭವಿಯತ್ತೆಳಸದಿರೆ ನಾಲ್ವತ್ತಾಱನೆಯದುಂ."

ವಚನಕಾರರು ತಮಗಿಂತ ಹಿಂದಿನ ಸಾಹಿತ್ಯವನ್ನು ಓದಿಯೂ ಆ ಪ್ರಭಾವದಿಂದ ಸಂಪೂರ್ಣ ಮುಕ್ತರಾಗಿ ತಮ್ಮ ಕೃತಿಗಳನ್ನು ರಚಿಸಿದರೆಂದು ತಿಳಿಯಬೇಕೇ ಹೊರತು ಅವರು ಜೈನಸಾಹಿತ್ಯವನ್ನೇ ಅಭ್ಯಸಿಸಿರಲಿಲ್ಲವೆಂದು ತಿಳಿಯುವುದು ತಪ್ಪಾಗುತ್ತದೆ. ಬಸವಣ್ಣನ ಹಲವು ವಚನಗಳಲ್ಲಿ ನಯಸೇನನ "ಧರ್ಮಾಮೃತ"ದ (ಕ್ರಿ.ಶ. 1112) ಪ್ರಭಾವವನ್ನು ನಾನು ಬೇರೆ ಕಡೆ ತೋರಿಸಿ ಕೊಟ್ಟಿದ್ದೇನೆ.[2] ಮಧ್ಯಕಾಲೀನ ಸಾಹಿತ್ಯ ವನ್ನು ಕುರಿತು ಮಾತನಾಡುವಾಗ ಅದಕ್ಕೆ ಹಿಂದಿನ ಕನ್ನಡ ಪರಂಪರೆಯನ್ನು ಉಪೇಕ್ಷಿಸಲು ಸಾಧ್ಯವಿಲ್ಲ. ಈ ಉಪನ್ಯಾಸಗಳಲ್ಲಿ ಮಧ್ಯಕಾಲೀನ ಯುಗದ ಸಾಹಿತ್ಯ ವನ್ನೂ ಜನಜೀವನವನ್ನೂ ಅರ್ಥೈಸಿಕೊಳ್ಳುವುದರತ್ತ ಒತ್ತು ಇರುವುದರಿಂದ, ಮತ್ತು ಕ್ರಿ.ಶ. 1100–1400 ಈ ಅವಧಿಯ ಅಸ್ಪೃಶ್ಯರ ಬದುಕು ಈ ಅವಧಿಯ ಹಿಂದಿನ ಬದುಕಿನ ಮುಂದುವರಿದ ರೂಪವೇ ಆಗಿರುವುದರಿಂದ ಅನಿವಾರ್ಯವಾಗಿ ಕ್ರಿ.ಶ. 1100ಕ್ಕಿಂತ ಹಿಂದಿನ ಚಂಪೂ ಸಾಹಿತ್ಯವನ್ನು ನಾನು ಹಿನ್ನೆಲೆಯ ಸಾಮಗ್ರಿಗಾಗಿ ಬಳಸಿ ಕೊಂಡಿದ್ದೇನೆ. ಅಲ್ಲಿ ಮೊರಕುವ ಸಾಮಗ್ರಿ ಬಹಳ ಮಿತವಾದುದಾದರೂ "ಧರ್ಮಾಮೃತ"ದಲ್ಲಿ ದೊರಕುವ ಮಾಹಿತಿ ನಗಣ್ಯವಾದುದೇನೂ ಅಲ್ಲ.

ಬಹಳ ನಿರಾಸೆ ಹುಟ್ಟಿಸುವ ಆಕರವೆಂದರೆ ಶಾಸನಗಳು. ಕನ್ನಡಿಗರ ಬದುಕಿನ ವಿವಿಧ ಮುಖಗಳನ್ನು ಸವಿಸ್ತರವಾಗಿ ಬಿಚ್ಚಿ ತೋರುವ ಶಾಸನಗಳಲ್ಲಿ ಅಸ್ಪೃಶ್ಯರ ಬಗೆಗಿನ ಸಾಮಗ್ರಿ ತೀರಾ ಬಡಕಲೆಂದರೆ ಅದು ತಪ್ಪಾಗದು. ಇಲ್ಲವೇ ಇಲ್ಲವೆಂದರೂ ಸರಿಯೇ. ದಾನ, ದೇವಾಲಯ ನಿರ್ಮಾಣ, ಕ್ಷಾತ್ರ ತೇಜಸ್ಸು, ಕೀರ್ತಿ ಪ್ರಶಸ್ತಿ, ಸಾಮಾಜಿಕ ಕಾರ್ಯ ಈ ಸಮಾಜೋ ಸಾಂಸ್ಕೃತಿಕ ಚಟುವಟಿಕೆಗಳೆಲ್ಲ ಮೇಲ್ಜಾತಿಯವ ರಿಗೆ ಮೀಸಲಾಗಿರುವಾಗ ಮತ್ತು ಅಂತಹ ಸಂಗತಿಗಳನ್ನೇ ಶಾಸನಗಳು ಒಳಗೊಂಡಿರು ವಾಗ ಅಸ್ಪೃಶ್ಯರ ನೇರವಾದ ಉಲ್ಲೇಖಗಳನ್ನು ಶಾಸಗಳಲ್ಲಿ ನಿರೀಕ್ಷಿಸುವಂತಿಲ್ಲ. ಅವರ ಉಲ್ಲೇಖಗಳ ಅಭಾವವೇ ಅವರ ಸಾಮಾಜಿಕ ಸ್ಥಿತಿಗತಿಗಳಿಗೆ ಮೌನವಕ್ತಾರನಂತಿದೆ. ಆದರೂ, ತೀರ ವಿರಳವಾಗಿಯಾದರೂ ಶಾಸನಗಳಲ್ಲಿ ಬರುವ ಸಂಗತಿಗಳನ್ನು ಅಲ್ಲಲ್ಲಿ ಬಳಸಿಕೊಂಡಿದ್ದೇನೆ. ಅಸ್ಪೃಶ್ಯರ ಬಗ್ಗೆ ನಮಗೆ ಅತಿ ಹೆಚ್ಚು ಮಾಹಿತಿ ದೊರಕುವುದು ಪ್ರಾಚೀನ ಲಿಂಗಾಯತ ಸಾಹಿತ್ಯದಲ್ಲಿ, ಅತಿ ಕಡಮೆ ಮಾಹಿತಿ ಮೊರಕುವುದು ಶಾಸನ ವಾಙ್ಮಯದಲ್ಲಿ ಎನ್ನುವುದು ಅತ್ಯಂತ ಧ್ವನಿಪೂರ್ಣವಾಗಿದೆ.

ಇಷ್ಟು ಮೂಲ ಅಕರಗಳ ವಿಷಯವಾಯ್ತು. ಇಲ್ಲಿ ಮೊರಕುವ ಮಾಹಿತಿ ಯನ್ನು ವಿಶ್ಲೇಷಿಸಿ, ದಲಿತರ ಬದುಕು, ಅವರ ಸಾಮಾಜಿಕ ಆರ್ಥಿಕ ಸಮಸ್ಯೆಗಳು, ಅವರ ಬಗ್ಗೆ ಇದ್ದ ಸಾಂಪ್ರದಾಯಕ ಧೋರಣೆ, ಈ ಹಿನ್ನೆಲೆಯಲ್ಲಿ ಲಿಂಗಾಯತ ಸಾಮಾಜಿಕ ಸುಧಾರಕರು ಅಸ್ಪೃಶ್ಯರ ಸಮಸ್ಯೆಯನ್ನು ಕೈಗೆತ್ತಿಕೊಂಡ ರೀತಿ, ಅದಕ್ಕೆ

---

2. ಎಂ. ಚಿದಾನಂದಮೂರ್ತಿ : 'ನಯಸೇನ, ಕನ್ನಡದ ಒಬ್ಬ ಜಾನಪದ ಚಂಪೂ ಕವಿ.' ಸಂಶೋಧನ ತರಂಗ. ಸಂಪುಟ 2, ಬೆಂಗಳೂರು. 1970 ಪು. 95.

ಒದಗಿದ ಪ್ರಚೋದನೆ, ಸಾಮಾಜಿಕ ಸುಧಾರಣೆಯ ಫಲ, ಸಾಮಾಜಿಕ ಚಳವಳಿ ನಡೆದ ಮೇಲೆ ಬಂದ ಜನ ಅಸ್ಪೃಶ್ಯರನ್ನು ಕಂಡ ರೀತಿ, ಅಸ್ಪೃಶ್ಯ ವಚನಕಾರ ವಚನ ಕಾರ್ತಿಯರು ತಮ್ಮನ್ನು ತಾವು ಅಭಿವ್ಯಕ್ತಿಸಿಕೊಂಡ ಬಗೆ ಇವುಗಳ ಒಟ್ಟು ಚಿತ್ರವನ್ನು ಕೊಡುವುದು ಈ ಉಪನ್ಯಾಸಗಳ ಉದ್ದೇಶ.

ಮೂಲ ಆಕರಗಳ ಸಾಮಗ್ರಿಯನ್ನು ಒಟ್ಟು ಭಾರತೀಯ ಚೌಕಟ್ಟಿನಲ್ಲಿ ಇಟ್ಟು ನೋಡಲು ಯತ್ನಿಸಿದ್ದೇನೆ, ಗಾಂಧಿ, ಈಶ್ವರನ್, ಶ್ರೀನಿವಾಸ್, ಘುರ್ಯೆ, ರಾಮಾನುಜನ್, ವಿದ್ಯಾರ್ಥಿ ಮತ್ತು ಮಿಶ್ರ, ಬ್ರಿಗ್ಸ್, ಡ್ಯುಮಾಂಟ್, ಹಾರ್ಪರ್, ಬಾರ್ಬರ್, ಅಂಬೇಡ್ಕರ್, ಮಮ್ತಾಜ್ ಆಲಿಖಾನ್ ಮೊದಲಾದ ವಿದ್ವಾಂಸರು ಅಸ್ಪೃಶ್ಯತೆಯ ಸಮಸ್ಯೆ ಬಗ್ಗೆ ಯೋಚಿಸಿ ಹೊರ ತಂದಿರುವ ಬರಹಗಳನ್ನು ಧಾರಾಳವಾಗಿ ಬಳಸಿಕೊಂಡಿದ್ದೇನೆ. ಅವರ ಬರಹಗಳು–ಅವನ್ನು ಆನುಷಂಗಿಕ ಸಾಮಗ್ರಿಯೆನ್ನಬಹುದು–ಕರ್ನಾಟಕದ ಪರಿಸರದ ಎಷ್ಟೋ ಸಂಗತಿಗಳನ್ನು ವ್ಯಾಖ್ಯಾನಿಸಲು ಸಹಾಯಮಾಡಿವೆ. ಐತಿಹಾಸಿಕ ವಾಗಿ ನೋಡಿದರೆ ಕರ್ನಾಟಕದಲ್ಲಿ ವಚನಕಾರರ ಕಾಲದಲ್ಲಿ ನಡೆದ ಚಳವಳಿ ಭಾರತದ ಮಟ್ಟಿಗೆ ಅಪೂರ್ವವಾದುದು. ದುಃಖದ ಸಂಗತಿಯೆಂದರೆ ನಮ್ಮ ಸಾಹಿತ್ಯಜ್ಞ ರಾಗಲಿ ಸಮಾಜಶಾಸ್ತ್ರಜ್ಞರಾಗಲಿ ಕನ್ನಡದಲ್ಲಿ ಹುದುಗಿರುವ ಸಾಮಗ್ರಿ ಸಂಪತ್ತನ್ನು ಇಂಗ್ಲಿಷ್ ವಾಚಕರಿಗೆ ಕೊಡುವಲ್ಲಿ ವಿಫಲರಾಗಿರುವುದರಿಂದ ಭಾರತೀಯ ಸಮಾಜದ ಚರಿತ್ರೆಯನ್ನು ಬರೆಯುವವರು ಕರ್ನಾಟಕವನ್ನು ಇಲ್ಲವೇ ಉಪೇಕ್ಷೆ ಮಾಡುತ್ತಾರೆ, ಅಥವಾ ಬಹಳ ತೆಳು ರೀತಿಯಲ್ಲಿ ಸೂಚಿಸಿ ಮುಂದೆ ಹೋಗುತ್ತಾರೆ. ಅಸ್ಪೃಶ್ಯತೆಗೆ ಸಂಬಂಧಿಸಿದ ಬಹುತೇಕ ಸಾಮಗ್ರಿಯನ್ನು ಒಟ್ಟಿಗೆ ತಂದುಕೊಟ್ಟು ವ್ಯಾಖ್ಯಾನಿಸಿರುವ ಈ ಕೃತಿ ಮುಂದಿನ ಸಂಶೋಧಕರಿಗೆ ಪ್ರಚೋದಕವಾಗಲಿ ಎಂದು ನಾನು ಹಾರೈಸು ತ್ತೇನೆ (ಕನ್ನಡದಲ್ಲೂ ಆ ಬಗೆಯ ಕೃತಿ ಇದೇ ಮೊದಲನೆಯದು).

ಇಲ್ಲಿಯೇ ಒಂದು ಮಾತನ್ನು ಹೇಳುವುದು ಅಗತ್ಯ. ಕ್ರಿ.ಶ. 1400 ಎಂಬುದು ಒಂದು ಅನುಕೂಲದ ಈಚಿನ ಮಿತಿಯಾದರೂ ಅದಕ್ಕೂ ಈಚಿನ ಕೆಲವು ಕೃತಿಗಳನ್ನು ನಾನು ಬಳಸಿಕೊಂಡಿದ್ದೇನೆ ಮತ್ತು ಅಲ್ಲಿಂದ ಈಚೆಗೆ ಆಧುನಿಕ ಕಾಲದವರೆಗೆ ಅಸ್ಪೃಶ್ಯರ ಬದುಕಿನಲ್ಲಿ ಯಾವುದೇ ಹೇಳಿಕೊಳ್ಳುವಂತಹ ಬದಲಾವಣೆಯೇನೂ ಕಾಣಿಸುವುದಿಲ್ಲವಾದುದರಿಂದ, ಇಲ್ಲಿ ನಾನು ಕೊಡಲಿರುವ ಚಿತ್ರ ಒಂದು ರೀತಿಯಿಂದ ಕರ್ನಾಟಕದ ಇತಿಹಾಸ ಯುಗದಲ್ಲಿ ಹೆಚ್ಚು ಕಡಮೆ ಗಾಂಧೀಜಿಯವರ ಕಾಲದವ ರೆಗಿನ ಅಸ್ಪೃಶ್ಯರ ಜೀವನವನ್ನು ನಮಗೆ ತಿಳಿಸಿಕೊಡುತ್ತದೆ ಎಂದೂ ಹೇಳಬಹುದು. ಕ್ರಿ.ಶ. 1400ರಿಂದ ಹತ್ತೊಂಬತ್ತನೇ ಶತಕದವರೆಗಿನ ಸಾಹಿತ್ಯದಲ್ಲಿ ಅಸ್ಪೃಶ್ಯರ ಬಗ್ಗೆ ಸಿಗುವ ಮಾಹಿತಿಯನ್ನು ಅನುಬಂಧವಾಗಿ ಕೊಟ್ಟಿರುವುದರಿಂದ ಒಂದು ರೀತಿಯಲ್ಲಿ ಈ ಕೃತಿ ಆಧುನಿಕ ಪೂರ್ವ ಯುಗದ ಕರ್ನಾಟಕದ ಅಸ್ಪೃಶ್ಯರ ಇತಿಹಾಸವನ್ನು ಸಮಗ್ರವಾಗಿ ದಾಖಲು ಮಾಡಿದೆಯೆಂದೂ ಇಲ್ಲಿ ಹೇಳಬೇಕಾಗಿದೆ.

## ವರ್ಣ, ಜಾತಿ

ಅಸ್ಪೃಶ್ಯತೆಯನ್ನು ಅರ್ಥ ಮಾಡಿಕೊಳ್ಳಲು ಅದರ ಐತಿಹಾಸಿಕ ಉಗಮವನ್ನು ತಿಳಿದುಕೊಳ್ಳುವುದು ಅಗತ್ಯ. ಯಾವುದೇ ಸಾಮಾಜಿಕ ವ್ಯವಸ್ಥೆಯ ಉಗಮದ ಬಗ್ಗೆ ಖಚಿತವಾಗಿ ಹೇಳಲು ಸಾಧ್ಯವಿಲ್ಲದಿದ್ದರೂ ಸಮಾಜವಿಜ್ಞಾನಿಗಳಿಂದ ಈಗ ಬಹು ಮಟ್ಟಿಗೆ ಅಂಗೀಕೃತವಾಗಿರುವ ಸಂಗತಿಗಳನ್ನೇ ನೋಡೋಣ.[3]

ಭಾರತೀಯ ಸಾಮಾಜಿಕ ಇತಿಹಾಸದ ಆರಂಭದ ಯುಗದ ಚಿತ್ರಣಕ್ಕೆ ಕ್ರಿ.ಪೂ. 1500–1000 ಅವಧಿಯ ವೇದಗಳೇ ನಮಗೆ ಪ್ರಮುಖ ಆಕರ. ವೇದಗಳಲ್ಲಿ ಕಂಡು ಬರುವ ವರ್ಣ ವ್ಯವಸ್ಥೆ ಮುಂದೆ ಜಾತಿಗಳಿಗೆ ಎಡೆಗೊಟ್ಟಿತು ಎಂದು ಸಾಮಾನ್ಯವಾಗಿ ಎಲ್ಲ ವಿದ್ವಾಂಸರ ನಂಬಿಕೆ. ಋಗ್ವೇದದಲ್ಲಿ ಬ್ರಾಹ್ಮಣ, ಕ್ಷತ್ರಿಯ ವರ್ಣಗಳ ಉಲ್ಲೇಖವಿದೆ ಮತ್ತು ಋಗ್ವೇದಕ್ಕೆ ಬಳಿಕ ಸೇರ್ಪಡೆಯಾಯಿತೆನ್ನಲಾದ ಪುರುಷಸೂಕ್ತದಲ್ಲಿ ವೈಶ್ಯ, ಶೂದ್ರ ವರ್ಣಗಳ ಉಲ್ಲೇಖವಿದೆ. ಮುಂದಿನ ವಾಙ್ಮಯದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬುವು ಸಾಂಪ್ರದಾಯಕ 'ವರ್ಣ'ಗಳೆಂದು ಭಾವಿತವಾದರೂ ಋಗ್ವೇದದಲ್ಲಿ 'ವರ್ಣ' ಎನ್ನುವ ಮಾತು ಈ ನಾಲ್ಕು ಗುಂಪುಗಳಿಗೆ ಅನ್ವಯವಾಗುವಂತೆ ಬಳಕೆ ಯಾಗಿಲ್ಲ. ಪುರುಷಸೂಕ್ತದ ಕಾಲಕ್ಕೆ ಸಮಾಜವು ನಾಲ್ಕು ಗುಂಪುಗಳಂತೆ ವಿಭಾಗ ಗೊಂಡಿತ್ತೆಂಬುದು ಸ್ಪಷ್ಟ–ಬ್ರಾಹ್ಮಣ (ಕವಿ, ಪುರೋಹಿತ, ವಿದ್ವಾಂಸ), ಕ್ಷತ್ರಿಯ (ಆಳುವಾತ, ಯುದ್ಧದಲ್ಲಿ ಭಾಗಿ), ವೈಶ್ಯ (ವ್ಯವಸಾಯ ವ್ಯಾಪಾರ ಇತರ ಕರ್ಮಗಳನ್ನು ಮಾಡುವಾತ). ಶೂದ್ರ (ಸೇವಾಕಾರ್ಯ ಮಾಡುವಾತ). ತೈತ್ತಿರೀಯ ಸಂಹಿತೆಯಲ್ಲಿ ಈ ನಾಲ್ಕು ಗುಂಪುಗಳು ಸೃಷ್ಟಿಕರ್ತನ ನಾಲ್ಕು ಅಂಗಗಳಿಂದ ಹುಟ್ಟಿದುದನ್ನು ಹೇಳಿದೆ; ಮುಖದಿಂದ ಹುಟ್ಟಿದ ಬ್ರಾಹ್ಮಣರು ಮುಖ್ಯರು, ಬಾಹುವಿನಿಂದ ಹುಟ್ಟಿದ ರಾಜನ್ಯರು ಶಕ್ತರು, ಉದರದಿಂದ ಹುಟ್ಟಿದ ವೈಶ್ಯರು 'ತಿನ್ನಲ್ಪಡಬೇಕಾದವರು' (ಎಂದರೆ, ಹೆಚ್ಚು ತೆರಿಗೆ ಹಾಕಿ ವಸೂಲು ಮಾಡಬೇಕಾದವರು), ಕಾಲಿಂದ ಹುಟ್ಟಿದ ಶೂದ್ರರು ಇತರರನ್ನು ಹೊರಬೇಕಾದವರು–ಎಂದರೆ ಆಯಾ ಗುಂಪಿಗೆ ಕರ್ತವ್ಯಗಳಿಗೆ ಒಂದು ದೈವೀಕಾರಣವನ್ನು ಮೇಲಿನ ವಿಶ್ವಪುರುಷನ ಅಂಗಗಳ ಪ್ರತಿಮೆ ಒದಗಿಸುತ್ತದೆ.

ಋಗ್ವೇದದಲ್ಲಿ 'ವರ್ಣ' ಪದವು ಬಣ್ಣ ಎಂಬರ್ಥದಲ್ಲಿ 'ಆರ್ಯ' ಮತ್ತು 'ದಾಸ' ವರ್ಗಗಳನ್ನು ಬೇರ್ಪಡಿಸಿ ಹೇಳುವುದಕ್ಕೆ ಬಳಕೆಯಾಗಿದೆ. ಆರ್ಯರ 'ವರ್ಣ'(ಬಣ್ಣ)ವು ದಸ್ಯು(ದಾಸ)ಗಳ 'ವರ್ಣ'(ಬಣ್ಣ)ಕ್ಕಿಂತ ಉತ್ಕೃಷ್ಟವೆಂಬ ಸೂಚನೆಗಳು ಅಲ್ಲಿವೆ. ದಾಸ ಅಥವಾ ದಸ್ಯುಗಳು ಅನಾರ್ಯರಾಗಿದ್ದು ಆರ್ಯರು ಸೋಲಿಸಿದ ಮೂಲನಿವಾಸಿಗಳಾಗಿರ

---

3. ಈ ಭಾಗವನ್ನು ಬರೆಯುವಲ್ಲಿ ಕೆಳಗಿನ ಗ್ರಂಥಗಳ ಸಹಾಯವನ್ನು ಪಡೆದಿದ್ದೇನೆ.

G.S. Ghurye : Caste and Race in India. (Bombay. 1969); P.V. Kane : History of Dharmashastra, Vol. V. Part ii (Poona, 1962); N.K. Dutt : Origin and Growth of Caste in India; Louis Dumont : Homo Hierarchicus (Delhi. 1970).

ಬಹುದು. ಶತಪಥ ಬ್ರಾಹ್ಮಣದಲ್ಲಿ ಮೊತ್ತ ಮೊದಲು ಬ್ರಾಹ್ಮಣ ಇತ್ಯಾದಿ ನಾಲ್ಕು ವರ್ಗಗಳನ್ನು ನಾಲ್ಕು ವರ್ಣಗಳೆಂದು ಹೇಳಿರುವುದಲ್ಲದೆ ಆ ನಾಲ್ಕು ವರ್ಣಗಳವರ ಸಮಾಧಿಗಳು ಬೇರೆ ಬೇರೆ ಗಾತ್ರದವಾಗಿರಬೇಕೆಂದೂ ಅವರ ಸಂಬೋಧನಾ ವಿಧಾನಗಳೂ ಬೇರೆಯೆಂದೂ ಹೇಳಿದೆ. ಇವರಲ್ಲಿ ಬ್ರಾಹ್ಮಣ ಶ್ರೇಷ್ಠ: ರಾಜ ಆಳುವುದು ಬ್ರಾಹ್ಮಣ ಕೊಟ್ಟ ಅಧಿಕಾರದಿಂದ. ಶತಪಥಬ್ರಾಹ್ಮಣದ ಪ್ರಕಾರ–ಯಜುರ್ವೇದವೂ ಅದಕ್ಕೆ ಧ್ವನಿಗೂಡಿಸುತ್ತದೆ–ಬ್ರಾಹ್ಮಣನ ಕೊಲೆಯೊಂದೇ ಗಂಭೀರವಾಗಿ ಗಣಿಸಬೇಕಾದ ಕೊಲೆ. ಬ್ರಾಹ್ಮಣ ಅಬ್ರಾಹ್ಮಣರಿಗೆ ವಿವಾದವೊಂದು ಉಂಟಾದರೆ ನ್ಯಾಯ ಬ್ರಾಹ್ಮಣನದೇ. ಅವನ ಕೆಲಸ ಮುಖ್ಯವಾಗಿ ಪೌರೋಹಿತ್ಯ ಮತ್ತು ಅಧ್ಯಾಪನ. ಬ್ರಹ್ಮಚರ್ಯ ಮತ್ತು ಸತ್ಯ ಅವನ ಮುಖ್ಯ ಗುಣಗಳು. ವಿದ್ಯೆ ವಿರಳವಾಗಿ ಬ್ರಾಹ್ಮಣೇತರರಿಗೂ ಲಭ್ಯವಾಗಬಹುದಿದ್ದರೂ ಪೌರೋಹಿತ್ಯ ಮಾತ್ರ ವಂಶಪಾರಂಪರ್ಯವಾಗಿತ್ತು. ಕ್ಷತ್ರಿಯರು ಆಡಳಿತಗಾರರಾಗಿದ್ದರೂ ಕೊಳಲುವಾದಕರಾಗಿದ್ದ ಮತ್ತು ದಾರ್ಶನಿಕರಾಗಿದ್ದ ಕೆಲವು ದೊರೆಗಳ ಹೆಸರುಗಳೂ ಲಭ್ಯವಾಗುತ್ತವೆ. ವೈಶ್ಯರು ಸಾಮಾನ್ಯ ಪ್ರಜೆಗಳು. ಶೂದ್ರ–ಋಗ್ವೇದದಲ್ಲಿ ಇವನ ಹೆಸರು ಒಮ್ಮೆ ಮಾತ್ರ ಗೋಚರ–ವಂಶಪಾರಂಪರ್ಯ ಸೇವಕ, ದಾಸ. ಅವನನ್ನು "ಯಾವಾಗ ಬೇಕಾದರೂ ಹೊರದೂಡಬಹುದು, ಇಷ್ಟ ಬಂದಾಗ ಕೊಲ್ಲಬಹುದು". ಪಂಚವಿಂಶತಿ ಬ್ರಾಹ್ಮಣದ ಪ್ರಕಾರ ಶೂದ್ರನು ಒಂದು ವೇಳೆ ಶ್ರೀಮಂತನಾಗಿದ್ದರೂ ಅವನು ಇನ್ನೊಬ್ಬನ ಸೇವಕನಾಗಿ ಮಾತ್ರ ಇರಬೇಕು; ತನ್ನ ಯಜಮಾನನ ಕಾಲನ್ನು ತೊಳೆಯುವುದು ಅವನ ಕಾರ್ಯ. ಕೆಲವು ಶೂದ್ರರು ರಾಜರ ಮಂತ್ರಿಗಳಾಗಿದ್ದರೂ ಒಟ್ಟಾರೆ ಅವರು ಯಜ್ಞಕ್ಕೂ ಅನರ್ಹರು, ಯಜ್ಞಶಾಲೆಯಲ್ಲಿರಲೂ ಅನರ್ಹರು. ಶತಪಥಬ್ರಾಹ್ಮಣದ ಪ್ರಕಾರ ಶೂದ್ರ ಎಂಬುದು ಅಸತ್ಯಕ್ಕೆ ಇನ್ನೊಂದು ಹೆಸರು. ಇನ್ನೊಂದು ಬ್ರಾಹ್ಮಣದ ಪ್ರಕಾರ ಶೂದ್ರಹೆಣ್ಣು ಇರುವುದು ಭೋಗಕ್ಕಾಗಿಯೇ ಹೊರತು ಅವಳಿಂದ ಏನೂ ಉದಾತ್ತ ಕಾರ್ಯ ಸಾಧ್ಯವಿಲ್ಲ.

ಎಂದರೆ, ವರ್ಣಗಳಲ್ಲಿ ಉತ್ತಮಿಕೆಯ ತಾರತಮ್ಯ ಕ್ರಿ. ಪೂ. 900ರ ಹೊತ್ತಿಗೆ ಸ್ಪಷ್ಟವಾಗಿ ಸ್ಥಾಪಿತವಾಗಿದ್ದಿತು. ಎಲ್ಲಕ್ಕಿಂತ ಮೇಲಿನದು ಬ್ರಾಹ್ಮಣ ವರ್ಣ; ಕೆಳಗಿನದು ಶೂದ್ರವರ್ಣ. ಕಾಣೆಯವರು ಭಾವಿಸುವಂತೆ, ವೇದಕಾಲದಲ್ಲಿ ನಾಲ್ಕು ವರ್ಣಗಳಲ್ಲೂ ಸಹಭೋಜನ ಸಹಮಿಶ್ರಣಗಳಿಗೆ ನಿಷೇಧವಿರಲಿಲ್ಲ. ಮುಂದೆ ನಾಲ್ಕು ವರ್ಣಗಳೂ ಘನೀಭೂತವಾಗುತ್ತ ಹೋದಂತೆ ಅವುಗಳ ಮಧ್ಯೆ ಇದ್ದ ಪರಸ್ಪರ ಸಂಬಂಧಗಳು ತಪ್ಪಿ ಹೋದವು.

ಋಗ್ವೇದದಲ್ಲಿ ಜಾತಿಗಳ ಉಲ್ಲೇಖವಿಲ್ಲವಾದರೂ ಬಡಗಿ, ಚಮ್ಮಾರ, ನಾಯಕ, ವೈದ್ಯ, ಅಕ್ಕಸಾಲಿ, ವ್ಯಾಪಾರಿ, ರಥಕಾರ ಮುಂತಾದ ವೃತ್ತಿಕಾರರ ಹೆಸರಿವೆ. ಇವುಗಳಲ್ಲಿ ಯಾವು ಯಾವುದು ಯಾವ ವರ್ಣಕ್ಕೆ ಸೇರಿದ್ದುದೆಂಬುದನ್ನು ಹೇಳುವುದು ಅಸಾಧ್ಯ, ಅವು ಒಂದೊಂದೂ ಪರಸ್ಪರ ಹೊರತಾದ ಗುಂಪುಗಳೇ ಎಂಬುದನ್ನು ಹೇಳುವ ಸ್ಥಿತಿಯಲ್ಲೂ ನಾವು ಇಲ್ಲ. ರಥಕಾರನು ಶೂದ್ರನಿಗಿಂತ ಉತ್ಕೃಷ್ಟನಾಗಿದ್ದನೆಂದು ನಾವು

ಹೇಳಬಹುದು. ಋಗ್ವೇದದಲ್ಲಿ 'ಜಾತಿ' ಶಬ್ದವಿಲ್ಲದಿದ್ದರೂ ನಿರುಕ್ತದಲ್ಲಿದೆ, ಪಾಣಿನಿಯಲ್ಲಿದೆ. ಈಚಿನವಾದ ಸ್ಮೃತಿಗ್ರಂಥಗಳಲ್ಲಿ 'ಜಾತಿ' ಮತ್ತು 'ವರ್ಣ'ಗಳಿಗೆ ವ್ಯತ್ಯಾಸ ಮಾಡಿದ್ದರೂ ಬಹು ಹಿಂದಿನಿಂದಲೂ ಅವುಗಳ ಮಧ್ಯೆ ಗೊಂದಲಗಳಿದ್ದೇ ಇವೆ. ಮನುವೇನೋ 'ವರ್ಣ'ವನ್ನು ಮಿಶ್ರಜಾತಿಗಳೆಂಬ ಅರ್ಥದಲ್ಲೂ 'ಜಾತಿ'ಯನ್ನು ವರ್ಣ ಎಂಬರ್ಥದಲ್ಲಿಯೂ ಬಳಸುತ್ತಾನೆ.

ಆಗಲೇ ಹೇಳಿದಂತೆ ಋಗ್ವೇದದಲ್ಲಿ ಬಡಗಿ, ಚಮ್ಮಾರ, ರಥಕಾರ ಮುಂತಾದ ವೃತ್ತಿಕಾರ ಗುಂಪುಗಳ ಹೆಸರಿದ್ದರೂ ಅವು ಇಂದಿನ ಅರ್ಥದಲ್ಲಿ[4] 'ಜಾತಿ' ಎಂದು

---

4. 'ಜಾತಿ' ಪದದ ಮೂಲದಲ್ಲಿ ಜನ್ಮ ಎಂಬುದರ ಅರ್ಥವಿದೆ. ಒಬ್ಬ ವ್ಯಕ್ತಿಯ ಜಾತಿಯನ್ನು ನಿರ್ಣಯಿಸುವುದು ಅವನ ಹುಟ್ಟು. ಭಾರತೀಯ ಸಮಾಜಕ್ಕೆ ವಿಶಿಷ್ಟವೆಂದು ಭಾವಿಸಲಾದ ಜಾತಿಯ ವಿವರಣೆ ನೀಡುವುದು ಸುಲಭದ ಕಾರ್ಯವಲ್ಲ. ಜಿ.ಎಸ್. ಘುರ್ಯೆ ಪ್ರಕಾರ "ಪ್ರತಿ ಇನ್ನೊಂದರಿಂದ ಬೇರ್ಪಡಿಸುವಂತಹ ವಿಶಿಷ್ಟ ಗುಣವನ್ನು ಹೊಂದಿರುವ ಚಿಕ್ಕ ಮತ್ತು ಸ್ವಯಂ ಪೂರ್ಣ ಸಾಮಾಜಿಕ ಪ್ರಪಂಚಗಳು ಜಾತಿಗಳು". ಜಾತಿಯ ಎರಡು ಪ್ರಮುಖ ಲಕ್ಷಣಗಳನ್ನು ಗುರುತಿಸಬಹುದು. ಜಾತಿಯೆನ್ನುವುದು ಮುಖ್ಯವಾಗಿ ಸಗೋತ್ರ ವಿವಾಹದ (endogamous) ಗುಂಪು ಮತ್ತು ವ್ಯಕ್ತಿಯ ಜಾತಿ ಅವನ ಹುಟ್ಟಿನಿಂದ ನಿರ್ಧಾರಿತ. ಒಂದು ಜಾತಿಯವನು ಸಾಮಾನ್ಯವಾಗಿ ಆ ಜಾತಿ ಅನುಸರಿಸಿಕೊಂಡು ಬರುತ್ತಿರುವ ವೃತ್ತಿಯನ್ನವಲಂಬಿಸಬೇಕು. ಒಂದು ಜಾತಿಯ ವ್ಯಕ್ತಿ ಆ ಜಾತಿ ನಿರ್ಧರಿಸುವ ಕೆಲವು ಸಾಮಾಜಿಕ ನಿಯಮಗಳಿಗೆ ಬದ್ಧನಾಗಿರಬೇಕು. ಹಟ್ಟನ್ ಹೇಳುವಂತೆ ಭಾರತದಲ್ಲಿ ಧಾರ್ಮಿಕ ನಿಯಮಗಳಿಗಿಂತ ಜಾತಿ ನಿಯಮಗಳು ಹೆಚ್ಚು ಕಠಿಣವಾಗಿರುತ್ತವೆ. ಲೂಯಿ ಡುಮಾಂಟ್ ಹೇಳುವಂತೆ ಜಾತಿಯು ಭಾವನೆ ಮತ್ತು ಮೌಲ್ಯಗಳ ಒಂದು ವ್ಯವಸ್ಥೆ ('... the caste system is above all a system of ideas and values, a formal, comprehensible, rational system, a system in the intellectual sense of the term'). ಎಷ್ಪೋ ಸಾರಿ, "ಜಾತಿ ನಡವಳಿಕೆಯೇ ಧಾರ್ಮಿಕ ನಿಯಮಗಳಾಗಿರುತ್ತವೆ" ("The rules of caste behaviour are rules of religion"–M.N. Srinivas). ಭಾರತದ ಪರಿಸರದಲ್ಲಿ ಜಾತಿಭಾವನೆ ಅತ್ಯಂತ ಪ್ರಬಲವಾದುದೆಂಬುದು ಎಲ್ಲರಿಗೂ ತಿಳಿದ ವಿಷಯ. 'ಹಿಂದೂ' ಎಂಬ ಧರ್ಮದ ವ್ಯಾಖ್ಯೆ ಬಹಳ ಸಮಸ್ಯಾತ್ಮಕವಾದುದು. ಎಂ.ಎನ್. ಶ್ರೀನಿವಾಸರಂತಹ ಸಮಾಜವಿಜ್ಞಾನಿಗಳು, ಜಾತಿಗಳು ನಾಶವಾದರೆ 'ಹಿಂದೂ ಧರ್ಮ'ವೇ ನಾಶವಾಗುತ್ತದೆ ಎನ್ನುವಂತಹ ಮಾತುಗಳನ್ನಾಡಿದ್ದಾರೆ. ಅದು ತೀವ್ರವಾಗಿ ಯೋಚಿಸಲು ಅರ್ಹವಾದುದು. ಭಾರತೀಯ ಜಾತಿ ವ್ಯವಸ್ಥೆ ಮೇಲ್ನೋಟಕ್ಕೆ ನಿಯಮನೈಷ್ಠುರ್ಯವನ್ನು ತೋರಿದರೂ ಈಚಿನ ಸಂಶೋಧನೆಗಳು ಆ ವ್ಯವಸ್ಥೆಯು "ಚಲನೆ, ತಿಕ್ಕಾಟ, ಬದಲಾವಣೆ"ಗಳನ್ನೂ ತೋರಿರುವುದನ್ನು ಗಮನಿಸಿವೆ. (James Silverberg : Social Mobility in the Caste system in India. Hague. 1968. ಪ್ರಸ್ತಾವನೆ). ಆಯಾ ಜಾತಿಯವರು ಅದೇ ವೃತ್ತಿಯನ್ನವಲಂಬಿಸಬೇಕೆಂಬುದು ಆಧುನಿಕ ಕಾಲದಲ್ಲಿ ಕುಸಿದು ಬಿದ್ದಿರುವುದನ್ನು ಗಮನಿಸಬೇಕು. ಲೀಚ್ ಪ್ರಕಾರ, ಜಾತಿ ತನಗೆ ತಾನೇ ಅಸ್ತಿತ್ವವನ್ನು ಹೊಂದಿರುವುದಿಲ್ಲ. ಅದು ಇತರ ಜಾತಿಗಳ ಜೊತೆ ಹೊಂದಿರುವ

ಕರೆಯಿಸಿಕೊಳ್ಳುತ್ತವೆಯೇ ಎಂಬುದಕ್ಕೆ ಆಧಾರಗಳಿಲ್ಲ. ಗೌತಮ ಮತ್ತು ಮನುಗಳು ಹೇಳುವಂತೆ ವಿವಿಧ ವರ್ಣಗಳ ಮಧ್ಯೆ ನಡೆಯುವ ಮದುವೆಗಳಿಂದ ಮಿಶ್ರ ಜಾತಿಗಳೂ, ಈ ಮಿಶ್ರಜಾತಿಗಳ ಮಧ್ಯೆ ನಡೆಯುವ ಮದುವೆಗಳಿಂದ ಇನ್ನೂ ಹೆಚ್ಚಿನ ಜಾತಿ ಉಪಜಾತಿಗಳೂ ನಿರ್ಮಾಣಗೊಳ್ಳುತ್ತವೆ. ಅವರ ಪ್ರಕಾರ 'ವರ್ಣಸಂಕರ'ವೇ ಜಾತಿಗಳ ಉಗಮಕ್ಕೆ ಮೂಲ. ಪರಂಪರೆಯಿಂದ ಬಂದ ಬೇರೆ ಬೇರೆ ವೃತ್ತಿಗಳನ್ನು ಅನುಸರಿಸುತ್ತಿದ್ದ ಗುಂಪುಗಳು ತಮ್ಮ ವೃತ್ತಿ ರಹಸ್ಯಗಳನ್ನು ತಮ್ಮ ಗುಂಪಿನವರಲ್ಲದೆ ಬೇರೆಯವರಿಗೆ ಬಿಟ್ಟುಕೊಡದೆ, ತಮ್ಮ ತಮ್ಮಲ್ಲೇ ಮದುವೆಯಾಗುತ್ತ ಬಂದುದರ ಪರಿಣಾಮವೇ ಬೇರೆ ಬೇರೆ ಜಾತಿಗಳ ಹುಟ್ಟಿಗೆ ಕಾರಣವಾಗಿರಬೇಕು.

ವೇದೋತ್ತರ ಯುಗದಲ್ಲಿ ಪ್ರತಿವರ್ಣದಲ್ಲೂ ಅನೇಕ ಗುಂಪುಗಳು ಕಾಣಿಸಿಕೊಂಡವು. ಪತಂಜಲಿಯು 'ಆಭೀರ'ರು ಶೂದ್ರರಿಂದ ಭಿನ್ನವಾದ ಜಾತಿಯೆಂದು ಹೇಳುವುದನ್ನು ನೋಡಿದರೆ ಆಭೀರರಂತೆಯೇ ಶೂದ್ರರದೂ ಒಂದು ಜಾತಿಯೆನ್ನಿಸಿಕೊಳ್ಳುತ್ತಿತ್ತು ಎಂಬುದು ಸ್ಪಷ್ಟ. 'ವರ್ಣ'ವಾಗಿದ್ದ ಶೂದ್ರವು 'ಜಾತಿ'ಯಾಗಿತ್ತು. ಮತ್ತು 'ವರ್ಣ' 'ಜಾತಿ' ಗಳು ಸಮಾನಾರ್ಥಕಗಳಾಗುತ್ತಿದ್ದುವು. ವರ್ಣ ಅಥವಾ ಜಾತಿಗಳಲ್ಲಿ ಮೇಲು ಕೀಳುಗಳ ಸ್ಪಷ್ಟ ಅನುಶ್ರೇಣಿ ನಿರ್ಮಾಣವಾಯ್ತು.

ಬ್ರಾಹ್ಮಣನು 'ಧರ್ಮ'ಕ್ಕೆ ಪೂರ್ಣ ಅರ್ಹ, ಕ್ಷತ್ರಿಯ ಮುಕ್ಕಾಲು ಪಾಲು, ವೈಶ್ಯ ಅರ್ಧಪಾಲು, ಶೂದ್ರ ಕಾಲು ಪಾಲು ಮಾತ್ರ ಅರ್ಹರು.

ಬ್ರಾಹ್ಮಣನಿಗೆ ಎಂಟನೇ ವರ್ಷಕ್ಕೆ, ಕ್ಷತ್ರಿಯನಿಗೆ ಹನ್ನೊಂದನೇ ವರ್ಷಕ್ಕೆ, ವೈಶ್ಯನಿಗೆ ಹನ್ನೆರಡನೇ ವರ್ಷಕ್ಕೆ ದೀಕ್ಷೆ. ಶೂದ್ರನಿಗೆ ದೀಕ್ಷೆ ಇಲ್ಲ–ಅವನು 'ದ್ವಿಜ' ಅಲ್ಲ, ಎಂದರೆ ಅವನಿಗೆ 'ಎರಡನೆಯ ಹುಟ್ಟು' ಇಲ್ಲ.

ಬ್ರಾಹ್ಮಣನಿಗೆ ಮೈಲಿಗೆಯ ಅವಧಿ ತೀರ ಕಡಮೆ, ಉಳಿದವರಿಗೆ ಕ್ರಮೇಣ ಆ ಅವಧಿ ಹೆಚ್ಚುತ್ತ ಹೋಗುತ್ತದೆ.

ಬ್ರಾಹ್ಮಣನನ್ನು ಆರೋಗ್ಯ ಕೇಳುವಾಗ 'ಕುಶಲವೇ' ಎಂದೂ ಕ್ಷತ್ರಿಯನನ್ನು

---

ವೈರುಧ್ಯದಿಂದ ಅದನ್ನು ಗುರುತಿಸಬೇಕಾಗುತ್ತದೆ. ಈ ವೈರುಧ್ಯದಲ್ಲಿ ಆಯಾ ಜಾತಿಯ ಜನ ಪರಸ್ಪರ ಹೊಂದಿರುವ ಆರ್ಥಿಕ, ರಾಜಕೀಯ ಮತ್ತು ರಿಚುಯಲ್ ಸಂಬಂಧಗಳು ಅಡಕವಾಗಿರುತ್ತವೆ"... a caste does not exist by itself. A caste can only be recognized in contrast to other castes with which its members are closely involved in a network of economic, political and ritual relationships"–Introd. To -Aspects of Caste in South India, Ceylon and North-West Pakistan. Ed; E.R. Leach. Cambridge, 1969. ಜಾತಿಗಳ ಅನುಶ್ರೇಣಿಯು ಪ್ರತಿಷ್ಠಿತ ಸ್ಥಾನದ ಬ್ರಾಹ್ಮಣನನ್ನು ಗಮನದಲ್ಲಿಟ್ಟುಕೊಂಡು ರೂಪಿತವಾಗಿರುತ್ತದೆ (ಯಾವ ಜಾತಿ ಯಾವುದಕ್ಕಿಂತ ಮೇಲು, ಕೀಳು ಇತ್ಯಾದಿ).

'ಅನಾಮಯವೇ' ಎಂದೂ ಕೇಳಬೇಕು. ಉಳಿದ ಎರಡು ವರ್ಣಗಳವರ ಆರೋಗ್ಯವನ್ನು ಸಾಮಾನ್ಯವಾಗಿ ವಿಚಾರಿಸಿದರೆ ಸಾಕು.

ಗಂಡ ದೂರ ಹೋಗಿದ್ದರೆ ಅವನಿಗಾಗಿ ಬ್ರಾಹ್ಮಣ ಹೆಣ್ಣು ಬಹಳ ಕಾಲ ಕಾಯಬೇಕು, ಕ್ಷತ್ರಿಯ ಹೆಣ್ಣು ಸ್ವಲ್ಪ ಕಾಯಬೇಕು, ವೈಶ್ಯ ಹೆಣ್ಣು ಇನ್ನೂ ಕಡಮೆ ಕಾಯಬೇಕು, ಶೂದ್ರ ಹೆಣ್ಣು ತೀರ ಕಡಮೆ ಕಾಯಬೇಕು.

ಬ್ರಾಹ್ಮಣ ಕದ್ದರೆ ಕದ್ದ ಮಾಲಿನ ಎರಡರಷ್ಟು ದಂಡ ಅವನಿಗೆ, ಕ್ಷತ್ರಿಯ ಕದ್ದರೆ ಬ್ರಾಹ್ಮಣನ ದಂಡಕ್ಕಿಂತ ಎರಡರಷ್ಟು, ವೈಶ್ಯ ಕದ್ದರೆ ಕ್ಷತ್ರಿಯನ ದಂಡಕ್ಕಿಂತ ಎರಡರಷ್ಟು (ಎಂದರೆ ಕದ್ದದ್ದಕ್ಕಿಂತ ಎಂಟರಷ್ಟು ದಂಡ). ಶೂದ್ರ ಕದ್ದರೆ ಇಚ್ಛೆ ಬಂದಷ್ಟು ಅವನಿಗೆ ದಂಡ ಶಿಕ್ಷೆ ವಿಧಿಸಬಹುದು.

ಒಬ್ಬ ಬ್ರಾಹ್ಮಣ ಇನ್ನೊಬ್ಬ ಬ್ರಾಹ್ಮಣನನ್ನು ಕೊಂದರೆ ಅವನಿಗೆ ದೇಶದಿಂದ ಬಹಿಷ್ಕಾರ ಹಾಕಬೇಕು. ಕ್ಷತ್ರಿಯ, ವೈಶ್ಯ, ಶೂದ್ರರು ಬ್ರಾಹ್ಮಣನನ್ನು ಕೊಂದರೆ ಅವರ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡು ಬೇಕಾದರೆ ಅವರನ್ನು ಗಲ್ಲಿಗೇರಿಸಬಹುದು.

ಬ್ರಾಹ್ಮಣ ಕ್ಷತ್ರಿಯರಿಗೆ ಭೂ ಕಂದಾಯವಿಲ್ಲ. ವೈಶ್ಯ ಶೂದ್ರರಿಗೆ ಉಂಟು.

ಬ್ರಾಹ್ಮಣನ ವೃತ್ತಿ ಪೌರೋಹಿತ್ಯ, ಕ್ಷತ್ರಿಯನದು ಯುದ್ಧ, ವೈಶ್ಯನದು ವ್ಯವಸಾಯ ಮತ್ತು ವ್ಯಾಪಾರ, ಶೂದ್ರನದು ಸೇವೆ (ತುರ್ತು ಪರಿಸ್ಥಿತಿಯಲ್ಲಿ ಮೇಲಿನವರು ಕೆಳಗಿನ ವೃತ್ತಿಯನ್ನು ಅವಲಂಬಿಸಲು ಅವಕಾಶವಿದೆ). ಬ್ರಾಹ್ಮಣ ಉಳಿದವರಿಂದ ಅಡುಗೆ ಮಾಡದ ಆಹಾರವನ್ನು ಮಾತ್ರ ತೆಗೆದುಕೊಳ್ಳಬೇಕು. ಶೂದ್ರನು-ಚಂಡಾಲ ಅಥವಾ ಹೊಲೆಯನಷ್ಟಲ್ಲದಿದ್ದರೂ-ಮೈಲಿಗೆಯನ್ನು ರವಾನಿಸುತ್ತಾನೆ ಎಂಬುದಕ್ಕೆ ಧರ್ಮಶಾಸ್ತ್ರ ಗ್ರಂಥಗಳಲ್ಲೇ ಸೂಚನೆಗಳಿವೆ. ಮದುವೆ ವಿಷಯದಲ್ಲಿ ಧರ್ಮ ಶಾಸ್ತ್ರ ಗ್ರಂಥಗಳು ತಮ್ಮ ತಮ್ಮ ಪಂಗಡದಲ್ಲೇ ಮದುವೆ ಆಗುವುದು ಶ್ರೇಷ್ಠವೆನ್ನುತ್ತವೆ. ಸಮಾನ ಜಾತಿಯ ಹೆಣ್ಣಿನ ಮಗ 'ಸಪಿಂಡ' ನಾಗುತ್ತಾನೆ. ಉಳಿದ ಜಾತಿಗಳ ಎಂದರೆ ಕಡಮೆ ಜಾತಿಗಳ ಹೆಂಡತಿಯರ ಮಕ್ಕಳು ಲೆಕ್ಕಕ್ಕಿಲ್ಲ; ಎಂದರೆ, ಅನಿವಾರ್ಯವಾದಾಗ ಮೇಲ್ಜಾತಿಯ ಗಂಡು ಕೆಳಜಾತಿಯ ಹೆಣ್ಣನ್ನು ಕೈಹಿಡಿಯಲು ಅವಕಾಶವಿತ್ತು (ಇದೇ 'ಅನುಲೋಮ ವಿವಾಹ'); ಕೆಳಜಾತಿಯ ಗಂಡು ಮೇಲ್ಜಾತಿಯ ಹೆಣ್ಣನ್ನು ಮದುವೆಯಾಗಲು ('ಪ್ರತಿಲೋಮ ವಿವಾಹ') ವಿರೋಧವಿತ್ತು. ಕೆಳಗಿನ ಗಂಡು ಮತ್ತು ಮೇಲಿನ ಹೆಣ್ಣಿನ ಮದುವೆ ವಾಸ್ತವವಾಗಿ ಮದುವೆಯೇ ಅಲ್ಲವೆನ್ನುತ್ತವೆ ಧರ್ಮಶಾಸ್ತ್ರಗಳು.

ವರ್ಣ ಸಂಕರಕ್ಕೆ ಅಸ್ಪದ ಕೊಡದೆ ಶೂದ್ರರು ತಮ್ಮಷ್ಟಕ್ಕೆ ತಾವು ಹೇಗೆ ಬೇಕಾದರೂ ಬದುಕಬಹುದು-ಅವರ ವೈಯಕ್ತಿಕ ಬದುಕಿಗೆ ನಿಯಮಗಳನ್ನು ಧರ್ಮ ಗ್ರಂಥಗಳು ಹಾಕಿಲ್ಲ. ಧರ್ಮ ಗ್ರಂಥಗಳಿಗೆ ವಿರುದ್ಧವಲ್ಲದ ಯಾವುದೇ ಜಾತಿ

ನಿಯಮಗಳಿಗೆ ಅವುಗಳ ಒಪ್ಪಿಗೆಯಿದೆ. 'ಕ್ಷತ್ರಿಯ ಧರ್ಮ' ವಿರುವಂತೆ 'ಶೂದ್ರ ಧರ್ಮ' ವೆಂಬುದೊಂದಿಲ್ಲ. ಶೂದ್ರನನ್ನು 'ಪಾದಜ' ನೆಂದು ಮತ್ತೆ ಮತ್ತೆ ಕರೆದಿರುವುದಲ್ಲದೆ ಅವನು ಇತರರ ಸೇವೆಗಾಗಿಯೇ ಹುಟ್ಟಿದವನೆಂದು ಹೇಳಲಾಗಿದೆ. ಬ್ರಾಹ್ಮಣ ಕ್ಷತ್ರಿಯ ವೈಶ್ಯರು ಭೋಗಿಸಿ ಬಿಟ್ಟ ಆಹಾರ, ಬಟ್ಟೆ, ಪಾದರಕ್ಷೆ ಅವನವು. ವಸಿಷ್ಠನು ಶೂದ್ರನನ್ನು ಸ್ಮಶಾನವೆಂದೇ ಕರೆಯುತ್ತಾನೆ. ಅವನು ವೇದಾಭ್ಯಾಸಕ್ಕೆ ಅನರ್ಹ, ಅವನು ವೇದಗಳನ್ನು ಕೇಳಿಸಿಕೊಳ್ಳಲೂ ಕೂಡದು. ಪೂರ್ವ ಮೀಮಾಂಸೆಯು ಶೂದ್ರನಿಗೆ ವೇದಾಧಿಕಾರವನ್ನೂ ವೈದಿಕಾಚರಣೆಯನ್ನೂ ನಿಷೇಧಿಸಿತು. (ಆದರೂ ಬಾದರಿ ಎಂಬ ಋಷಿಯು ಶೂದ್ರನಿಗೆ ವೇದಾಧಿಕಾರವನ್ನು ಪ್ರತಿಪಾದಿಸಿದ್ದಾನೆ.) ಮಹಾಭಾರತದ ಪ್ರಕಾರ, ಶೂದ್ರರೂ ಸ್ತ್ರೀಯರೂ ಮೋಕ್ಷಕ್ಕೆ ಅನರ್ಹರೇನೂ ಅಲ್ಲ.[5]

## ಚಂಡಾಲರು

ಯಜುರ್ವೇದದಲ್ಲಿ 'ಚಂಡಾಲ'ರ ಉಲ್ಲೇಖವಿದೆ. ಛಾಂದೋಗ್ಯೋಪನಿಷತ್ತಿನಲ್ಲಿ 'ಚಂಡಾಲ'ರ ಸಂತತಿಯು ನಾಯಿ ಹಂದಿಗಳಂತೆ ತುಚ್ಛವಾದುದು ಎಂದಿದೆ. ಇವರು ತೀರ ನಿಕೃಷ್ಟರಾದ ಜನ. ಮೂಲತಃ ಇವರು ಯಾರು, ಈ ಜಾತಿಯ ಹುಟ್ಟು ಹೇಗೆ, ಅಸ್ಪೃಶ್ಯತೆ ಹೇಗೆ ಆರಂಭವಾಯಿತು ಎನ್ನುವುದರ ಬಗ್ಗೆ ಏಕಾಭಿಪ್ರಾಯವಿಲ್ಲ. ಭಾರತಕ್ಕೆ ಹೊರಗಿನಿಂದ ಬಂದ ವಿದೇಶೀಯರು ದಮನ ಮಾಡಿದ ದೇಶೀಯ ಜನರೇ ಈಗಿನ ಅಸ್ಪೃಶ್ಯರೆಂದೂ, ಅವರನ್ನು ಗೆದ್ದವರು ತಮ್ಮ ಕಾವಲುಗಾರರನ್ನಾಗಿ ಮಾಡಿಕೊಂಡು–ದರ ಪರಿಣಾಮವೇ ಅಸ್ಪೃಶ್ಯತೆಗೆ ಕಾರಣವೆಂದೂ ಡಾ. ಅಂಬೇಡ್ಕರ್ ಅಭಿಪ್ರಾಯಪಡುತ್ತಾರೆ.[6] ಕಾವಲುಗಾರರಾಗಿ ಅವರು ಊರ ಹೊರಗೆ ಇರಬೇಕಾಯ್ತು. ಆ ಕಾರಣ ಅವರನ್ನು 'ಅಂತ್ಯಜ' (=ಊರ ಹೊರಗಿನವರು) ಎಂದು ಕರೆದರೆಂದೂ ಅವರು ವಾದಿಸುತ್ತಾರೆ. 'ಅಂತ್ಯಜ' ಎಂದರೆ ಕೊನೆಯಲ್ಲಿ ಹುಟ್ಟಿದವನು ಅಥವಾ ಕಾಣಿಸಿಕೊಂಡವನು ಎಂದರ್ಥ. ಅದು ಚತುರ್ವರ್ಣಗಳ ಹೊರಗೆ, ಕೊನೆಯಲ್ಲಿ ಇರುವ ಗುಂಪನ್ನು ಹೇಳುವುದೇ ಹೊರತು ಊರ ಹೊರಗಿರುವುದನ್ನು ಹೇಳುವುದಿಲ್ಲ. ಬಹುಪಾಲು ಅಸ್ಪೃಶ್ಯರು ಭಾರತ ದೇಶದ ಮೂಲ ನಿವಾಸಿಗಳೆಂಬುದಕ್ಕೆ ಬಹಳ ಜನ ಸಮಾಜ ವಿಜ್ಞಾನಿಗಳ ಒಪ್ಪಿಗೆಯಿದೆ. ಹೊರಗಿನಿಂದ ಬಂದ ಆರ್ಯರು ಈ ಕಾಡು ಜನರಂತಿದ್ದ ಮೂಲನಿವಾಸಿಗಳನ್ನು ತಿರಸ್ಕಾರದಿಂದ ಕಂಡಿರಬೇಕು; ಅವರನ್ನು ದೂರವಿಟ್ಟುದು ಮಾತ್ರವಲ್ಲದೆ ಅವರನ್ನು ಮುಟ್ಟುವುದು, ನುಡಿಸುವುದು, ಅವರ ಜೊತೆ ಯಾವುದೇ ಸಂಪರ್ಕವನ್ನಿರಿಸಿಕೊಳ್ಳುವುದು ಮೈಲಿಗೆ ಉಂಟುಮಾಡುತ್ತದೆ ಎಂದು ಭಾವಿಸಿರಬೇಕು. ಇದು ಬಹುಶಃ ಅಸ್ಪೃಶ್ಯತೆಗೆ ಕಾರಣವಿರಬೇಕು. ಇದು

---

5. P.V. Kane: History of Dharmashastra. Vol. V. ii. Poona, 1962. pp. 1641-2

6. B.R. Ambedkar : The Untouchtables : Who were they and why they became untouchables. Balaramour. 1977. pp. XIV-V.

ಸಮಸ್ಯೆಯನ್ನು ತೀರ ಸರಳೀಕರಿಸಿದಂತೆ ಎನ್ನುವುದು ನಿಜವಾದರೂ ಸದ್ಯಕ್ಕೆ ಅಸ್ಪೃಶ್ಯತೆಯ ಮೂಲ ಯಾವುದು ಎಂಬುದು ನಮ್ಮ ಚರ್ಚೆಯ ವಿಷಯವಲ್ಲ ವಾದುದರಿಂದ ಅದನ್ನು ವಿಸ್ತರಿಸುವುದು ಬೇಡ.

ಇಂದು ಉತ್ತರ ಭಾರತದ ಹಲವಾರು ಅಸ್ಪೃಶ್ಯ ಜಾತಿಗಳ ಹೆಸರುಗಳು (ಉದಾ: ಪಿರಿಯರ್, ಬಲ್ಸೈ) ದ್ರಾವಿಡ ಪದಗಳಾಗಿರುವುದು ಬಹಳ ಸ್ವಾರಸ್ಯದ ಸಂಗತಿ. ಒಂದು ಪ್ರಚಲಿತ ಸಿದ್ಧಾಂತದ ಪ್ರಕಾರ ಆರ್ಯರು ಭಾರತಕ್ಕೆ ವಲಸೆ ಬಂದು ಉತ್ತರ ಭಾರತವನ್ನೆಲ್ಲ ವ್ಯಾಪಿಸಿದ್ದ ದ್ರಾವಿಡರನ್ನು ದಕ್ಷಿಣಕ್ಕೆ ತಳ್ಳಿದರು–ಈಗಲೂ ಉತ್ತರ ಭಾರತದಲ್ಲಿ ಹತ್ತಾರು ದ್ರಾವಿಡ ಗಿರಿಜನ ಭಾಷೆಗಳಿರುವುದು ಈ ವಾದಕ್ಕೆ ಪೋಷಕವಾಗಿದೆ. ಅಸ್ಪೃಶ್ಯ ಜಾತಿಗಳಲ್ಲಿ ಕೆಲವಾದರೂ ದ್ರಾವಿಡರು ಬರುವುದಕ್ಕೆ ಮುನ್ನ ಇದ್ದ ಬುಡಕಟ್ಟು ಜನಾಂಗದ ಗುಂಪುಗಳಿರಬಹುದು. ಈ ಬಗ್ಗೆ ಮುಂದೆ ಕೆಲವು ವಿವರಗಳನ್ನು ಸೂಕ್ತ ಸಂದರ್ಭದಲ್ಲಿ ಕೊಡಲಾಗುವುದು.

ಯಜುರ್ವೇದದಲ್ಲಿ 'ಚಂಡಾಲ' ಎನ್ನುವ ಮಾತು ಬರುತ್ತದೆ ಎಂದು ನೋಡಿದೆವು. ಪ್ರತಿಲೋಮ ವಿವಾಹದ ಶೂದ್ರ ತಂದೆ ಮತ್ತು ಬ್ರಾಹ್ಮಣ ತಾಯಿಯ ಮಕ್ಕಳೇ ಚಂಡಾಲರು ಎಂದು ಈಚಿನ ಗ್ರಂಥಗಳಲ್ಲಿ ಉಕ್ತವಾಗಿದೆ. ವೇದಗಳಲ್ಲಿ ಬರುವ "ಪಂಚ ಜನಾಃ" ಎನ್ನುವುದು ನಾಲ್ಕು ವರ್ಣಗಳನ್ನೂ ನಿಷಾದರನ್ನೂ ಒಳಗೊಳ್ಳಬಹುದು. ವೇದಗಳಲ್ಲಿ ಬರುವ ದಾಸ ಅಥವಾ ದಸ್ಯುಗಳೇ ಶೂದ್ರ, ನಿಷಾದರೆಂದಾಗಿ ಶೂದ್ರರು ವರ್ಣಗಳಲ್ಲಿ ಒಂದು ಎಂದು ಪರಿಗಣಿತರಾದರು, ನಿಷಾದರು ಹೊರಗುಳಿದರು. ನಿಷಾದರಿಗಿಂತ ಇನ್ನೂ ಕೆಳಗಿನ ನಿಕೃಷ್ಟರೆಂದರೆ ಪೌಲ್ಕಸರು ಮತ್ತು ಚಂಡಾಲರು. ವೈದಿಕೋತ್ತರ ಯುಗದ ಬ್ರಾಹ್ಮಣಗಳಲ್ಲಿ ನಾಲ್ಕು ವರ್ಣಗಳ ಜೊತೆ ಕೆಲವು 'ಸಂಕರ ಜಾತಿ'ಗಳನ್ನು ಹೇಳಲಾಗಿದೆ–ಇವರನ್ನು 'ಅಂತ್ಯಾವಸಾಯಿ'ಗಳೆಂದಿದೆ. 'ಅಂತ್ಯಾವಸಾಯಿ'ಯು ಚಂಡಾಲನಿಗೆ ನಿಷಾದಿಯಲ್ಲಿ ಹುಟ್ಟಿದ ವ್ಯಕ್ತಿ. ('ಅಂತ್ಯಾವಸಾಯಿ' ಎಂದರೆ ಕೊನೆಯಲ್ಲಿ ಇರುವವನು, ವಾಸಿಸುವವನು ಎಂದರ್ಥ. ಹೋಲಿಸಿ, 'ಅಂತ್ಯಜ'). 'ಅಂತ್ಯಾವಸಾಯಿ'ಗಳು ಸ್ಪಷ್ಟವಾಗಿ ಜಾತಿಬಾಹಿರರು, ಅಸ್ಪೃಶ್ಯರು (outcastes, untouchables).

ಚತುರ್ವರ್ಣದವರಾಗಲಿ ಚಂಡಾಲರಾಗಲಿ ತಮ್ಮ ತಮ್ಮ ಕರ್ತವ್ಯಗಳನ್ನು ನೆರವೇರಿಸಿದರೆ ಮೋಕ್ಷಕ್ಕೆ ಅರ್ಹರೆಂದೂ ಒಮ್ಮೆ ದೇವಲೋಕವನ್ನು ಸೇರಿದ ಮೇಲೆ ಅವರೆಲ್ಲ ಸಮಾನರೆಂದೂ ಬೌದ್ಧ ಧರ್ಮ ಒಪ್ಪಿಕೊಂಡಿತು. ಇಹಲೋಕದಲ್ಲಾಗಲಿ ಪರಲೋಕದಲ್ಲಾಗಲಿ ವ್ಯಕ್ತಿ ಉತ್ತಮ ಸ್ಥಿತಿಯನ್ನು ಪಡೆದುಕೊಳ್ಳಲು ಅವನ ಜಾತಿ ಎಷ್ಟೂ ಸಹಾಯಕವಲ್ಲವೆಂದು ಬೌದ್ಧ ಧರ್ಮ ಹೇಳಿದರೂ ಆ ಧರ್ಮದ ಪ್ರಕಾರ ಬುದ್ಧ ತನ್ನ ಬೇರೆ ಬೇರೆ ಜನ್ಮಗಳಲ್ಲಿ ಬ್ರಾಹ್ಮಣ ಕ್ಷತ್ರಿಯ ವರ್ಣಗಳನ್ನು ಬಿಟ್ಟು ಬೇರೆಡೆ ಹುಟ್ಟಲೇ ಇಲ್ಲ. ಬುದ್ಧನಲ್ಲಿ ಸರ್ವಜೀವ ದಯಾಪರತೆ ಕಂಡು ಬಂದರೂ, ಸಮಾಜದ ತೀರ ಕೆಳವರ್ಗದ ಜನರನ್ನು ಅವನು ಪ್ರೇಮದಿಂದ ನೋಡಬಲ್ಲನಾಗಿದ್ದರೂ ಅವನ

ಬೋಧನೆಯಾಗಲಿ ಅವನ ನಡವಳಿಕೆಯಾಗಲಿ ಜಾತಿಯ ತೀವ್ರ ಕಟ್ಟುಪಾಡುಗಳನ್ನು ಸ್ವಲ್ಪ ಉದಾರಗೊಳಿಸುವಲ್ಲಿ ಮಾತ್ರ ಸಹಾಯಕವಾದುವು. ಜಾತಿ ಭೇದವನ್ನು ಅಳಿಸಿಹಾಕುವುದು ಬುದ್ಧನ ಉದ್ದೇಶವಾಗಿರಲಿಲ್ಲ. ಫಿಕ್ ಎಂಬ ವಿದ್ವಾಂಸನ ಪ್ರಕಾರ ಬುದ್ಧನನ್ನು ಒಬ್ಬ ಸಮಾಜ ಸುಧಾರಕನೆಂದಾಗಲಿ ಬೌದ್ಧ ಧರ್ಮವನ್ನು ಜಾತಿಯ ವಿರುದ್ಧವಾದ ಪ್ರತಿಭಟನೆ ಎಂದಾಗಲಿ ಭಾವಿಸುವುದು ಅಷ್ಟು ಉಚಿತವಲ್ಲ. ಚಾರ್ಲ್ಸ್ ಈಲಿಯಟ್ ಹೇಳುವಂತೆ, ಬುದ್ಧ ಹುಟ್ಟಿನಿಂದ ಲಭ್ಯವಾಗುವ ಬ್ರಾಹ್ಮಣರ ಶ್ರೇಷ್ಠತೆಯನ್ನು ಪ್ರಶ್ನಿಸಿದನೇ ಹೊರತು ಜಾತಿವಿರುದ್ಧವಾಗಿ ಅವನು ಬೋಧಿಸಲಿಲ್ಲ.[7] ಅವನ ಶಿಷ್ಯರಂತೂ ಕ್ಷತ್ರಿಯ ಶ್ರೇಷ್ಠತ್ವವನ್ನು ದೃಢವಾಗಿ ನಂಬಿದವರಾಗಿದ್ದು ಜಾತಿ ಭೇದದ ಅಗತ್ಯವನ್ನು ಸ್ಪಷ್ಟವಾಗಿ ಪ್ರತಿಪಾದಿಸದಿದ್ದರೂ ಅದರ ಮುಂದುವರಿಕೆಗೆ ಪರೋಕ್ಷವಾಗಿ ಕಾರಣರಾದರು. ಜಾತಕ ಕತೆಗಳಲ್ಲಿ ಒಂದೇ ಜಾತಿಯಲ್ಲಿ ಮದುವೆಯಾಗಲಿಕ್ಕೆ ಪ್ರೋತ್ಸಾಹವಿದೆಯೆಂಬುದೂ ಅದನ್ನೇ ಪೋಷಿಸುತ್ತದೆ.

ಬೌದ್ಧಯುಗಕ್ಕೆ ಅಥವಾ ಸ್ವಲ್ಪ ಈಚಿನ ಕಾಲಕ್ಕೆ ಸೇರುವ ಧರ್ಮ ಗ್ರಂಥಗಳಲ್ಲಿ 'ಚಂಡಾಲ' ರಿಗೆ ಸಂಬಂಧಿಸಿದ ಅನೇಕ ಉಲ್ಲೇಖಗಳಿವೆ. ಗೌತಮನ ಪ್ರಕಾರ ಬ್ರಾಹ್ಮಣನನ್ನು ಕೊಂದವನು ಊರ ಹೊರಗೆ ವಾಸಿಸಬೇಕು. ಅವನು ಚಂಡಾಲ ಸಮಾನ; ಭಿಕ್ಷೆಗೆ ಮಾತ್ರ ಊರೊಳಕ್ಕೆ ಬರಬೇಕು ಮತ್ತು ಮೊದಲ ಮೂರು ವರ್ಣಗಳ ಜನ ಎದುರಿಗೆ ಬಂದರೆ ದಾರಿ ಬಿಟ್ಟುಕೊಡಬೇಕು. ಚಂಡಾಲನನ್ನು ಯಾರೂ ಮುಟ್ಟಕೂಡದು. ಅಕಾಸ್ಮಾತ್ ಮುಟ್ಟಿದರೆ ಸಚೇಲ ಸ್ನಾನವನ್ನು ಮಾಡಬೇಕು. ಅವನ ಮನೆಯಲ್ಲಿ ಬ್ರಾಹ್ಮಣ ಒಂದು ವೇಳೆ ತಿಳಿಯದೆ ಉಂಡರೂ ಅವನು ಸಮಾಜ ಬಹಿಷ್ಕೃತನಾಗುತ್ತಾನೆ; ತಿಳಿದೂ ಊಟ ಮಾಡಿದ್ದರೆ ಅವನು ಚಂಡಾಲನೇ ಆಗುತ್ತಾನೆ. ಗೃಹಸ್ಥನು ಮನೆಯಲ್ಲಿ ಎಲ್ಲರ ಊಟವಾದ ಮೇಲೆ ನಾಯಿ ಕಾಗೆಗಳಿಗೆ ಆಹಾರ ಎಸೆಯುವಾಗ ಚಂಡಾಲರಿಗೂ ಎಸೆಯಬೇಕು. ಚಂಡಾಲರು 'ಅಪಪಾತ್ರರು'–ಅವರು ಬಳಸಿದ ಪಾತ್ರೆಗಳನ್ನು ಯಾರೂ ಬಳಸಕೂಡದು. ಕೌಟಿಲ್ಯನ ಪ್ರಕಾರ ಚಂಡಾಲರು ಊರ ಹೊರಗೆ ಮಾತ್ರವಲ್ಲ, ಸ್ಮಶಾನದ ಆಚೆ ವಾಸವಾಗಿರಬೇಕು. ಅತ್ರಿ ಪ್ರಕಾರ ಚರ್ಮಕಾರ, ಮೇದ, ಬೆಸ್ತ, ಭಿಲ್ಲ ಎಲ್ಲರೂ 'ಅಂತ್ಯಜ'ರೇ–ಉಷನಸ್ ಪ್ರಕಾರ

7. "...in the matter of caste-restrictions, the preaching and actions of Buddha had only a general liberalizing effect. He does not seem to have started, with the idea of abolishing caste-distinctions, nor do his actions, as described in Jataka Stories, demonstrate an utter indifference towards the accident of birth; much less do they evince any conscious effort to annihilate caste. Fick has rightly observed that it is wrong to look upon Buddha as a social reformer and Buddhism as a revolt against caste. And Sir Charles Eliot has summed up his judgement in the words 'though he (Buddha) denied that Brahmans were superior by birth to others he did not preach against caste' " (G.S. Ghurye: Caste and Race in India. Bombay. 1969. p. 72.).

ಚಂಡಾಲ ಕಸಗುಡಿಸಲಿಕ್ಕೆ ಊರೊಳಕ್ಕೆ ಬೆಳಿಗ್ಗೆ ಮಾತ್ರ ಬರಬೇಕು; ಕೊರಳಲ್ಲಿ ಒಂದು ಮಣ್ಣಿನ ಮಡಕೆ ಕಟ್ಟಿಕೊಂಡಿರಬೇಕು.[8] (ಮಡಕೆಯಲ್ಲಿ ಮಾತ್ರ ಅವರು ಉಗುಳಬೇಕು. ಅವರ ಉಗುಳು ರಸ್ತೆಯಲ್ಲಿ ಬಿದ್ದು ಉತ್ತಮರು ತುಳಿದರೆ ಮೈಲಿಗೆಯಾದೀತೆಂಬ ಭಯ). ನಾರದನ ಪ್ರಕಾರ ವೃತ್ತಿಗಳಲ್ಲಿ ಶುದ್ಧ ಮತ್ತು ಅಶುದ್ಧ ಎಂಬ ಭೇದಗಳಿದ್ದು, ಅಶುದ್ಧ ವೃತ್ತಿಗಳು ಇವು : ದಾರಿ ಗುಡಿಸುವುದು, ಯಜಮಾನನ ಮೈ ಒತ್ತುವುದು, ಎಂಜಲೆಲೆ ಹೊತ್ತು ಹಾಕುವುದು, ಉಚ್ಚೆ ಮಲ ಬಳಿಯುವುದು.

ಧರ್ಮಸೂತ್ರಕಾರರು ಚಂಡಾಲರ ಸಂತತಿಯು ಪ್ರತಿಲೋಮ ವಿವಾಹದ ಪಾಪದ ಫಲವೆಂದು ನಂಬಿದ್ದರೆಂದು ಆಗಲೇ ಸೂಚಿಸಲಾಗಿದೆ. ಆ ಗುಂಪಿಗೆ ಸೇರುವ ಕೆಲವು ಗುಂಪುಗಳು ಹೀಗಿವೆ :

ಚಂಡಾಲ–ಬ್ರಾಹ್ಮಣ ಹೆಣ್ಣು + ಶೂದ್ರ ಗಂಡು

ಅಂತ್ಯಾವಸಾಯಿನ್–ವೈಶ್ಯ ಹೆಣ್ಣು + ಶೂದ್ರ ಗಂಡು (ವಸಿಷ್ಠನ ಪ್ರಕಾರ)

ಅಂತ್ಯಾವಸಾಯಿನ್–ನಿಷಾದಿ ಹೆಣ್ಣು + ಚಂಡಾಲ ಗಂಡು (ಮನು ಪ್ರಕಾರ)

ಸೊಪಾಕ–ಕುಕ್ಕುಸ ಹೆಣ್ಣು + ಚಂಡಾಲ ಗಂಡು

ಕ್ಷತ್ರಿಯ ಹೆಣ್ಣು ಮತ್ತು ಉಗ್ರ (ಒಂದು ಜಾತಿ) ಗಂಡು, ಬ್ರಾಹ್ಮಣ ಹೆಣ್ಣು ಮತ್ತು ಅಂಬಷ್ಠ ಗಂಡುಗಳಿಗೆ ಹುಟ್ಟಿದ ಜಾತಿಗಳ ಹೆಸರೂ ಇವೆ. ಈ ಮಿಶ್ರ ಜಾತಿಗಳು ತಮ್ಮ ತಮ್ಮಲ್ಲೇ ಮದುವೆಯಾಗಬೇಕೆಂದು ಕೌಟಿಲ್ಯ ವಿಧಿಸುತ್ತಾನೆ. ಮನು ಮೇಲೆ ಹೇಳಿರುವ ಅಂತ್ಯಾವಸಾಯಿಗಳ ವಾಸವು ಸ್ಮಶಾನದಲ್ಲಿ ಎನ್ನುತ್ತಾನೆ. ಸೊಪಾಕನ ಕೆಲಸ ಶಿಕ್ಷೆಗೊಳಗಾದವರನ್ನು ಗಲ್ಲಿಗೇರಿಸುವುದು. ಪಾಂಡುಸೊಪಾಕ ಮೇದರವನು. ಮನು, ಪತಂಜಲಿಯರು 'ಸ್ವಪಚ'ರ ಹೆಸರು ಹೇಳುತ್ತಾರೆ. ಮನುವಿನ ಪ್ರಕಾರ ಸ್ವಪಚರೂ ಚಂಡಾಲರೂ ಒಂದೇ. ಇವರ ವಾಸ ಊರ ಹೊರಗೆ; ಉಡುವುದು ಹೆಣದ ಬಟ್ಟೆಗಳನ್ನು; ಒಡೆದ ಮಡಕೆಯಲ್ಲಿ ಊಟ; ಇವರು ಕಬ್ಬಿಣದ ಒಡವೆಗಳನ್ನು ಮಾತ್ರ ಧರಿಸಬೇಕು; ಇವರ ಆಸ್ತಿಯೆಂದರೆ ನಾಯಿ ಮತ್ತು ಕತ್ತೆಗಳು. ('ಸೊಪಾಕ' ಮತ್ತು 'ಶ್ವಪಚ' ಗಳು ಬಹುಶಃ ಒಂದೇ–ಸೊಪಾಕವು ಶ್ವಪಚದ ಇನ್ನೊಂದು ರೂಪ. 'ಶ್ವಪಚ' ಎಂದರೆ ನಾಯಿಯ ಮಾಂಸವನ್ನು ಬೇಯಿಸುವವನು ಎಂದರ್ಥ). ಚಂಡಾಲ ಅಥವಾ ಶ್ವಪಚರ ಕೆಲಸ ಗಲ್ಲಿಗೇರಿಸುವುದು, ವಾರಸುದಾರ ರಲ್ಲದ ಹೆಣಗಳನ್ನು ಸಾಗಿಸುವುದು. ಇವರು ಜಾತಿ ಸೂಚಕವಾಗಿ ಕೆಲವು ಗುರುತು ಗಳನ್ನು ಹೊಂದಿರಬೇಕೆಂದು ಮನು ಸೂಚಿಸುತ್ತಾನೆ. ಹಗಲು ಹೊತ್ತು ಇವರಿಗೆ ಊರೊಳಗೆ ಪ್ರವೇಶವಿಲ್ಲ.

---

8. ಈ ಪದ್ಧತಿ ಹೋದ ಶತಮಾನದವರೆಗೆ ಪುಣೆಯಲ್ಲಿ ಪ್ರಚಲಿತವಾಗಿದ್ದಿತು. ದಕ್ಷಿಣ ಕನ್ನಡ ಜಿಲ್ಲೆಯ ಅಸ್ಪೃಶ್ಯರಾದ ಕೊರಗರನ್ನು 'ಅಂಡೆ ಕೊರಗರು' ಎಂದು ಕರೆಯುತ್ತಾರೆ. ಒಂದು ಕಾಲಕ್ಕೆ ಅವರು ಕೊರಳಿಗೆ ಬಿದಿರಿನ ಅಂಡೆಯನ್ನು ಕಟ್ಟಿಕೊಳ್ಳುತ್ತಿದರು.

ಮನುವು ಚಂಡಾಲರಿಗೆ ಸಮಾನರಾದ 'ಮೃತಪ'ರನ್ನು ಹೆಸರಿಸಿದ್ದಾನೆ. ('ಮೃತಪ' ಎಂದರೆ ಹೆಣ ಕಾಯುವವನು ಎಂದರ್ಥ.)

ಮನುವಿಗೆ ಮುನ್ನಿನ ಪತಂಜಲಿಯ ಹೇಳಿಕೆಯಂತೆ ಚಂಡಾಲ ಮತ್ತು ಮೃತಪರು ಊರೊಳಗೇ ವಾಸಿಸುತ್ತಿದ್ದರು. ಅವರು ಶೂದ್ರರ ಒಂದು ಪ್ರಭೇದವೇ ಆದರೂ ಉಳಿದ ಶೂದ್ರರ (ಉದಾ: ಬಡಗಿ, ಕಮ್ಮಾರ, ನೇಕಾರ, ಅಗಸ) ಪಾತ್ರೆಗಳನ್ನು ಶುದ್ಧಗೊಳಿಸಲು ಬಾರದು; ಆ ಕಾರಣವೇ ಅವರು 'ಅಪಾತ್ರ'ರು. ಪತಂಜಲಿ ಕಾಲದಲ್ಲೇ ಚಂಡಾಲ, ಮೃತಪರಲ್ಲದೆ ಊರ ಹೊರಗೆ ವಾಸಿಸುವ ಕೆಲವು ಗುಂಪುಗಳಿದ್ದುವು. ಪತಂಜಲಿಯಿಂದ ಮನುವಿನ ಕಾಲಕ್ಕೆ ಚಂಡಾಲ, ಮೃತಪರ ಸಾಮಾಜಿಕ ಸ್ಥಾನ ಕೆಳಗೆ ಹೋಗಿ ಊರೊಳಗೆ ವಾಸಿಸುತ್ತಿದ್ದವರು ಊರ ಹೊರಗೆ ವಾಸಿಸಬೇಕಾಯ್ತು.

ಕ್ರಿ.ಪೂ. 3ನೇ ಶತಮಾನದ ಜಾತಕ ಕತೆಗಳಲ್ಲಿರುವಂತೆ ಪುಲ್ಕಸರು ಚಂಡಾಲರಿಗಿಂತ ಕೆಳಗಿನವರು. ಅವರೆಲ್ಲ ತಿರಸ್ಕೃತರು; ಅವರನ್ನು ನೋಡುವುದೇ ಒಂದು ಪಾಪ; ವಾಸ ಊರ ಹೊರಗೆ: ಕಸ ಗುಡಿಸುವುದು ಅವರ ಕೆಲಸ; ಅವರ ಊಟದಿಂದಲೇ ಅವರನ್ನು ಗುರುತಿಸಬಹುದು.

ಶೂದ್ರರು ಧಾರ್ಮಿಕ ವಿಧಿಗಳಿಗೆ ಹೊರಗು. ಅವರು ಮೈಲಿಗೆ ಎಂಬ ಭಾವನೆ ಬೆಳೆದು ಅದು ಅಂತ್ಯಜ ಅಥವಾ ಪಂಚಮ ವರ್ಗಕ್ಕೂ ವ್ಯಾಪಿಸಿ ಆ ಭಾವನೆ ಈ ಕೊನೆಯ ಗುಂಪಿನವರ–ಅಂತ್ಯಜರ–ವಿಷಯದಲ್ಲಿ ಅಸ್ಪೃಶ್ಯತೆಯನ್ನು ತಾಳಿರಬೇಕು. ಪಂಚಮರು ಕೆಳಗಿನ ಗಂಡುಗಳಿಂದ ಬ್ರಾಹ್ಮಣ ಹೆಣ್ಣುಗಳಲ್ಲಿ ಹುಟ್ಟಿದವರು ಎಂಬ ನಂಬಿಕೆಯೂ ಅವರ ವಿಷಯದಲ್ಲಿ ಅಸಹನೆ, ತಿರಸ್ಕಾರ, ಅಹಸ್ಯ ಭಾವನೆಗಳು ಹೆಚ್ಚುತ್ತಾ ಹೋಗುವಂತೆ ಮಾಡಿದುವು.

ಹನ್ನೊಂದನೇ ಶತಮಾನದ ಅಲ್ಬೆರೂನಿ ಎಂಬ ಪ್ರವಾಸಿ 'ಯಾವ ಜಾತಿಗೂ ಸೇರದ' ಎರಡು ಗುಂಪುಗಳ ಹೆಸರು ಹೇಳುತ್ತಾನೆ. ಅಂತ್ಯಜರು ಐದನೆಯ ಗುಂಪಿನವರು : ಮೇದರು ಬೆಸ್ತರು ಬೇಡರು ಇತ್ಯಾದಿ; ಆರನೆಯ ಗುಂಪಿನವರು: ಮೊಂಬ, ಚಂಡಾಲ. ಇವರು ಊರನ್ನು ಶುದ್ಧಿಗೊಳುಸುವವರು.[9]

ಮಧ್ಯಯುಗದ (11–12ನೇ ಶ.) ಹೇಮಚಂದ್ರನು 'ಖಿಖ್ಖಿರಿ', 'ಝುಂಝುರಿ'

9. ಭಾರತದಲ್ಲಿ ದೊಂಬರು ಬೇರೆ ಬೇರೆ ವೃತ್ತಿಯನ್ನವಲಂಬಿಸಿದ ಜನ. ಇವರ ಸಂಖ್ಯೆ ಸಾಕಷ್ಟು ದೊಡ್ಡದಾಗಿದೆ. ಆಂಧ್ರದಲ್ಲಿ ಊರನ್ನು ಶುದ್ಧಿಗೊಳಿಸುವವರು 'ಮಾಲಾ' ಜನ, ತಮಿಳು ನಾಡಿನಲ್ಲಿ ಪುಲಯ, ಕರ್ನಾಟಕದಲ್ಲಿ ಪೊಲೆಯ ಅಥವಾ ಹೊಲೆಯ. ಕರ್ನಾಟಕದಲ್ಲಿ ದೊಂಬರು ಬೇರೆ ಬೇರೆ ದೈಹಿಕ ಪ್ರದರ್ಶನಗಳ ಮೂಲಕ ಜನರಿಗೆ ಮನರಂಜನೆ ಮಾಡುವವರಾಗಿದ್ದಾರೆ.

ಗಳು ಸಂಸ್ಕೃತೇತರ ಅಥವಾ ದೇಶ್ಯ ಶಬ್ದಗಳೆಂದು ಹೇಳಿ, ಅವು ಚಂಡಾಲರು ಮತ್ತು ದೊಂಬರು ಊರನ್ನು ಪ್ರವೇಶಿಸುವಾಗ ಕೈಯಲ್ಲಿ ಹಿಡಿದು ಸದ್ದು ಮಾಡುತ್ತಿದ್ದ ಕೋಲುಗಳ ಹೆಸರೆಂದು ಹೇಳುತ್ತಾನೆ. ಕರ್ನಾಟಕದಲ್ಲಿ ಅಂತಹ ಕೋಲುಗಳನ್ನು 'ಕಂಕರಿಗೋಲು', 'ಸಂಬಳಿಗೋಲು' ಎಂದು ಕರೆಯುತ್ತಿದ್ದರು. ಅಸ್ಪೃಶ್ಯರು ತಮ್ಮ ಬರವನ್ನು ಕೂಗಿ ಹೇಳುವುದರ ಮೂಲಕವೋ ಸದ್ದು ಮಾಡುವುದರ ಮೂಲಕವೋ ಮೇಲ್ಜಾತಿಯವರಿಗೆ ತಿಳಿಸುವುದು ಅವರ ಕರ್ತವ್ಯವಾಗಿತ್ತು. ಅಸ್ಪೃಶ್ಯರು ಊರಲ್ಲಿ ಕೋಲು ಕುಟ್ಟಿ ಸದ್ದು ಮಾಡುತ್ತಿದ್ದ ವಿಷಯವನ್ನು ಫಾಹಿಯಾನ್ ಕೂಡ ಹೇಳುತ್ತಾನೆ. ಕಟುಕ, ಬೆಸ್ತ, ಡೊಂಬ, ಜಲಗಾರ, ಜನರನ್ನು ಗಲ್ಲಿಗೆ ಹಾಕುವವ ಇವರ ವಾಸವೆಲ್ಲ ಊರ ಹೊರಗೆ ಎಂದೂ ಮತ್ತು ಅವರ ಮನೆಗಳಿಗೆ ಗುರುತು ಮಾಡುತ್ತಿದ್ದರೆಂದೂ ಹ್ಯುಯೆನ್‌ತ್ಸಾಂಗ್ ಹೇಳುತ್ತಾನೆ. ಅವರು ಊರಲ್ಲಿ ಸಂಚರಿಸುವಾಗ ರಸ್ತೆಯ ಎಡಪಕ್ಕದಲ್ಲೇ ಹೋಗಬೇಕಾಗಿತ್ತೆಂಬ ಸ್ವಾರಸ್ಯದ ಸಂಗತಿಯನ್ನು ಅದೇ ಪ್ರವಾಸಿ ಹಿಡಿದಿಟ್ಟಿದ್ದಾನೆ.[10]

ಹನ್ನೊಂದನೇ ಶತಮಾನದ ಕಲ್ಹಣನ ರಾಜತರಂಗಿಯಲ್ಲಿ ಒಂದು ಕತೆಯಿದೆ. ಸುಯ್ಯ ಎಂಬ ಒಂಬತ್ತನೇ ಶತಮಾನದ ತಂತ್ರಜ್ಞ ಕಾಶ್ಮೀರದಲ್ಲಿ ಒಂದು ಅಣೆಕಟ್ಟು ನಿರ್ಮಾಣ ಮಾಡಿ ಕ್ಷಾಮವನ್ನು ಹೋಗಲಾಡಿಸಿದ. ಅವನು ಸುಯ್ಯಾ ಎಂಬ ಚಂಡಾಲ ಕನ್ಯೆಗೆ ಸಿಕ್ಕು, ಶೂದ್ರ ತಾಯಿಯೊಬ್ಬಳ ಮೊಲೆ ಹಾಲು ಕುಡಿದು ಬೆಳೆದವನು. ಅವನು ತನ್ನ ತಾಯಿಯ ಹೆಸರಲ್ಲಿ ನಿರ್ಮಾಣ ಮಾಡಿದ ಅಗ್ರಹಾರವನ್ನು ಬ್ರಾಹ್ಮಣರು ಸ್ವೀಕರಿಸಿದರು ಎಂದು ಕಲ್ಹಣ ಹೇಳುತ್ತಾನೆ. ಕಲ್ಹಣನಲ್ಲಿ ಚಂಡಾಲ, ದೊಮ್ಮರಲ್ಲದೆ ಚರ್ಮಕಾರರೂ ಅಸ್ಪೃಶ್ಯರೆಂದು ಕರೆಯಿಸಿಕೊಂಡಿದ್ದಾರೆ.

## ಅಸ್ಪೃಶ್ಯ ಜಾತಿಗಳು

ಇದು ಅಸ್ಪೃಶ್ಯರ ಇತಿಹಾಸ. ಪ್ರಾಚೀನ ಮತ್ತು ಮಧ್ಯಕಾಲೀನ ಕೃತಿಗಳಲ್ಲಿ ಅಸ್ಪೃಶ್ಯರಿಗೆ ಸಂಬಂಧಿಸಿದ ಮಾಹಿತಿಯನ್ನು ಮೇಲೆ ಸಂಗ್ರಹಿಸಿ ಕೊಡಲಾಗಿದೆ. ಅಸ್ಪೃಶ್ಯರು ಮೂಲತಃ ಯಾರು, ಅಸ್ಪೃಶ್ಯರ ಬಗ್ಗೆ ಉಳಿದ ಜನರ ಧೋರಣೆ ಏನಿತ್ತು, ಅಸ್ಪೃಶ್ಯರ ವಾಸ, ಉಡುಪು, ಆಹಾರ, ಆರ್ಥಿಕ ಸ್ಥಿತಿ, ಸಾಮಾಜಿಕ ಸ್ಥಾನ ಇವುಗಳ ಬಗ್ಗೆ ದೊರಕಿರುವ ಮಾಹಿತಿಯನ್ನು ಕಟ್ಟುನಿಟ್ಟಾಗಿ ಕಾಲಾನುಕ್ರಮದಲ್ಲಿ ಅಲ್ಲದಿದ್ದರೂ ಒಂದು ಸ್ಥೂಲ ರೀತಿಯಲ್ಲಿ ನಾವು ಮೇಲೆ ನೋಡಿದ್ದೇವೆ. ಅಸ್ಪೃಶ್ಯತೆ ಎನ್ನುವುದು ಭಾರತಕ್ಕೆ ವಿಶಿಷ್ಟವಾದುದು. ಬೇರೆ ದೇಶಗಳಲ್ಲಿ ಕೆಲವು ಗುಂಪುಗಳನ್ನು ಅನುಕೂಲಕರ ಸ್ಥಿತಿಯಲ್ಲಿರುವ ಜನರು ಹೀನಾಯವಾಗಿ ಕಂಡಿರುವುದುಂಟು. ಇದಕ್ಕೆ ಉದಾಹರಣೆ

10. ಪಿ.ವಿ. ನಾರಾಯಣ : ವಚನ ಸಾಹಿತ್ಯ, ಒಂದು ಸಾಂಸ್ಕೃತಿಕ ಅಧ್ಯಯನ (ಬೆಂಗಳೂರು ವಿಶ್ವವಿದ್ಯಾಲಯದ ಅಪ್ರಕಟಿತ ಪಿಎಚ್.ಡಿ ನಿಬಂಧ) ಪು. 78. ಈಗ ಗದಗಿನ ಜಗದ್ಗುರು ತೋಂಟದಾರ್ಯ ಮಠದಿಂದ ಪ್ರಕಟಿತವಾಗಿದೆ.

ಅಮೇರಿಕದ ನೀಗ್ರೋಜನ.[11] ನೀಗ್ರೋ ಜನರ ಇತಿಹಾಸ ಅವರು ಬಿಳಿಯರ ಕೈಯಲ್ಲಿ ಪಟ್ಟ ಬವಣೆ, ಅನುಭವಿಸಿದ ದೈಹಿಕ ಯಾತನೆ, ಹರಿಸಿದ ಕಣ್ಣೀರು, ಸ್ವಾತಂತ್ರ್ಯಕ್ಕಾಗಿ ಸುರಿಸಿದ ರಕ್ತಗಳಿಂದ ತುಂಬಿದೆ. ಆದರೆ, ವಿಶ್ವದ ಇತಿಹಾಸದಲ್ಲಿ ಯಾವುದೇ ಕಾಲದ ಯಾವುದೇ ದೇಶದ ಜನ ಒಂದು ದೊಡ್ಡ ಗುಂಪನ್ನು ಮುಟ್ಟಲೂ ಯೋಗ್ಯವಲ್ಲ ವೆಂದು ಊರಿನಿಂದ ಹೊರಗೆ ಇಟ್ಟ ಉದಾಹರಣೆ ಭಾರತವನ್ನು ಬಿಟ್ಟರೆ ಮತ್ತೊಂದು ಇಲ್ಲ. ಭಾರತದಲ್ಲಿ ಮುಟ್ಟಿದರೆ ಮೈಲಿಗೆಯಾಗುವ 429 ಜಾತಿಗಳಿವೆ. 'ಷೆಡ್ಯೂಲ್ಡ್ ಕ್ಯಾಸ್ಟ್ಸ್' (Scheduled castes) ಅಥವಾ ಪರಿಶಿಷ್ಟ ಜಾತಿಗಳೆಂದು ಕರೆಯುವ ಜನರ ಸಂಖ್ಯೆ ಭಾರತದ ಜನ ಸಂಖ್ಯೆಯಲ್ಲಿ ಶೇಕಡ 14.6 ರಷ್ಟಿದೆ. ಚಾತುರ್ವರ್ಣ್ಯ ವ್ಯವಸ್ಥೆಯು ಭಾರತೀಯ ಸಮಾಜವನ್ನು ನಾಲ್ಕು ಗುಂಪುಗಳಾಗಿ ಒಡೆದದ್ದು ಮಾತ್ರವಲ್ಲದೆ, ಅಸಮಾನತೆಯು ಅನುಶ್ರೇಣಿಗಳನ್ನಾಗಿ ಸಮಾಜವನ್ನು ಶಾಶ್ವತವಾಗಿ ಭಿನ್ನಗೊಳಿಸಿತು. ಈ ಅಸಮಾನತೆ ಕೇವಲ ಒಂದು ಭಾವನೆಯಲ್ಲ; ಅದಕ್ಕೆ ಕಾನೂನಿನ ಬೆಂಬಲವಿತ್ತು. ಆ ಕಾನೂನಿನ ಬೆಂಬಲದಿಂದ ಶಿಕ್ಷೆಯನ್ನು ವಿಧಿಸಲೂ ಅವಕಾಶವನ್ನು ಕೊಟ್ಟಿತು. ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಶೂದ್ರ ತೀರ ಕೆಳಗಿನ ಹಂತದಲ್ಲಿರುವುದು ಮಾತ್ರವಲ್ಲದೆ ಅವನು ಹಲವು ಬಗೆಯ ಮುಖಭಂಗಗಳಿಗೆ ತುತ್ತಾಗಿ ಹಲವು ಮಿತಿ ಗಳಿಗೆ ಒಳಗಾಗಿ ಧರ್ಮ ಗ್ರಂಥಗಳು ವಿಧಿಸಿದ ಸ್ಥಾನದಿಂದ ಅವನು ಮೇಲೇರಲು ಸಾಧ್ಯವೇ ಇರಲಿಲ್ಲ.[12] ಶೂದ್ರರಿಗೇ ಈ ಸ್ಥಿತಿಯಿರುವಾಗ ಅವರಿಗೂ ಅಸ್ಪೃಶ್ಯವಾಗಿರುವ ವರ್ಗದ ಜನ ಶೋಚನೀಯ ಸ್ಥಿತಿಯಲ್ಲಿ ಬದುಕುತ್ತಿದ್ದರು ಎಂಬುದು ಸ್ಪಷ್ಟವಾಗಿದೆ.

ಅಸ್ಪೃಶ್ಯತೆ ಜಾತಿ ವ್ಯವಸ್ಥೆಯ ಒಂದು ವಿಶಿಷ್ಟ ಆಯಾಮ. ಜಾತಿ ವ್ಯವಸ್ಥೆಯ ಮೂಲದಲ್ಲಿ ಮಡಿ ಮೈಲಿಗೆಗಳ ಕಲ್ಪನೆ, ಮೇಲು ಕೀಳುಗಳ ಕಲ್ಪನೆ, ಸಗೋತ್ರ ವಿವಾಹದ ಕಲ್ಪನೆಗಳಿವೆ. ಪ್ರತಿಯೊಂದು ಜಾತಿಯೂ ಬ್ರಾಹ್ಮಣನನ್ನು ಕೇಂದ್ರವಾಗಿಟ್ಟುಕೊಂಡು ಅಥವಾ ತೀರ ಮೇಲೆ ಇಟ್ಟು ತನ್ನ ಸ್ಥಾನವನ್ನು ನಿರ್ಣಯಿಸಿಕೊಳ್ಳುತ್ತದೆ. ಬ್ರಾಹ್ಮಣನಿ ಗಂತೂ ತನಗಿಂತ ಕೆಳಗಿನ ಎಲ್ಲರೂ ಒಂದಲ್ಲ ಒಂದು ಪ್ರಮಾಣದಲ್ಲಿ ಮೈಲಿಗೆ ಉಂಟುಮಾಡುವವರೇ. ಹಾಗೆ ನೋಡಿದರೆ, ಮೈಲಿಗೆಯ ಕಲ್ಪನೆ (defilement, pollution) ವಿಶ್ವಸಾಮಾನ್ಯವಾದುದು. ಹುಟ್ಟು, ಋತುಸ್ರಾವ, ಸಾವು, ಗರ್ಭಧಾರಣೆ

---

11. ಈ ಬಗ್ಗೆ ನೋಡಿ – Oliver C. Cox : Caste, Class and Race. (New York, 1970)

12. "Beside dividing society into four orders, the theory (of Caturvarnya) goes further and makes the principle of graded inequality the basis for determining the terms of associated life as between the four Varnas. Again, the system of graded inequality is not merely notional, it is legal and penal. Under the system of Caturvarnya, the shudra is not only placed at the botton of gradation but he is subjected to innumerable ignomities and disabilities so as to prevent him from rising above the conditions fixed for him by law" – B.R. Ambedkar : Who were the Shudras. Bombay, 1970. preface.

ಇವುಗಳಿಗೆ ಸಂಬಂಧಿಸಿದಂತೆ ಅಶೌಚದ ಭಾವನೆ ಎಲ್ಲ ದೇಶಗಳಲ್ಲೂ ಕಂಡುಬರುತ್ತದೆ. ಆದರೆ, ಅಸ್ಪೃಶ್ಯ ಉಂಟು ಮಾಡುವ ಮೈಲಿಗೆ ತೀವ್ರ ಸ್ವರೂಪದ್ದು, ಭಯಾನಕವಾದ್ದು. ಅಶೌಚ ಅಥವಾ ಮೈಲಿಗೆ ಸಾಮಾನ್ಯವಾಗಿ ತಾತ್ಕಾಲಿಕವಾದ್ದು; ಕೆಲವು ವ್ಯಕ್ತಿ ಅಥವಾ ವಸ್ತುಗಳು ಒಂದು ನಿದಿಷ್ಟ ಅವಧಿಗೆ ಮೈಲಿಗೆಯಾಗುತ್ತಾರೆ. ಒಂದು ಉದ್ದೇಶ ಸಾಧಿತವಾಗಿ ಆ ಅವಧಿ ಮುಗಿದರೆ ಮೈಲಿಗೆ ಕೊನೆಗೊಳ್ಳುತ್ತದೆ. ಆದರೆ ಅಸ್ಪೃಶ್ಯತೆಯು ಅಸ್ಪೃಶ್ಯರಿಗೆ ಶಾಶ್ವತವಾಗಿ ಅಂಟಿದ ಶಾಪ. ಅವರನ್ನು ಮುಟ್ಟಿದ ಹಿಂದೂಗಳು ಶುಚಿಗೊಳಿಸುವ ಕ್ರಿಯಾವಿಧಿಗಳ ಮೂಲಕ ಶುದ್ಧವಾಗಬಹುದು. ಆದರೆ ಅಸ್ಪೃಶ್ಯರನ್ನು ಶುದ್ಧಗೊಳಿಸುವಂತಹುದು ಇಲ್ಲವೇ ಇಲ್ಲ. ಅಂಬೇಡ್ಕರ್ ಹೀಗೆ ಹೇಳುತ್ತಾರೆ–

"Defilement as observed by the primitive society was of a temporary duration which arose during particular times such as the performance of natural crisis in the life of the individual such as birth, death, menstruation, etc. After the period of defilement was over and after the purificatory ceremonies were performed the defilement vanished and the individual became pure and associable. But the impurity of the 50-60 millions of the untouchables of[13] India quite unlike the impurity arising from birth, death, etc., is permanent. The Hindus who touch them and became the polluted thereby become pure by undergoing purificatory ceremonies. But there is nothing which can make the untouchables pure. They are born impure, they are impure while they live, they die the death of the impure and they give birth to children who are born with the stigma of untouchability affixed to them. It is a case of permanent, hereditary stain which nothing can cleanse."[14]

## ಆಧುನಿಕ ಕಾಲದಲ್ಲಿ ಅಸ್ಪೃಶ್ಯರು

ಈ ಅಸ್ಪೃಶ್ಯತೆ ಇಪ್ಪತ್ತನೇ ಶತಮಾನದವರೆಗೆ ಉಳಿದುಬಂದಿದೆ. ಮತ್ತು ಇನ್ನೂ ಹಲವು ಕಾಲ ಮುಂದುವರಿಯುವ ಲಕ್ಷಣಗಳೇ ಕಾಣಿಸುತ್ತವೆ. ಈ ಇಪ್ಪತ್ತನೇ

---

13. 1971ರ ಜನಗಣತಿ ಪ್ರಕಾರ ಭಾರತದ ಪರಿಶಿಷ್ಟ ವರ್ಗದ ಜನಸಂಖ್ಯೆ 80 ಮಿಲಿಯನ್; ಭಾರತದ ಜನಸಂಖ್ಯೆಯ ಶೇ. 14.6 ರಷ್ಟು.

14. B.R. Ambedkar : The Untouchables – Who were they and why they became untouchables. Balaramour. 1977. pp. 26-7.

ಶತಮಾನದ ಮಧ್ಯಭಾಗದವರೆಗೆ ಇದ್ದ ಪರಿಸ್ಥಿತಿಯನ್ನು ಈಗ ನೋಡೋಣ.[15] ಕರ್ನಾಟಕದ ಮಲೆನಾಡಿನ 'ಹೊಲೇರು' ಜನರು ಬ್ರಾಹ್ಮಣ ಹವ್ಯಕರಿಗೆ ವಂಶ ಪಾರಂಪರ್ಯ ದಾಸರಾಗಿದ್ದರು. ಹೊಲೆಯ ಗಂಡ ಹೆಂಡಿರು ಮದುವೆಯಾದ ದಿನ ಎಲ್ಲರ ಮುಂದೆ ಹಾಲು ಕುಡಿದರೆ ಅಲ್ಲಿಗೆ ತೋಟದ ಒಡೆಯನ ಜೀತದಾಳುಗಳಾ ದಂತೆ. ಮುಂದೆ ವರ್ಷಕ್ಕೊಮ್ಮೆ ಹಾಲು ಕುಡಿದು ತಾವು ಆಳುಗಳೆಂಬುದನ್ನು ನವೀಕರಿಸುತ್ತ ಹೋಗುತ್ತಾರೆ. ಹೊಲೆಯರು ಹೊಲದ ಆಸ್ತಿಯನ್ನು ಹೊಂದಿರು ವಂತಿಲ್ಲ. ಸ್ವತಃ ಉಳುಮೆ ಮಾಡುವಂತಿಲ್ಲ. ಅಥವಾ ಯಾವುದೇ ಸ್ವಂತ ವೃತ್ತಿಯನ್ನೂ ಕೈಗೊಳ್ಳುವಂತಿಲ್ಲ. ಆಳುಗಳಾದ ಮೇಲೆ ಅವರಿಗೆ ಮೊರಕುವ ಪ್ರತಿಫಲಗಳು ಹೀಗಿವೆ– ಪ್ರತಿದಿನವೂ ಗಂಡಸಿಗೆ ಎರಡು ಸೇರು ಹೆಂಗಸಿಗೆ ಒಂದು ಸೇರು ಭತ್ತ; ಹುಣ್ಣಿಮೆ ಅಮಾವಾಸ್ಯೆಗಳಿಗೆ ಹೆಚ್ಚು ಭತ್ತ; ವರ್ಷಕ್ಕೊಂದು ಕಂಬಳಿ; ಹಬ್ಬಕ್ಕೆ ಹೊಸಬಟ್ಟೆ. ಎಣ್ಣೆ, ಅಡಕೆ, ತಂಬಾಕು, ಔಷಧಿ, ತರಕಾರಿ ಎಲ್ಲವೂ ಯಜಮಾನನ ಮನೆಯಿಂದ; ಹಣ ಮಾತ್ರ ಇಲ್ಲ. ಹಿಂದೆ ಆಳನ್ನು ಮಾರುವ ಮತ್ತು ಕೊಳ್ಳುವ ಪದ್ಧತಿಯಿತ್ತು. ಹೊಲೆಯರು ಓಡಿಹೋಗುವಂತಿರಲಿಲ್ಲ. ಅವರು ಓಡಿ ಹೋದರೆ 'ಹೊಯ್ಲು' ಮಾಡುತ್ತಿದ್ದರು[16] (ಭೂತ ಅವರನ್ನು ಶಪಿಸುವಂತೆ ಮಾಡುವುದೇ 'ಹೊಯ್ಲು'). ಅವರ ವಿಷಯದಲ್ಲಿ ಹೆಚ್ಚು ಔದಾರ್ಯ ತೋರಕೂಡದು; ಅವರಿಗೆ ಯಾವುದೇ ಬುದ್ಧಿವಂತಿಕೆಯ ಕೆಲಸಕ್ಕೂ ಅವಕಾಶ ಕೂಡದು ಎಂಬುದು ಎಲ್ಲ ತೋಟದ ಒಡೆಯರ ಅನಧಿಕೃತ ಒಪ್ಪಂದ.[17] ಹಿಂದೆ ಪ್ರತಿ ಅಸ್ಪೃಶ್ಯರ ಮನೆಯವರೂ ಜೀತಕ್ಕೆ ಒಂಮೊಂದು ಆಳನ್ನು ಕಳುಹಿಸಬೇಕೆಂಬ ನಿರ್ಬಂಧವಿತ್ತು[18] (ಈಗ ಜೀತ ರದ್ದಾಗಿದೆ ಅಥವಾ ಕಡಮೆಯಾಗಿದೆ). ಕರ್ನಾಟಕದ ಅನೇಕ ಹಳ್ಳಿಗಳಲ್ಲಿ ಹರಿಜನರು ಚಪ್ಪಲಿ ಹಾಕಿಕೊಂಡು ಕೊಡೆ ಹಿಡಿದು ಊರೊಳಗೆ ಪ್ರವೇಶಿಸುವಂತಿಲ್ಲ, ಮತ್ತು ಅವರ ಮದುವೆ ಮೆರವಣಿಗೆಗಳು ಊರಲ್ಲಿ ಹಾದು ಹೋಗುವಂತಿಲ್ಲ. ಸಮಾಜದ ಮೇಲುವರ್ಗದ ಬಯಲುಸೀಮೆಯ ಬ್ರಾಹ್ಮಣರು, ಅಬ್ರಾಹ್ಮಣ ಮೇಲು ಜಾತಿಯ ಲಿಂಗಾಯತರಿಗಿಂತ. ಒಕ್ಕಲಿಗರಿಗಿಂತ ಹೆಚ್ಚು ಉದಾರವಾಗಿ ತಮ್ಮನ್ನು ಕಾಣುವರೆಂದು

---

15. ಈಚಿನ ವರ್ಷಗಳಲ್ಲಿ ಪರಿಸ್ಥಿತಿ ಸ್ವಲ್ಪ ಬದಲಾಯಿಸಿದೆ.

16. 'ಪುಯ್ಯಲ್' (=ಹುಯ್ಯಲು) ಪದದ ರೂಪಾಂತರವಿರಬಹುದು 'ಹುಯ್ಯಲು' ಎಂದರೆ ಗಲಾಟೆ ಎಬ್ಬಿಸುವುದು ಎಂದರ್ಥ.

17. Edward B. Harper : 'Social consequences of an unsuccessful low-caste movement'. Social Mobility in the caste system in India. (Ed. James Silverberg). Hague, 1968.

18. Mumtaz Ali Khan : Scheduled caste and their status (unpublished Ph. D. Dissertation. Bangalore University, 1973) P. 336. (ಈ ನಿಬಂಧ ಈಗ ಅಚ್ಚಾಗಿ ಪ್ರಕಟವಾಗಿದೆ).

ಕರ್ನಾಟಕದ ದಲಿತರು ಭಾವಿಸುತ್ತಾರೆಂದು ವರದಿಯಾಗಿದೆ.[19] ಅವರ ರಿಚುಯಲ್ಲು ಗಳಲ್ಲಿ ವೈದಿಕ ಎಂದು ಗುರುತಿಸಬಹುದಾದುದು ಒಂದೂ ಇಲ್ಲ.[20] ದಕ್ಷಿಣ ಕರ್ನಾಟಕದ ಹಳ್ಳಿಗಳಲ್ಲಿ ಹೊಲೆಯರು ಊರ ಹೊರಗೆ ಇದ್ದರೂ ಅವರ ಮನೆಗಳಿಂದ ಅತಿ ದೂರವಿರುತ್ತವೆ ಬ್ರಾಹ್ಮಣರ ಮತ್ತು ಲಿಂಗಾಯತರ ಮನೆಗಳು.[21] ಹಳ್ಳಿಗಳ ಬ್ರಾಹ್ಮಣರ ಫಲಾಹಾರ ಮಂದಿರಗಳಿರಲಿ, ಲಿಂಗಾಯತರ ಫಲಾಹಾರ ಮಂದಿರಗಳಿಗೂ ಅವರಿಗೆ ಪ್ರವೇಶವಿರಲಿಲ್ಲ.[22] ಅವರು ಫಲಾಹಾರ ಮಂದಿರದ ಹೊರಗೆ ನಿಂತು ತಿಂಡಿ ತಿನ್ನಬೇಕು. ತೆಂಗಿನ ಕರಟದಲ್ಲೋ, ಅವರಿಗಾಗಿ ಇರಿಸಿರುವ ಅಲ್ಯೂಮಿನಿಯಂ ಲೋಟಗಳಲ್ಲೋ ನೀರು, ಕಾಫಿ ಕುಡಿಯಬೇಕು. ಸವರ್ಣೀಯರ ಬಾವಿಗಳಲ್ಲಿ ಅವರು ನೀರು ತೆಗೆದುಕೊಳ್ಳಕೂಡದು. ನೀರು ಬೇಕಾದರೆ ಬೇರೆಯವರು ನೀರು ಸೇದಿ ಅವರ ಮಣ್ಣಿನ ಕೊಡಗಳಿಗೆ ಸುರುವಬೇಕು.[23] ಕೇರಳದಲ್ಲಿ ಎರುನಾಡನ್ ಅಸ್ಪೃಶ್ಯನು ನಂಬೂದಿರಿ ಬ್ರಾಹ್ಮಣನಿಗೆ ನೂರು ಗಜಕ್ಕಿಂತ ಆಚೆಯೇ ಇರಬೇಕು; ತೀಯನ್ ಅಸ್ಪೃಶ್ಯ ಮೂವತ್ತಾರು ಹೆಜ್ಜೆ ಹತ್ತಿರ ಬರಬಹುದು; ಪುಲಯನ್ ತೊಂಬತ್ತಾರು ಹೆಜ್ಜೆಗಿಂತ ಹತ್ತಿರ ಬರಕೂಡದು. ತೀಯನ್ ಹೊಲೆಯನು ನಾಯರ್‌ಗೆ (ಅಬ್ರಾಹ್ಮಣ ಮೇಲುಜಾತಿ) ಹನ್ನೆರಡು ಹೆಜ್ಜೆ ಹತ್ತಿರ ಬರಬಹುದು. ಕೆಲವು ಜಾತಿಗಳು ತೀಯನ್ ಹತ್ತಿರ ಹೋಗಬಹುದು, ಮುಟ್ಟ ಬಾರದು. ಪುಲಯನ್ ಯಾವುದೇ ಸವರ್ಣೀಯನ ಹತ್ತಿರವೂ ಬರಕೂಡದು; ಮಡಿವಾಳರು, ಕ್ಷೌರಿಕರು ಅಸ್ಪೃಶ್ಯರ ಸೇವೆಗೆ ಹೋಗುವುದಿಲ್ಲ.[24] ಹರಿಜನರು ಒಂದು ಮಹಡಿಗಿಂತ ಹೆಚ್ಚಿನ ಮಹಡಿಯ ಮನೆ ಕಟ್ಟುವಂತಿಲ್ಲ. ಹೊಲೆಯರು ನಂಬೂದಿರಿ ಗಳ ಮುಂದೆ ತಮ್ಮ ಮನೆಗಳನ್ನು 'ಸಗಣಿ ಗುಡ್ಡೆ'ಗಳೆಂದೇ ಕರೆದುಕೊಳ್ಳಬೇಕು. ಮಲಬಾರಿನ ಇಳವ, ಶಾನಾರರು ಕೊಡೆ ಹಿಡಿಯುವಂತಿಲ್ಲ, ಚಪ್ಪಲಿ ಧರಿಸಕೂಡದು, ಚಿನ್ನದ ಒಡವೆ ಹಾಕಕೂಡದು, ಹಸುವಿನ ಹಾಲು ಕುಡಿಯಕೂಡದು. ಉಳಿದವರಂತೆ ಶಿಷ್ಟ ಮಲಯಾಳೀ ಭಾಷೆಯಲ್ಲಿ ಮಾತನಾಡಕೂಡದು. (ಮಲಬಾರಿನಲ್ಲಿ ಆಮೆ ಆಕಾರದ ಮಣೆಯ ಮೇಲೆ ಬ್ರಾಹ್ಮಣನಿಗೆ ಮಾತ್ರ ಕುಳಿತುಕೊಳ್ಳುವ ಅಧಿಕಾರ; ಉಳಿದವರು ಕುಳಿತರೆ ಅವರಿಗೆ ಶಿಕ್ಷೆ. ಕೇರಳದ ಬ್ರಾಹ್ಮಣರು ದೊಡ್ಡ ಶಿಕ್ಷೆಗಳಿಂದ

---

19. ಅದೇ. ಪು. 440. 20. ಅದೇ. ಪು. 436 21. ಅದೇ. ಪು. 229.

22. ಬೆಂಗಳೂರು ಸಮೀಪದ ಸೋಲೂರಿನಲ್ಲಿ ಲಿಂಗಾಯತ ಹೋಟೆಲಿಗೆ ಪ್ರವೇಶವಿಲ್ಲ ವೆಂದು ದಲಿತರು ಪ್ರತಿಭಟಿಸಿ ಹೋಟೆಲ್ ಲೂಟಿ ಮಾಡಿದಾಗ ಸವರ್ಣೀಯರೆಲ್ಲ ಒಂದಾಗಿ ಅದೇ ಜಾಗದಲ್ಲಿ ಮುಸಲ್ಮಾನನಿಂದ ಹೋಟೆಲ್ ಇಡಿಸಿದರು. ಅಲ್ಲೂ ತಿಕ್ಕಾಟ ಲೂಟಿ ಆಗಿ ಕೊನೆಗೆ ದಲಿತರು ಜಯಶೀಲರಾದರು. ಈಗ ಅವರಿಗೆ ಎಲ್ಲ ಫಲಾಹಾರ ಮಂದಿರಗಳಿಗೂ ಪ್ರವೇಶವಿದೆ (ಅದೇ, ಪು. 325).

23. ನಾನು ನನ್ನ ಬಾಲ್ಯದ ದಿನಗಳಲ್ಲಿ ಬಾವಿ ನೀರು ಸೇದಿ ದಲಿತರಿಗೆ ಹಾಕಿದ್ದುಂಟು.

24. Ghurye: Caste and Race in India, Bombay, 1969 . pp. 9. 10.

ಸಂಪೂರ್ಣ ವಿಮುಕ್ತರು). ಕ್ರಿ.ಶ. 1865ರ ವರೆಗೆ ತೀಯ ಮತ್ತು ಇನ್ನೂ ಕೆಳಗಿನ ಜಾತಿ ಹೆಂಗಸರು ಸೊಂಟದಿಂದ ಮೇಲಕ್ಕೆ ಬಟ್ಟೆ ಧರಿಸುವಂತಿರಲಿಲ್ಲ.

ತಮಿಳುನಾಡಿನಲ್ಲಿ ಶಾನಾರ್ ಅಸ್ಪೃಶ್ಯರು ಬ್ರಾಹ್ಮಣನಿಗೆ ಇಪ್ಪತ್ತನಾಲ್ಕು ಹೆಜ್ಜೆ ಹತ್ತಿರ ಬಂದರೆ ಮೈಲಿಗೆ ಉಂಟಾಗುತ್ತದೆ. ಅಲ್ಲಿ ಪರೈಯರ್ ಜಾತಿಯವರು ಹೆಚ್ಚು ಸಂಖ್ಯೆಯಲ್ಲಿರುವವರು. 'ಪರೆ' (–ಹರೆ) ಬಾರಿಸುವುದು ಅವರ ಕೆಲಸ. ಅವರಿಗಿಂತ ಕೆಳಗಿನವರು ಪಳ್ಳರ್ ಶಾನರ್, ಮರವರ್, ಪುಲಯರ್. ತಮಿಳುನಾಡಿನ 'ಕಳ್ಳರ್' ಜನ ಪುಲಯರಿಗೆ (–ಹೊಲೆಯರು) ಎಂಟು ಮಿತಿಗಳನ್ನು ವಿಧಿಸಿದ್ದಂತೆ ತಿಳಿದುಬರುತ್ತದೆ: ಚಿನ್ನ ಬೆಳ್ಳಿ ಒಡವೆ ಹಾಕಕೂಡದು, ಹೆಂಗಸರು ಮೇಲೆ ಸೆರಗು ಹಾಕಿಕೊಳ್ಳಬಾರದು, ಗಂಡಸರು ಚಪ್ಪಲಿ, ಕೊಡೆ ಬಳಸಕೂಡದು ಇತ್ಯಾದಿ. ಈ ನಿಯಮಗಳನ್ನು ಮೀರಿದವರ ಮನೆಗಳನ್ನು ಸುಡುತ್ತಿದ್ದರು.[25] ತಿನ್ನವೆಲ್ಲಿ ಜಿಲ್ಲೆಯಲ್ಲಿ ಒಬ್ಬ ಪುಲಯ ಊರಲ್ಲಿ ಚಪ್ಪಲಿ ಹಾಕಿಕೊಂಡು ಬಂದದ್ದಕ್ಕೆ ಚಾಟಿಯಿಂದ ಹೊಡೆದ ಗುರುತನ್ನು ತಾವು ಕಂಡುದಾಗಿ ಡ್ಯೂಮಾಂಟ್ ಹೇಳಿದ್ದಾರೆ. (Homo Hierarchicus. P. 82) ತಮಿಳು ನಾಡಲ್ಲಿ ವಲಂಗೈ ಇಡಂಗೈ (ಬಲಗೈ, ಎಡಗೈ) ಎಂಬ ಪ್ರಬಲ ಗುಂಪುಗಳಿವೆ. ಈ ಬಲಗೈನಲ್ಲಿ ಅರವತ್ತು ಎಡಗೈನಲ್ಲಿ ಆರು ಜಾತಿಗಳಿದ್ದು ಈ ಜಾತಿಗಳಲ್ಲಿ ಮೇಲು ಕೀಳು ಜಾತಿಗಳೆಲ್ಲ ಸೇರಿವೆ. ಆದರೆ ಆ ಪದಗಳು ಈಗ ಸಾಮಾನ್ಯವಾಗಿ ಅಸ್ಪೃಶ್ಯರಿಗೆ ಸಂಬಂಧಿಸಿದಂತೆ ಬಳಕೆಯಾಗುತ್ತಿವೆ. ಪರೈಯನ್ ಬಲಗೈ, ಆದರೆ ಪುಲಯನ್ ಎಡಗೈ. ಸಾಮಾನ್ಯ ತಿಳಿವಳಿಕೆಯೆಂದರೆ ಬಲಗೈ ಗುಂಪಿನವರು ಎಡಗೈನವರಿಗಿಂತ ಶ್ರೇಷ್ಠ. ಬಲಗೈನವರ ಮದುವೆ ಚಪ್ಪರಕ್ಕೆ ಹನ್ನೆರಡು ಕಂಬಗಳಿದ್ದರೆ ಎಡಗೈನವರದ್ದು ಹನ್ನೊಂದಕ್ಕಿಂತ ಹೆಚ್ಚು ಇರಕೂಡದು. ಕರ್ನಾಟಕದ ದಕ್ಷಿಣದ ತುದಿಯಲ್ಲಿನ ಹೊಲೆಯರು ಬಲಗೈ ಎಂದೂ ಮಾದಿಗರು ಎಡಗೈ ಎಂದೂ ವಿಂಗಡಣೆಗೊಳ್ಳುತ್ತಾರೆ.[26] ಮಧ್ಯ ಮತ್ತು ಉತ್ತರ ಕರ್ನಾಟಕದಲ್ಲಿ ಹೊಲೆಯ ಮಾದಿಗರಲ್ಲಿ ಹೊಲೆಯ ಶ್ರೇಷ್ಠ ಎಂದು ನಂಬಿಕೆಯಿದ್ದರೂ ಬಲಗೈ ಎಡಗೈ ಶಬ್ದಗಳು ಬಳಕೆಯಲ್ಲಿಲ್ಲ.

---

25. Sacchidananda : 'Scheduled Castes and change'. A Survey of Research in Sociology, Vol, I. Bombay. 1974. p. 282.

26. ಎಡಗೈ, ಬಲಗೈಗಳಲ್ಲಿ ಬಲಗೈ ಶ್ರೇಷ್ಠವೆಂಬ ನಂಬಿಕೆಯಿದೆ; ಆ ಪಂಗಡಗಳಲ್ಲಿ ಪರಸ್ಪರ ಮದುವೆಗಳಿಲ್ಲ. ಊರ ಪಕ್ಕದಲ್ಲೇ ಬಲಗೈನವರಿದ್ದರೆ, ಇನ್ನೂ ದೂರಕ್ಕೆ ಎಡಗೈನವರು ವಾಸಿಸುತ್ತಾರೆ. ಸತ್ತ ದನ ಹೊರುವುದು, ಚರ್ಮ ಸುಲಿದು ಪಾದರಕ್ಷೆ ಮಾಡುವುದು ಎಡಗೈನವರ ಕೆಲಸ. ಸತ್ತ ದನದ ಮಾಂಸವನ್ನು ಅವರು ತಿನ್ನುತ್ತಾರೆ. ಬಲಗೈನವರು ಹೊಲಗಳಲ್ಲಿ ಕೂಲಿಯಾಳುಗಳಾಗಿ, ಗೌಡನ ಸಂದೇಶವಾಹಕರಾಗಿ ಕೆಲಸ ಮಾಡುತ್ತಾರೆ. ಚರ್ಮದ ಕೆಲಸಗಳನ್ನು ಅವರು ಮಾಡುವುದಿಲ್ಲ. ಕರ್ನಾಟಕದ ರಾಜಕೀಯದಲ್ಲಿ ಬಲಗೈನವರು ಮುಂದೆ ಇದ್ದಾರೆಂದು ಎಡಗೈನವರಿಗೆ ಅಸಮಾಧಾನಗಳಿವೆ.

ಮಹಾರಾಷ್ಟ್ರದ 'ಮಹರ್' ಅಸ್ಪೃಶ್ಯರು ರಸ್ತೆಯಲ್ಲಿ ಉಗುಳಕೂಡದು, ಅದನ್ನು ತುಳಿದರೆ ಉಳಿದವರಿಗೆ ಮೈಲಿಗೆ. ಕೊರಳಲ್ಲಿ ಒಂದು ಮಣ್ಣಿನ ಕುಡಿಕೆಯನ್ನು ಕಟ್ಟಿಕೊಂಡು ಅದರಲ್ಲಿ ಉಗುಳಬೇಕು. ಅವರ ನೆರಳೂ ಹೆಜ್ಜೆಗಳೂ ಮೈಲಿಗೆ. ಹೋದ ಶತಮಾನದವರೆಗೆ ಆ ಅಸ್ಪೃಶ್ಯ ಜನ ಪುಣೆ ನಗರವನ್ನು ಪ್ರವೇಶಿಸುವಂತಿರಲಿಲ್ಲ. ಕಸ ಗುಡಿಸಲು ಬೆಳಿಗ್ಗೆ ಒಂಬತ್ತರಿಂದ (ಸು. ಹನ್ನೊಂದರಿಂದ?) ಮಧ್ಯಾಹ್ನ ಮೂರರ ಒಳಗೆ ಪ್ರವೇಶಿಸಿ ತಮ್ಮ ಕೆಲಸ ಮುಗಿಸಿ ವಾಪಸಾಗಬೇಕು. ಆ ಅವಧಿಯಲ್ಲಿ ಅವರ ನೆರಳು ದೀರ್ಘವಾಗಿ ಬೀಳುವುದಿಲ್ಲವಾದ್ದರಿಂದ ಇತರ ಜನ ಅವರ ನೆರಳಿನಿಂದ ಮೈಲಿಗೆಗೊಳ್ಳುವುದನ್ನು ತಪ್ಪಿಸಿಕೊಳ್ಳಬಹುದಿತ್ತು. ನಡೆಯುವಾಗ ತಮ್ಮ ಹಿಂದೆ ಒಂದು ಮುಳ್ಳಿನ ಕಂಟಿಯನ್ನೋ ಮರದ ಕೊಂಬೆಯನ್ನೋ ಎಳೆಯುತ್ತ ತಮ್ಮ ಹೆಜ್ಜೆಗಳನ್ನು ಅಳಿಸಿಹಾಕಬೇಕಿತ್ತು. ಎದುರಿಗೆ ಬ್ರಾಹ್ಮಣ ಬಂದರೆ ಅಲ್ಲೇ ಮಲಗಿ ತನ್ನ ನೆರಳು ಅವನ ಮೇಲೆ ಬೀಳದಂತೆ ಮಾಡಬೇಕಿತ್ತು. ಗುಜರಾತಿನಲ್ಲಿ ಅಸ್ಪೃಶ್ಯರು ಜಾತಿಸೂಚಕವಾಗಿ ದನದ ಕೊಂಬನ್ನು ಧರಿಸುತ್ತಿದ್ದರು. ಪಂಜಾಬಿನಲ್ಲಿ ಮೈಲಿಗೆ ನಿಯಮಗಳು ಅಷ್ಟು ಕಠಿಣವಲ್ಲದಿದ್ದರೂ ಅಸ್ಪೃಶ್ಯರು ಸದಾ ಒಂದು ಪೊರಕೆ ಹಿಡಿದಿರಬೇಕಿತ್ತು; ತಮ್ಮ ಬರುವಿಕೆಯನ್ನು ಸೂಚಿಸಲು ಕೂಗು ಹಾಕಬೇಕಿತ್ತು. ಉತ್ತರ ಭಾರತದ ಕೆಲವೆಡೆ ಕೆಳ ಜಾತಿಯವರು ಬ್ರಾಹ್ಮಣ ತನ್ನ ಕಾಲ ಉಂಗುಟ ಅದ್ದದ ನೀರನ್ನು ಕುಡಿಯುವುದಿಲ್ಲ.

ಮಧ್ಯಪ್ರದೇಶದ 'ಬಲೈ' ಹೊಲೆಯರು ಸವರ್ಣೀಯರ ಸಮೀಪ ಬದುಕಲು ಬಯಸುವುದಾದರೆ ಅವರು ಚಿನ್ನದ ಎಳೆಯ ಅಂಚಿನ ಪಗಡಿಗಳನ್ನು (ರುಮಾಲು) ಧರಿಸಕೂಡದು. ಗಂಡಸರಿಗೆ ಬಣ್ಣದ ಅಂಚಿನ ಪಂಚೆ ಇಲ್ಲ. ಚಿನ್ನದ ಒಡವೆಗಳು ನಿಷಿದ್ಧ. ಎಷ್ಟೇ ದೂರವಿದ್ದರೂ, ಸವರ್ಣೀಯರ ಸಾವಿನ ವಿಷಯವನ್ನು ತಿಳಿಸುವುದು ಅಸ್ಪೃಶ್ಯರ ಕೆಲಸ.[27] ಬಿಟ್ಟಿ ಸೇವೆಗಾಗಿ ಹುಟ್ಟಿದವರು ಅವರು. ಅವರು ಲೋಕದ ಪಾತ್ರೆಗಳನ್ನು ಬಳಸಿದ್ದಕ್ಕೆ ಮದುವೆ ಸಮಾರಂಭಗಳಲ್ಲಿ ತುಪ್ಪವನ್ನು ಬಳಸಿದ್ದಕ್ಕೆ ಶಿಕ್ಷೆಗೊಳಗಾಗಿರುವ ಉದಾಹರಣೆಗಳಿವೆ.[28]

ಒಂದು ವಿಲಕ್ಷಣ ಪದ್ಧತಿಯೆಂದರೆ ಹೊಲೆಗೇರಿಗೆ ಬ್ರಾಹ್ಮಣರ ಪ್ರವೇಶವನ್ನು ಸಂಪೂರ್ಣ ನಿಷೇಧಿಸಿರುವುದು. ತಮಿಳುನಾಡಿನ ಪರೈಯರು ತಮ್ಮ ಕೇರಿಗೆ ಬ್ರಾಹ್ಮಣರು ಬಂದರೆ ಸೆಗಣಿ ನೀರಿನಿಂದ ಹೊಡೆಯುತ್ತಾರೆ. ತಮಗೆ ನಿರಾತಂಕವಾಗಿ ಹೊಲೆಗೇರಿಯ ಮೂಲಕ ಹಾದು ಹೋಗಲು ಅವಕಾಶ ಸಿಕ್ಕರೆ ಅದರಿಂದ ತಮಗೆ ಒಳ್ಳೆಯದಾಗುತ್ತದೆ ಎಂದು ಕರ್ನಾಟಕ ಬ್ರಾಹ್ಮಣರು ಭಾವಿಸುತ್ತಾರೆ. ತಮ್ಮ ಕೇರಿಗೆ ಬ್ರಾಹ್ಮಣ ಬಂದರೆ 'ಛೀ ಹುಚ್ಚುನಾಯಿ, ಹೋಗು' ಎಂದು ಬೈದು ಅವರ ಮೇಲೆ ಸೆಗಣಿ ನೀರು ಹಾಕಿ

27. ಕರ್ನಾಟಕದಲ್ಲಿ ಈ ಕೆಲಸ ಅಸ್ಪೃಶ್ಯರದ್ದೆ. ಸಾವಿನ ವಿಷಯವನ್ನು ಹೊತ್ತು ತರುವವನನ್ನು 'ಕಾವಡಿ ಆಳು' ಎನ್ನುತ್ತಾರೆ. ಕಾವಡಿ ಆಳಿಗೆ ಕೆಲವು ಹಕ್ಕುಗಳಿರುತ್ತವೆ.

28. B.R. Ambedkar : Annihilation of Caste. Jallundhur. 1975, p. 35, 37.

ಓಡಿಸುತ್ತಾರೆ. ಮಾದಿಗ ಹೆಂಗಸಿನ ಉಗುಳಿನಿಂದ ರೆಡ್ಡಿ ಕೋಮಟಿಗಳು ತಾವು ಶುದ್ಧರಾಗುತ್ತೇವೆ ಎಂದು ಭಾವಿಸುತ್ತಾರೆ.[29] ಕೋಮಟಿಗಳು ಬೀಡಿ ಸೇದಲು ಬೆಂಕಿ ಕೇಳುವುದರ ಮೂಲಕ ಉಪಾಯವಾಗಿ ಮದುವೆಗೆ ಹೊಲೆಯರ ಮನೆಯಿಂದ ಬೆಂಕಿ ತರುತ್ತಾರಂತೆ. ಚಪ್ಪಲಿ ಹೊಲೆಯಲು ಅದ್ದುವ ನೀರನ್ನು ಪವಿತ್ರವೆಂದು ಭಾವಿಸುವ ಹೊಲೆಯರು ಅದು ಬ್ರಾಹ್ಮಣರ ಕೈಗೆ ಹೋಗದಂತೆ ಎಚ್ಚರವಹಿಸುತ್ತಾರೆ. ಕೆಲವೆಡೆ, ಬ್ರಾಹ್ಮಣರು ತಮ್ಮ ಮದುವೆಯ ದಿನ ರಾತ್ರಿ ಗುಟ್ಟಾಗಿ ಹೊಲೆಗೇರಿಗೆ ಬಂದು 'ಸುರೆಬಾನಿ' ನೀರನ್ನು (ಚಪ್ಪಲಿ ಅದ್ದಿದ ನೀರನ್ನು), ತೆಗೆದುಕೊಂಡು ಹೋಗುತ್ತಾರೆ ಎಂಬ ವದಂತಿಗಳಿವೆ[30] (ಇದು ವಾಸ್ತವವಿರಬಹುದು).

### ಕರ್ನಾಟಕದಲ್ಲಿ ಹದಿನೆಂಟು ಜಾತಿಗಳು :

ಕರ್ನಾಟಕದಲ್ಲಿ ಹಿಂದೆ 'ಅಷ್ಟಾದಶ ಜಾತಿ' ಅಥವಾ 'ಹದಿನೆಂಟು ಜಾತಿ' ಎಂಬುದು ಒಂದು ಅಂಗೀಕೃತವಾದ ಮಾತಾಗಿದ್ದಿತು. ಜಾತಿಗಳು ಹದಿನೆಂಟಕ್ಕಿಂತ ಎಷ್ಟೋ ಹೆಚ್ಚಾಗಿದ್ದರೂ ಆ ಮಾತು ಹಾಗೇ ಉಳಿದುಕೊಂಡು ಬಂದಿತು. ಲಕ್ಷ್ಮೇಶ್ವರದ ಸು. ಕ್ರಿ.ಶ. 725ರ ಶಾಸನವೇ ಆ ಬಗ್ಗೆ ಬಹುಶಃ ಮೊದಲ ಉಲ್ಲೇಖ.[31] ಇಲ್ಲಿಯ ಹದಿನೆಂಟು ಜಾತಿಗಳಲ್ಲಿ ಬ್ರಾಹ್ಮಣರು, ವರ್ತಕರು ಸೇರಿಲ್ಲ. ವರ್ತಕ ಸಮೂಹದ ಬೇರೆ ಬೇರೆ ಘಟಕಗಳನ್ನು (ಉದಾ: ಕಂಚಗಾರರು, ತೆಲ್ಲಿಗರು ಇತ್ಯಾದಿ) 'ಉತ್ತಮ' 'ಮಧ್ಯಮ', 'ಕನಿಷ್ಠ', 'ಕನೀಯಸ' (=ಅಧಮ, ಹೀನ) ಎಂಬ ಬೇರೆ ಬೇರೆ ವರ್ಗಗಳಾಗಿ ವಿಂಗಡಿಸಿದೆ. (ಅವು ಅವರ ಆರ್ಥಿಕ ಮಟ್ಟವನ್ನವಲಂಬಿಸಿವೆಯೆಂಬುದು ಸ್ಪಷ್ಟ). ನಮಗೆ ಈ ಶಾಸನದಲ್ಲಿ ಪ್ರಸ್ತುತವೆಂದರೆ 'ಪ್ರಕೃತಿ' ಎಂಬ ಶಬ್ದ 'ಪ್ರಜೆ' 'ಜಾತಿ' ಎಂಬರ್ಥದಲ್ಲಿ ಬಳಕೆಯಾಗಿರುವುದು. ಹದಿನೆಂಟು ಜಾತಿಗಳಲ್ಲಿ ಮೊದಲನೆಯದು ಬ್ರಾಹ್ಮಣ, ಕೊನೆಯದು 'ಅಂತ್ಯಜ' ಅಥವಾ ಹೊಲೆಯ–ಎಂದರೆ ಜಾತಿಗಳಲ್ಲೆಲ್ಲ ಬ್ರಾಹ್ಮಣ ಶ್ರೇಷ್ಠ, ಹೊಲೆಯ ಕನಿಷ್ಠ ಎಂಬುದು ಸಾರ್ವತ್ರಿಕವಾಗಿ ಒಪ್ಪಿತವಾಗಿದ್ದಿತು. 'ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲ' ಎಂಬ ಪಂಪನ ಮಾತಾಗಲಿ, 'ವಿಪ್ರ

---

29. Louis Dumont : Homo Hierarchicus.

30. ಈ ಮಾತನ್ನು ದಲಿತರೊಬ್ಬರು ನನಗೆ ಹೇಳಿದರು. ಚಿತ್ರದುರ್ಗ ಜಿಲ್ಲೆಯಲ್ಲಿ ಬ್ರಾಹ್ಮಣರನ್ನು 'ಮಧ್ಯಾಹ್ನದ ಮಾದಿಗ'ರೆಂದು ದಲಿತರು ಕರೆಯುತ್ತಾರಂತೆ. ಕಾರಣ ತಿಳಿಯದು. ಮೈಸೂರು ಜಿಲ್ಲೆಯ ಬ್ರಾಹ್ಮಣರ ಕೆಳಜಾತಿಯೊಂದನ್ನು 'ಮಧ್ಯಾಹ್ನದ ಹೊಲೆಯ'ರೆಂದು ಕರೆಯುತ್ತಾರೆ.

31. "ಓಂ ಸ್ವಸ್ತಿ ಶ್ರೀ ವಿಕ್ರಮಾದಿತ್ಯ ಯುವರಾಜರ್ ಪೊರಿಗೆಱೆಯಾ ಮಹಾಜನಕ್ಕುಂ ನಗರಕ್ಕುಂ ಹದಿನೆಂಟುಂ ಪ್ರಕುತಿಗಳ್ಗುಂ ಕೊಟ್ಟ ಆಚಾರವ್ಯವಸ್ಥೆ" – Epigraphia Indica. XIV. Pp, 190-1. ಪುಲಿಗೆರೆಯ ಜನರನ್ನು ಈ ಶಾಸನ ಬ್ರಾಹ್ಮಣ ವರ್ಗ, ವರ್ತಕವರ್ಗ ಮತ್ತು ಹದಿನೆಂಟು ಪ್ರಕೃತಿ (ಅಥವಾ ಜಾತಿ) ಎಂದು ವಿಂಗಡಿಸಿದೆ.

ಮೊದಲು ಅಂತ್ಯಜ ಕಡೆಯಾಗಿ'[32] ಎಂಬ ಬಸವನ ಮಾತಾಗಲಿ ಇದನ್ನೇ ಧ್ವನಿಸುತ್ತವೆ. 'ಬ್ರಾಹ್ಮಣ ಮೊದಲಾಗಿ ಸ್ವಪಚ ಕಡೆಯಾಗಿ' ಎಂಬ ಹಾವಿನ ಹಾಳ ಕಲ್ಲಯ್ಯನ ಮಾತೂ ಅದನ್ನೇ ಹೇಳುತ್ತದೆ.[33] 'ಅಷ್ಟಾದಶಜಾತಿ' ಎಂಬ ಮಾತು ಬೇರೆ ಬೇರೆ ವಚನಕಾರರಲ್ಲಿ ಕಾಣಿಸಿಕೊಳ್ಳುತ್ತದೆ.[34] ಭೀಮಕವಿಯ ಬಸವಪುರಾಣದಲ್ಲಿ ಬಿಜ್ಜಳ 'ಹದಿನೆಂಟು ವರ್ಣ'ಗಳೂ ಆದಿಕಾಲದಲ್ಲಾದುವು ಎನ್ನುತ್ತಾನೆ. ದೇವರು ಮನುಷ್ಯನ ಜೊತೆಗೇ ಹದಿನೆಂಟು ಜಾತಿಗಳನ್ನೂ ಸೃಷ್ಟಿಸಿದನೆಂಬುದು ಅದರ ಸಾರಾಂಶ. 'ವರ್ಣ' ಎನ್ನುವ ಮಾತು 'ಜಾತಿ' ಎಂಬರ್ಥದಲ್ಲಿ ಬಳಕೆಯಾಗಿದೆ ಇಲ್ಲಿ.[35]

ಆ ಹದಿನೆಂಟು ಜಾತಿ ಜನರ ವೃತ್ತಿಗಳನ್ನು 'ಹದಿನೆಂಟು ಕಾಯಕ'ವೆಂದಿದ್ದಾನೆ ಕನ್ನಡಿ ಕಾಯಕದ ಅಮ್ಮಿದೇವ.[36] ಇಬ್ಬರು ವಚನಕಾರರು ಆ ಹದಿನೆಂಟು ಜಾತಿಗಳ ಪಟ್ಟಿಕೊಟ್ಟಿದ್ದಾರೆ. ಆ ಜಾತಿಗಳು ಸೊಡ್ಡಳ ಬಾಚರಸನ ಪ್ರಕಾರ ಪ್ರತಿ ವ್ಯಕ್ತಿಯಲ್ಲಿಯೂ ಇವೆ.

**ಸೊಡ್ಡಳ ಬಾಚರಸ**

| | | |
|---|---|---|
| 1. ಬ್ರಾಹ್ಮಣ | – | (ಶಿಖಿ) |
| 2. ಕ್ಷತ್ರಿಯ | – | (ನಯನ) |
| 3. ಬಣಜಿಗ | – | (ನಾಸಿಕ) |
| 4. ಒಕ್ಕಲಿಗ | – | (ಅಧರ, ತುಟಿ) |
| 5. ಗೊಲ್ಲ | – | (ಕರ್ಣ) |

---

32. ವಿಕ್ರಮರ್ಜುನ ವಿಜಯ, 14.48; ಬಸವಣ್ಣನವರ ಷಟ್ಸ್ಥಲದ ವಚನಗಳು (ಸಂ: ಶಿ.ಶಿ. ಬಸವನಾಳ), ವಚನ 710.

33. ಸಕಲಪುರಾತನರ ವಚನಗಳು, 2. ಪು. 724.

34. "ಜಾತಿ ಅಜಾತಿಯೆಂದು ಅಷ್ಟಾದಶ ಜಾತಿಯೊಳಗೆ ಇಕ್ಕಲಾಗದು" (ಉರಿಲಿಂಗ ಪೆದ್ದಿಗಳ ವಚನಗಳು, ವ. 249); "ಹಣವಿನಾಶೆಗೆ ಹದಿನೆಂಟು ಜಾತಿಯ ತಂದು ಭಕ್ತರ ಮಾಡುವಿರಯ್ಯಾ" (ಮಡಿವಾಳಯ್ಯನ ವಚನಗಳು, ವ. 7); "ನೂರೊಂದು ಕುಲ ಹದಿನೆಂಟು ಜಾತಿ" (ಅದೇ, ವ. 91); "ಮಿಕ್ಕ ಹದಿನೇಳು ಜಾತಿ ವಿಪ್ರರ ಕೈಯಲನುಗ್ರಹವ ಪಡೆದು" (ಹಾವಿನಹಾಳ ಕಲ್ಲಯ್ಯ. ಸಕಲ ಪುರಾತನರ ವಚನಗಳು. 2. ಪು. 731); "ಆರು ದರುಶನ ಹದಿನೆಂಟು ಜಾತಿ ಒಳಗಾದ ಜೀವಂಗಳಿಗೆ ಕುಡಿವ ನೀರು ಬೇಯಿಸುವ ಬೆಂಕಿ ಅಡಗುವ ಧರೆ ಒಂದೆನಬಹುದು" (ಢಕ್ಕೆಯ ಬೊಮ್ಮಣ್ಣ. ಶಿವಲೆಂಕ ಮಂಚಣ್ಣ ಮತ್ತು ಢಕ್ಕೆಯ ಬೊಮ್ಮಣ್ಣಗಳ ವಚನಗಳು, ಪು. 71). ಮಾಚಯ್ಯ 'ಕುಲ'ವನ್ನು ಜಾತಿಗಳಲ್ಲಿ ಬರುವ ಉಪಜಾತಿಗಳೆಂಬರ್ಥದಲ್ಲಿ ಬಳಸಿರುವಂತಿದೆ.

35. ಬಸವಪುರಾಣ, 55.12–"ಸಲುವವಷ್ಟಾದಶ ವಿವರ ವರ್ಣಂಗಳಾದಿಯಲ್ಲಿ ಇಳೆಯೊಳು, ಇವು ತಾನೀಗಲಾದವೆ."

36. ಸರ್ವಪುರಾತನರ ವಚನಗಳು, 3, ಪು. 64

6. ಕುಂಬಾರ – (ಕೊರಳು)
7. ಪಂಚಾಳ – (ಬಾಹು)
8. ಉಪ್ಪಾರ – (ಅಂಗೈ)
9. ನಾಯಿಂದ – (ನಖ, ಉಗುರು)
10. ಡೊಂಬ – (ಒಡಲು)
11. ಅಗಸ – (ಬೆನ್ನು)
12. ಬೇಡ – (ಚರ್ಮ)
13. ಕಬ್ಬಿಲ – (ಪೃಷ್ಠ, ಕುಂಡೆ)
14. ಹೊಲೆಯ – (ಒಳದೊಡೆ)
15. ಈಳಿಗ – (ಮಣಿಕಾಲು)
16. ಸಮಗಾರ – (ಕಣಗಾಲು)
17. ಮಚ್ಚಿಗ – (ಮೇಗಾಲು)
18. ಶುದ್ಧ ಮಾದಿಗ – (ಅಂಗಾಲು)

"ಇಂತೀ ಹದಿನೆಂಟು ಜಾತಿ ತನ್ನಲ್ಲಿ ಉಂಟು" ಎನ್ನುತ್ತಾನೆ ಸೊಡ್ಡಳ ಬಾಚರಸ.[37] ಮನುಷ್ಯನ ದೇಹದ ಮೇಲ್ತುದಿಯಲ್ಲಿರುವ ಜುಟ್ಟಿನಿಂದಾರಂಭಿಸಿ ಕೆಳಗಿನ ಅಂಗಾಲುವರೆಗೆ ಇರುವ ಒಂಮೊಂದು ಅಂಗಕ್ಕೂ ಒಂಮೊಂದು ಜಾತಿಯನ್ನು ಸಮೀಕರಿಸಿ ಮನುಷ್ಯ ಸಮಾಜ ಒಬ್ಬ ವ್ಯಕ್ತಿಯಿದ್ದಂತೆ, ಅದು ಒಂದು ಅಖಂಡ ವಸ್ತು, ಅದರ ಭಿನ್ನ ಭಿನ್ನ ಭಾಗಗಳೇ ಜಾತಿಗಳು ಎಂಬ ಕಲ್ಪನೆ ವಿನೂತನವಾದುದು. ಅಂಬಿಗರ ಚೌಡಯ್ಯನು "ಹದಿನೆಂಟು ಕುಲಜಾತಿ" ಉಲ್ಲೇಖ ಮಾಡಿ, ಹದಿನೇಳನ್ನು ಮಾತ್ರ ಕೊಡುತ್ತಾನೆ. ಅಲ್ಲಿ ಬಿಟ್ಟು ಹೋಗಿರುವ ಬ್ರಾಹ್ಮಣನನ್ನು ಸೇರಿಸಿದರೆ ಸಂಖ್ಯೆ ಹದಿನೆಂಟಾಗುತ್ತದೆ. ಚೌಡಯ್ಯನ ಪಟ್ಟಿ ಹೀಗಿದೆ.[38]

1. ಬ್ರಾಹ್ಮಣ (ಇವನು ಅನುಕ್ತ–ಬಹುಶಃ ದೇಹದ ಅತಿ ಎತ್ತರದ ಭಾಗಕ್ಕೆ ಸಂಕೇತ)
2. ಕಂಚುಗಾರ (ಕಣ್ಣು)
3. ಬಣಜಿಗ (ಕರ್ಣ)
4. ಈಳಿಗ (ಮೂಗು)
5. ಕುಂಬಾರ (ಕೊರಳು)

37. ಸಕಲಪುರಾತನರ ವಚನಗಳು. 2, ಪು. 681.

38. ಅಂಬಿಗರ ಚೌಡಯ್ಯನ ವಚನಗಳು. ವ. 221.

| | | |
|---|---|---|
| 6. | ಹೆಂಡಗಾರ | (ತುಟಿ) |
| 7. | ಕಲ್ಲುಕುಟಿಕ | (ಹಲ್ಲು) |
| 8. | ಮೋಪುಗಾರ | (ತಲೆ) (ಮನೆಕಟ್ಟುವ ಮರದ ಸಾಮಾನು ಮಾಡುವಾತ) |
| 9. | ಜೇಡ | (ಬೆನ್ನು) |
| 10. | ಅಕ್ಕಸಾಲಿಗ | (ಅಂಗೈ) |
| 11. | ಬಡಗಿ | (ಮುಂಗೈ) |
| 12. | ಕೋಮಟಿಗ | (ಕರ) |
| 13. | ಕಾಳಿಂಗಿ | (ಕಣಕಾಲು) |
| 14. | ಕುಡುವೊಕ್ಕಲಿಗ | (ಕುಂಡೆ) |
| 15. | ಸಮಗಾರ | (ಒಳಮೊಡೆ) |
| 16. | ಮಚ್ಚಿಗ | (ಹೊರಮೊಡೆ) |
| 17. | ಹೊಲೆಯ | (ಮೇಗಾಡಿ? 'ಮೇಗಡಿ' ಇರಬಹುದು) |
| 18. | ಬೈಲಗಂಬಾರ | (ಬುದ್ಧಿ) |

ಈ ಪಟ್ಟಿಯ ಕೊನೆಯಲ್ಲಿರುವ 'ಬೈಲಗಂಬಾರ'[39] ಜಾತಿ ಶ್ರೇಣಿಯಲ್ಲಿ ಕೊನೆಯವನು. ಅವನು ಅಸ್ಪೃಶ್ಯನಲ್ಲದಿದ್ದರೂ, ಪಟ್ಟಿಯಲ್ಲಿ ಹೊಲೆಯನಿಗಿಂತ ಕೆಳಗಿನವನೆಂದು ತೋರಿದರೂ ಅವನು ಊರಿಗೆ ಸೇರದವನಾದ್ದರಿಂದ ಹೊಲೆಯನಿಗಿಂತ ಮುಂದಿನ ಜಾಗದಲ್ಲಿಟ್ಟಿರುವಂತೆ ಊಹಿಸಬಹುದು. ಆದರೆ ಅವನನ್ನು ಮನುಷ್ಯನ ಉಳಿದ ಅಂಗಗಳಂತೆ ಒಂದು ಎಂದು ಭಾವಿಸದೆ, ಅವನನ್ನು ಅಂತರಂಗದ 'ಬುದ್ಧಿ'ಎಂದು ಭಾವಿಸಿದ್ದಾನೆ (ಟಿಪ್ಪಣಿ 39 ನೋಡಿ). ಕೆಳವರ್ಗದ ಬಗ್ಗೆ ಅಂಬಿಗರ ಚೌಡಯ್ಯ ತೋರಿರುವ ಈ ಪ್ರತಿಕ್ರಿಯೆ ಗಮನಾರ್ಹ. 'ಬೈಲಗಂಬಾರ'ನು ಜಾತಿ ಶ್ರೇಣಿಯಲ್ಲಿ ಕೊನೆಯವನಾದರೂ ಸತ್ವದಲ್ಲಿ ಉಳಿದ ಜಾತಿಗಳಿಗಿಂತ ಅವನು ಮೇಲು, ತಲೆ ಕಿವಿ ಕೈಗಳಿಗಿಂತ ಬುದ್ಧಿ ಮೇಲು ಎಂದು ನಾವು ಭಾವಿಸುವಂತೆ. "ಇಂತಪ್ಪ

39. 'ಬಯಲುಗಂಬಾರ'ರು ಊರೂರು ತಿರುಗುತ್ತ ಕಬ್ಬಿಣದ ಕೆಲಸ ಮಾಡುವವರು. ಉತ್ತರ ಕರ್ನಾಟಕದಲ್ಲಿ ಇವರನ್ನು 'ಗಿಸಾಡೆ' (ಮರಾಠಿ ಪದ) ಎಂದೂ ಕರೆಯುತ್ತಾರೆ. ಇವರ ಬಣ್ಣ ಸಾಧಾರಣವಾಗಿ ಕಪ್ಪು. ಹಳ್ಳಿಗೆ ಬಂದು ರೈತರು ನಿರುಪಯುಕ್ತ ಎಂದು ಮೂಲೆಗೆ ಹಾಕಿದ್ದ ಕಬ್ಬಿಣದ ವಸ್ತುಗಳಿಂದ ಕುಡುಗೋಲು, ಕುಡ, ಹಳಿ ಇತ್ಯಾದಿಗಳನ್ನು ಮಾಡಿ ಕೊಡುವುದರಿಂದ ಜನ ಅವರನ್ನು ಊರ ಕಮ್ಮಾರರಿಗಿಂತ ಜಾಣರೆಂದು ಭಾವಿಸುತ್ತಾರೆ. ಊರ ಹೊರಗಡೆ ತಾತ್ಕಾಲಿಕವಾಗಿ ಜೋಪಡಿ ಹಾಕಿ, ತಿದಿ ಹೂಡಿ, ಕೆಲಸಗಳು ಮುಗಿದ ಮೇಲೆ ಮುಂದಿನ ಊರಿಗೆ ತೆರಳುತ್ತಾರೆ. ಅವರು ಅಂಬಾಭವಾನಿ ಭಕ್ತರು.

ಕುಲ ಹದಿನೆಂಟು ಜಾತಿ ಎಲು ಮಾಂಸವನ್ನು ತುಂಬಿಟ್ಟುಕೊಂಡು" ಎಂದು ಹೇಳುತ್ತ, ಬಾಚರಸನಂತೆಯೇ ಚೌಡಯ್ಯನೂ ಎಲ್ಲ ಹದಿನೆಂಟು ಜಾತಿಗಳೂ ಪ್ರತಿವ್ಯಕ್ತಿಯಲ್ಲಿಯೂ ಇವೆ ಎನ್ನುತ್ತಾನೆ. (ಹೀಗಿರುವಾಗ, ಜಾತಿಯಲ್ಲಿ ಮೇಲು ಕೀಳು ಎಂದು ಹೊಡೆದಾಡುವುದು ವ್ಯರ್ಥ ಎಂಬುದು ಅವನ ವಾದ.)

ಇನ್ನು ನಮಗೆ ದೊರಕುವ ಬೇರೆ ಪಟ್ಟಿಗಳಲ್ಲಿಯೂ ಹೊಲೆಯ, ಮಾದಿಗರ ಹೆಸರುಗಳು ಕೊನೆಯಲ್ಲಿವೆ.[40]

ಕನ್ನಡ ಶಾಸನ ಕಾವ್ಯ (ವಚನ) ಗಳನ್ನು ಅವಲಂಬಿಸಿ ಹೇಳುವುದಾದರೆ ಪ್ರಕೃತಿ, ವರ್ಣ, ಜಾತಿ, ಕುಲ ಇವುಗಳನ್ನು ಬಹುತೇಕ ಸಂದರ್ಭಗಳಲ್ಲಿ ಒಂದೇ ಅರ್ಥದಲ್ಲಿ ಬಳಸುತ್ತಿದ್ದರು. ಈ ಬಗ್ಗೆ ಮುಂದೆ ವಿವರಗಳು ಬರುತ್ತವೆ.

## ಅಸ್ಪೃಶ್ಯ ಜಾತಿಗಳು, ಕರ್ನಾಟಕದಲ್ಲಿ

ಕರ್ನಾಟಕದಲ್ಲಿ ಹಿಂದೆ ಬಳಕೆಯಾಗುತ್ತಿದ್ದ ಮತ್ತು ಈಗಲೂ ಬಳಕೆಯಲ್ಲಿರುವ ಅಸ್ಪೃಶ್ಯ ಸೂಚಕ ಪದಗಳು ಇವು:[40.1]

---

40. ನೋಡಿ–ಟಿ.ವಿ. ವೆಂಕಟಾಚಲಶಾಸ್ತ್ರೀ : ಶ್ರೀವತ್ಸ ನಿಘಂಟು. ಮೈಸೂರು. 1971. ಪು. 167–8

    1. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಲಿಂಗವಂತ, ಬಣಜಿಗ, ಗಂಗಡಿಕಾರವೊಕ್ಕಲಿಗ, ಮಡಿವಾಳ, ಕೆಲಸಿಗ, ಕುರುಬ, ಕುಂಬಾರ, ಕಟುಕ, ಬಡಗಿ, ಅಕ್ಕಸಾಲೆ, ತೊರೆಯ, ಉಪ್ಪಾರ, ಬೆಸ್ತ, ಹೊಲೆಯ, ಮಾದಿಗ (ಚಿಕ್ಕದೇವರಾಜನ ಯಶೋಭೂಷಣ).
    2. ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ, ವ್ಯಾವಹಾರಿಕ, ಗೋರಕ್ಷಕ, ಶಿಲ್ಪಕ, ಪಂಚಾಳ, ಕುಂಭಕಾರ, ತಂತುವಾಯ, ಕ್ಷೌರಿಕ, ರಜಕ, ವಸ್ತ್ರಚ್ಛೇದಕ, ಚರ್ಮಕಾರ, ತಿಲಘಾತ, ಲುಬ್ಧಕ, ಚಂಡಾಲ, ಮಾತಂಗ (ತೆಲುಗು ಶಬ್ದರತ್ನಾಕರಮು ಮತ್ತು ವಿದ್ಯಾರ್ಥಿ ಕಲ್ಪತರುವುಗಳಿಂದ).

40.1 ದ್ರಾವಿಡ ಭಾಷೆಗಳಲ್ಲಿ ಅಸ್ಪೃಶ್ಯ ಎಂಬರ್ಥದ ಇನ್ನೂ ಕೆಲವು ಪದಗಳು ಹೀಗಿವೆ : ತಮಿಳು, "ಇಟಿಯಿನನ್" (<ಇಟಿ=ಕೆಳಗೆ.ಇಳಿ, ಕೀಳು); ಕೋತ, "ತಳ್" (<ತಳ್ – ಹೊರದೂಡು); ತಮಿಳು, ಮಾಲರ್/ಕನ್ನಡ, ಮಾಲ/ತೆಲುಗು, ಮಾಲ (=ಬ್ರಾಹ್ಮಣ ತಾಯಿ ಮತ್ತು ಶೂದ್ರ ತಂದೆಗೆ ಹುಟ್ಟಿದಾತ, ಹೊಲೆಯ); ಕನ್ನಡ. ಬೆಳವಾರ (<ವೆಳಿ, ವೆಲಿ=ಹೊರಭಾಗ), (A Dravidian Etymological Dictionaryಯಿಂದ). ತಮಿಳಿನಲ್ಲಿ ಅಸ್ಪೃಶ್ಯ ಜಾತಿಯವರನ್ನು "ಪಟ್ಟೈಯರ್" ಎಂದು ಕರೆಯುತ್ತಾರೆ. ಪಱೆ (ಪರೆ, ಹರೆ) ವಾದ್ಯವನ್ನು ನುಡಿಸುವವರಾದ್ದರಿಂದ ಅವರಿಗೆ ಆ ಹೆಸರು. ಕನ್ನಡ ಸಾನಂದ ಚರಿತೆಯಲ್ಲಿ (ಪು. 168) ಕಂಡು ಬರುವ ಪಱೆಗುಲ ಎಂಬುದೂ ಅದೇ ಜಾತಿಯನ್ನು ಹೇಳುತ್ತದೆ. – "ಪರಮಭಕ್ತನೆನಿಸಿ ನಾಯನಟ್ಟುಂಬ ಪಱೆಗುಲದೊಳೊಗೆವುದೆನ್ನಟಿಕೆಯೆಂದಾ ವಾಕ್ಯಮಂ..."

1. **ಹೊಲೆಯ** : ಹಳಗನ್ನಡ 'ಪೊಲೆಯ'. ತಮಿಳು, ಪುಲ್ಯೈಯನ್; ಮಲೆಯಾಳಂ, ಪುಲಯನ್. ಇವುಗಳ ಮೂಲ 'ಪೊಲೆ' (ಹೊಲೆ). ಪೊಲೆ ಎಂದರೆ ಅಶುದ್ಧ, ಕೊಳಕು ಎಂದರ್ಥ. ಪೊಲಸು, ಹೊಲಸು ಎಂಬಲ್ಲಿಯೂ ಅದೇ ಪ್ರಕೃತಿಯಿದೆ. 'ಪೊಲೆಯ' ಎಂದರೆ ಕೊಳಕಾಗಿರುವವನು ಎಂದಾಗಬಹುದು ಅಥವಾ ಮುಟ್ಟಿದರೆ ಮೈಲಿಗೆಯನ್ನು ಉಂಟು ಮಾಡುವವನು ಎಂದಾಗಬಹುದು. 'ಪೊಲತಿ' (ಸ್ತ್ರೀಲಿಂಗ).

2. **ಮಾದಿಗ** : 'ಮಾದೆಗ' ಎಂಬ ರೂಪವು ಇದೆ. (ಮಾದೆಗಿತ್ತಿ, ಮಾದಿಗಿತ್ತಿ–ಸ್ತ್ರೀಲಿಂಗ). ತುಳು, ಮಾದಿಗೆ; ತೆಲುಗು, ಮಾದಿಗ. ಮಾದಿಗ ಶಬ್ದವು ಸಂಸ್ಕೃತದ 'ಮಾತಂಗ'ದಿಂದ ಬಂದಿದೆಯೆಂದು ಹೇಳುವುದು ರೂಢಿಯಾದರೂ, ದ್ರಾವಿಡದ 'ಮಾದಿಗ' ಶಬ್ದವೇ ಸಂಸ್ಕೃತಕ್ಕೆ ಹೋಗಿರಬಹುದೆಂದು Dravidian Etymological Dictionary ಗ್ರಂಥದಲ್ಲಿ ಸೂಚಿಸಲಾಗಿದೆ. (ಪು. 320) ಮಾರಮ್ಮನಿಗೆ ಬಲಿಯಾದ ಕೋಣದಲ್ಲಿ ಕೊನೆಯ ಪಾಲು ಮಾದಿಗರದು.

3. **ಆದಿ ಕರ್ನಾಟಕ** : ಇದು 19–20ನೇ ಶತಮಾನದಲ್ಲಿ ಬಳಕೆಗೆ ಬಂದಿರುವ ಪದ. ಅಸ್ಪೃಶ್ಯರು ಈ ನಾಡಿನ ಮೂಲನಿವಾಸಿಗಳು ಎಂಬ ವಿದ್ವಾಂಸರ ಊಹೆ ಈ ಪದದ ನಿರ್ಮಾಣಕ್ಕೆ ಕಾರಣವಾಗಿರುವಂತಿದೆ. ತಾವೇ ಎಲ್ಲರಿಗಿಂತ ದೊದಲು ಇದ್ದವರು ಎಂಬ ನಂಬಿಕೆಯು ಮಾದಿಗರಲ್ಲುಂಟು. ಸೃಷ್ಟಿಗಿಂತ ಆರು ತಿಂಗಳು ಮೊದಲು ಜಾಂಬವ ಹುಟ್ಟಿದ, ಅವನಿಂದ ಯುಗಮುನಿ, ಅವನಿಂದ ಮಾದಿಗರು ಜನಿಸಿದರಂತೆ. ಮಾದಿಗರಿಗೆ ಜಾಂಬವರೆಂದೂ, ಪದ್ಮಾಜಾತಿಯವರೆಂದೂ ಹೆಸರಿವೆ. ಆದಿ ಆಂಧ್ರ, ಆದಿ ದ್ರಾವಿಡ ಎಂಬ ಮಾತುಗಳೂ ಬಳಕೆಯಲ್ಲಿವೆ.

4. **ಬೇಗಾರ** : ಇದು ಬೇಹುಗಾರದ ರೂಪಾಂತರವಿರುವಂತೆ ಕೆಲವರು ಭಾವಿಸುತ್ತಾರೆ. 'ಬೇಹು' ಎಂದರೆ ರಹಸ್ಯ, ಗುಟ್ಟು. 'ಬೇಹುಗಾರ' ಎಂದರೆ ಗೂಢಚಾರ ಎಂದರ್ಥವಾಗುವುದರಿಂದ ಮೇಲಿನ ವಿವರಣೆ ಬಹುಶಃ ಸರಿಯಲ್ಲ. 'ಬೇಗಾರಿ' ಎನ್ನುವ ಮಾತು ಒಂದು ಸಂಸ್ಥೆ ಅಥವಾ ಒಬ್ಬ ವ್ಯಕ್ತಿ ತನ್ನ ಕೈಕೆಳಗಿರುವ ವ್ಯಕ್ತಿಯಿಂದ ಬಿಟ್ಟಿ ಕೆಲಸವನ್ನು ಮಾಡಿಸಿಕೊಳ್ಳುವುದನ್ನು ಹೇಳುತ್ತದೆ. ಅಸ್ಪೃಶ್ಯರೆಲ್ಲ ಒಂದು ಕಾಲಕ್ಕೆ ಊರಿನ ಬಿಟ್ಟಿ ಕೆಲಸದವರಾಗಿದ್ದುದರಿಂದ[41] 'ಬೇಗಾರ' ಹೆಸರು ಅವರಿಗೆ ಬಂದಿರಬಹುದು.

---

41. ಚಿತ್ರದುರ್ಗ ಜಿಲ್ಲೆಯಲ್ಲಿ ಲಿಂಗಾಯತರೇ ಹೆಚ್ಚಾಗಿರುವ ಒಂದು ಹಳ್ಳಿಯಲ್ಲಿನ ಮಾದಿಗರೆಲ್ಲ 'ಬಿಟ್ಟಿ' ಕೆಲಸದವರು. ವೀರಭದ್ರನ ಉತ್ಸವದಲ್ಲಿ ದಾರಿ ಗುಡಿಸಿ ನೀರು ಸಿಂಪಿಸಿ ತೋರಣ ಕಟ್ಟುವುದು ಅವರ ಕೆಲಸ. 'ಸುದ್ದಿ ಮುಟ್ಟಿಸುವ' (–ಸಾವಿನ ಸುದ್ದಿ ತಿಳಿಸುವ) ಕೆಲಸವು ಅವರದೇ. (ಅಲ್ಲಿ 'ಸುದ್ದಿ' ಬಂತು ಎಂದರೆ ಸಾವಿನ ಸುದ್ದಿ ಬಂತು ಎಂದೇ ಅರ್ಥ). ಹಳ್ಳಿಯ ಜಮೀನುದಾರರಲ್ಲಿ ಒಂದೊಂದು ಮನೆಗೂ

**5. ದೋಹರ :** ಡೋಹರ. ಇವರು ಹೆಚ್ಚಾಗಿರುವುದು ಉತ್ತರ ಕರ್ನಾಟಕದಲ್ಲಿ ಮತ್ತು ಮನೆ ಮಾತು ಈಗ ಮರಾಠಿ. "ಚರ್ಮ ಹದಮಾಡಿ ನೀರು ಎತ್ತುವ ಕಪಲಿ (ಮಟ್ಟಿ) ಮಾಡುವ ಮುಖ್ಯ ಉದ್ಯೋಗ ಈ ಜನಾಂಗದವರಿಗೆ."[42]

**6. ದಕ್ಕಲು :** ಮೊಕ್ಕಲು. ಇವರು ಹೊಲೆಯ, ಮಾದಿಗರಿಗಿಂತ ಕೆಳಗಿನ ಜಾತಿಯವರೆಂದು ಹೇಳಲಾಗಿದೆ. ಇವರು ಸಂಚಾರಿಗಳು. ಊರಿಗೆ ಬಂದರೆ ಮಾದಿಗರು ಇವರಿಗೆ ಊಟಕ್ಕೆ ಹಾಕುತ್ತಾರೆ. ಕೀಳಗರು, ಬೀಳಗರು, ನಿಜಚುಕ್ಕರು, ಚಪ್ಪಲಿಚೇರಕರು, ಸರೋಬ ಚಂಡಾಳಿಯವರು ಎನ್ನುವವರು ಇನ್ನೂ ಕೀಳುಜಾತಿಯವರು. ಸರೋಬ ಚಂಡಾಳಿಯವರಿಗೆ ಕೊರವರೆಂಬ ಹೆಸರೂ ಇದೆ (ವಿವರಗಳಿಗೆ ನೋಡಿ–ಅರವಿಂದ ಮಾಲಗತ್ತಿ: 'ಡಕ್ಕಲಿಗರು'. ಜಾನಪದ ಜಗತ್ತು, 2.2; 2.3).

**7. ಕಾಟಕ :** ಇದನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಕಾಟ ಕೊಡುವವನು ಎಂದು ವಿವರಿಸಿದ್ದರೂ, ಬಹುಶಃ ಇದು 'ಕಾಡು' ಶಬ್ದದಿಂದ ಬಂದಿರಬಹುದು. ಕಾಡಿನಲ್ಲಿ ವಾಸವಾಗಿದ್ದವನು ಎಂದಾಗಬಹುದು. ಅಥವಾ "ಕಟುಕ" (<ಕಡಿ) ಆಗಿರಬಹುದು.

**8. ಕಪ್ಪು ಜನ :** ಇದು ಗಮನಿಸಬೇಕಾದ ಪದ. ಈ ಪದದ ಬಳಕೆ ಎಂದಿನಿಂದ ಆರಂಭವಾಯಿತೋ ತಿಳಿಯದು. ಹೊರಗಿನಿಂದ ಬಂದ ಜನರ ಕಣ್ಣಿಗೆ ಮೂಲನಿವಾಸಿಗಳು ಕಪ್ಪು ಜನರಾಗಿ ಕಾಣಿಸಿರುವುದು ಅಸಂಭವವಲ್ಲ. ಅಸ್ಪೃಶ್ಯ ವರ್ಗ ಈ ನಾಡಿನ ಮೂಲ ನಿವಾಸಿಗಳೆಂಬುದಕ್ಕೆ ಒಂದು ಜಾನಪದ ಸಂಪ್ರದಾಯವು ಸಾಕ್ಷಿಯನ್ನು ಒದಗಿಸುತ್ತದೆ. ಚಲವಾದಿ ಅಥವಾ ಕುಳವಾಡಿಯು ಬಲಗೈ ಗುಂಪಿನ ಹದಿನೆಂಟು ಜಾತಿಗೆ ಸೇರಿದವನು. ಚಲವಾದಿಯಾಗಿ ಹದಿನೆಂಟು 'ಫಣ'ಗಳ[42.1] ಸಭೆ

---

ಒಂದೊಂದು ಮಾದಿಗರ ಮನೆ ಸಂಬಂಧಿಸಿದೆ. ಆಯಾ ಮಾದಿಗ ಆ ಜಮೀನುದಾರನಿಗೆ ಪಾದರಕ್ಷೆ ಮಿಣಿ ಮಾಡಿಕೊಡಬೇಕು. ಆ ಮನೆಯ ಒಂದು 'ಗಂಡಾಳು' ಮತ್ತು ಒಂದು 'ಹೆಣ್ಣಾಳು' ಆ ಜಮೀನುದಾರ ಹೇಳಿ ಕಳುಹಿಸಿದಾಗಲೆಲ್ಲ ಕೆಲಸಕ್ಕೆ ಹೋಗಬೇಕು. ಆ ಆಳುಗಳಿಗೆ ಬೇರೆ ಕಡೆ ಕೆಲಸಕ್ಕೆ ಹೋದರೆ ಐದು ರೂಪಾಯಿ ಸಿಗುತ್ತಿದ್ದರೂ ಅದನ್ನು ಕೈಬಿಟ್ಟು ತಮ್ಮ ಜಮೀನುದಾರನ ಕೆಲಸ ಮಾಡಿಕೊಟ್ಟು ಅವನು ಕೊಡುವ ಒಂದು ರೂಪಾಯಿ ತೆಗೆದುಕೊಳ್ಳಬೇಕು. ವರ್ಷಕ್ಕೊಮ್ಮೆ ಆ ಜಮೀನುದಾರನಿಂದ ಅವರಿಗೆ 'ಆಯ' ಸಿಕ್ಕುತ್ತದೆ.

42. 'ಮಾಯಪ್ರಸಾದ' : ಪರಮಪ್ರಸಾದಿ ಮಹಾಶಿವಶರಣ ಕಕ್ಕಯ್ಯ. ಬೆಂಗಳೂರು, 1980. ಪು. 9.

42.1 'ಫಣ' ಎಂಬುದು ವೃತ್ತಿಯನ್ನು ಹೇಳುತ್ತದೆ. ಹದಿನೆಂಟು ಫಣಗಳು ಸ್ಥೂಲವಾಗಿ ಹದಿನೆಂಟು ಜಾತಿಗಳು. ಇವು ಬಲಗೈ, ಎಡಗೈ ಎಂದು ವಿಂಗಡಣೆಗೊಳ್ಳುತ್ತವೆ. 'ಬಲಗೈ' ಫಣಗಳು ಇವು : ಬಣಜಿಗ, ಒಕ್ಕಲಿಗ, ಗಾಣಿಗ (ಒಂಟೆತ್ತು), ರಂಗಾರೆ, ಲಾಡ,

ಸೇರಿಸುವವನು ಆತ. ಕುಳವಾಡಿಯಾಗಿ ಆತ ಪಟೇಲನ ಮುಂದೆ ರೆವಿನ್ಯೂ ಅಧಿಕಾರಿಗಳ ಮುಂದೆ ಹಳ್ಳಿಗರನ್ನು ಹಾಜರುಪಡಿಸುವವನು. ಚಲವಾದಿ ಎಲ್ಲ ಫಣಗಳ ಚಿಹ್ನೆಗಳಿಗೆ ಸಂಕೇತವಾದ ಗಂಟೆ, ಸೌಟುಗಳ ರಕ್ಷಕ. ಹಿತ್ತಾಳೆಯ ಗಂಟೆ ಸೌಟುಗಳನ್ನು ಅದೇ ಲೋಹದಲ್ಲಿ ಮಾಡಿದ ಸರಪಳಿಯಿಂದ ಸೇರಿಸಿರುತ್ತಾರೆ.[43] ಗಂಟೆ ಬಾರಿಸುತ್ತ ಚಲವಾದಿ ಬಲಗೈ ಜಾತಿಗಳ, ಮೆರವಣಿಗೆಗಳ ಮುಂದೆ ಸಾಗುತ್ತಾನೆ. ಅವನ ಸೌಟಿನಲ್ಲಿ ಒಕ್ಕಲಿಗರ ನೇಗಿಲು, ಬಣಜಿಗರ ತಕ್ಕಡಿ, ಕುರುಬರ ಕತ್ತರಿ, ಒಡ್ಡರ ಗುದ್ದಲಿ, ಕ್ಷೌರಿಕರ ಕತ್ತಿ, ಕುಂಬಾರರ ಚಕ್ರ ಇತ್ಯಾದಿ ಕೆತ್ತಲಾಗಿರುತ್ತದೆ. ಸೌಟಿನ ಬುಡದಲ್ಲಿ ಕತ್ತೆಯ ಚಿತ್ರವೂ ಒಬ್ಬ ಬಸವಿಯ ಚಿತ್ರವೂ ಇರುತ್ತದೆ. ಯಾವುದೇ ಸಾವು ಆದಾಗ ಹೆಣವನ್ನು ಹೂಳಲು ಅವನಿಂದ ಭೂಮಿಯನ್ನು (6' x 4') ಕೊಂಡುಕೊಳ್ಳಬೇಕು. ಇದನ್ನು 'ನೆಲಹಾಗ'ವೆಂದು ದಕ್ಷಿಣ ಕರ್ನಾಟಕದಲ್ಲಿ ಕರೆಯುತ್ತಾರೆ. (ನೆಲಹಾಗದ ಉಲ್ಲೇಖ ಹರಿಶ್ಚಂದ್ರ ಸಾಂಗತ್ಯ ಮತ್ತು ತುರಂಗ ಭಾರತಗಳಲ್ಲಿ ಉಂಟು. ನೋಡಿ– ಹರಿಶ್ಚಂದ್ರ ಸಾಂಗತ್ಯ. ಸಂ: ಎನ್. ಬಸವಾರಾಧ್ಯ, ಮೈಸೂರು. 1954, ಪು 73; ತುರಂಗ ಭಾರತ. ಮುಂಬಯಿ. 1889. ಪು. 169) ಭೂಮಿಯೆಲ್ಲವೂ ಮೊದಲು ಕುಳವಾಡಿಗೆ ಸೇರಿತ್ತೆಂದು ಜನರು ನಂಬುತ್ತಾರೆ. ಮಾದಿಗರಿಗೆ ಜಾಂಬವರು ಎಂದೂ ಹೆಸರುಂಟು. ರಾಮಾಯಣದ ಜಾಂಬವ, ಅವನಿಂದ ತಾವು ಹುಟ್ಟಿದವರು ಎಂದೂ, ಜಾಂಬವನು ಈ ಪ್ರಪಂಚ ಹುಟ್ಟುವುದಕ್ಕೆ ಆರು ತಿಂಗಳ ಮೊದಲೇ ಜನಿಸಿದ್ದನೆಂದೂ ಮಾದಿಗರು ನಂಬುತ್ತಾರೆ. ಎಂದರೆ, ಉಳಿದ ಎಲ್ಲ ಜನರಿಗಿಂತ ತಾವೇ ಪ್ರಾಚೀನರು, ಮೂಲಪುರುಷರು ಎಂಬುದನ್ನು ಅವರು ತಮ್ಮ ಜಾತಿಸ್ಮರಣ ಕಥೆಗಳಲ್ಲಿ (Caste

---

ಗುಜರಾತಿ, ಕಾಮಟಿ, ಜೈನ ಅಥವಾ ಕೋಮಟಿ, ಕುರುಬ, ಕುಂಬಾರ, ಅಗಸ, ಬೆಸ್ತ, ಪದ್ಮಸಾಲೆ, ನಾಯಿಂದ, ಉಪ್ಪಾರ, ಚಿತ್ರಗಾರ, ಗೊಲ್ಲ, ಹೊಲೆಯ. 'ಎಡಗೈ' ಫಣಗಳು ಇವು : ಬಡಗಿ, ಕಂಚಗಾರ, ಕಮ್ಮಾರ, ಕಲ್ಕುಟಿಗ, ಅಕ್ಕಸಾಲೆ, ಭೇರಿ, ದೇವಾಂಗ, ಹೆಗ್ಗಾಣಿಗ, ಬೇಡ, ತೊರೆಯ, ತಿಗಳ, ಮಾದಿಗ. ಇವೆರಡನ್ನೂ ಸೇರಿಸಿದರೆ ಹದಿನೆಂಟಕ್ಕೆ ಹೆಚ್ಚಾಗುತ್ತದೆ, ನಿಜ. 'ಹದಿನೆಂಟು' ಎಂಬುದು ಒಂದು ಸ್ಥೂಲವಾದ ಸಂಖ್ಯೆ. ಬ್ರಾಹ್ಮಣರು ಕ್ಷತ್ರಿಯರು ಸಾಮಾನ್ಯವಾಗಿ ಹದಿನೆಂಟು ಫಣಗಳಲ್ಲಿ ಸೇರ್ಪಡೆಯಾಗುವುದಿಲ್ಲ. (C. Hayavadana Rao: Mysore Gazetteer. I. Bangalore. 1927. pp. 178-9.)

43. ಇದನ್ನು 'ದೇಶಮುದ್ರೆ ಗಂಟೆಬಟ್ಲು' ಎಂದೂ ಕರೆಯುತ್ತಾರೆ (ಕೆಲವೆಡೆ 'ಚಲವಾದಿ ಗಂಟೆ ಶೆಟ್ಟಿಬಟ್ಲು' ಎಂಬ ಹೆಸರೂ ಇದೆ). ಚಲವಾದಿಗಳು ಸಾವಿನ ಸುದ್ದಿಯನ್ನು ಸಂಬಂಧಿಸಿದವರಿಗೆ ಮುಟ್ಟಿಸುವ ಕಾರ್ಯವನ್ನು ಮಾಡುತ್ತಾರೆ. ಆತನಿಗೆ ವರ್ಷದ ಕೊನೆಯಲ್ಲಿ 'ಆಯ' ಉಂಟು. ಆತನ 'ಬಟ್ಟಲಿ'ಗೆ ಸಂತೆಯಲ್ಲಿ ವ್ಯಾಪಾರಗಾರರು ತಮ್ಮ ಅಂಗಡಿಯ ವಸ್ತುಗಳನ್ನು ಹಾಕುತ್ತಾರೆ. ಮದುವೆಯ ದಿನ ಚಲವಾದಿಯ ಗಂಟೆ ಬಟ್ಟಲನ್ನು ಲಿಂಗಾಯತರು ಮನೆಯೊಳಗೊಯ್ದು ಪೂಜಿಸುವ ರೂಢಿಯೂ ಇದೆ. (ನೋಡಿ–ಟಿ. ಗೋವಿಂದರಾಜು : 'ಚಲವಾದಿ–ಕೆಲವು ಮಾಹಿತಿಗಳು.' ಜಾನಪದ ಜಗತ್ತು. 1.6. ಪು. 4–5.)

Memory Stories) ಉಳಿಸಿಕೊಂಡು ಬಂದಿದ್ದಾರೆ. (ಮಧ್ಯ ಭಾರತದ ಹಳ್ಳಿಗಳಲ್ಲಿ ಹೊಲಗಳ ಗಡಿವಿವಾದದ ನ್ಯಾಯ ತೀರ್ಮಾನದಲ್ಲಿ ಅಸ್ಪೃಶ್ಯನ ಪಾತ್ರ ಮುಖ್ಯವಾಗಿರುತ್ತದೆ. ಅವನು ವಿವಾದದ ಗಡಿಯುದ್ದಕ್ಕೂ ತಲೆ ಮೇಲೆ ಗಡಿಗೆ ಹೊತ್ತು ಕೈಯಲ್ಲಿ ತನ್ನ ಮಗನನ್ನೋ ಮಣ್ಣನ್ನೋ ಹಿಡಿದು ನಡೆಯುತ್ತಾನೆ). ಎಂದರೆ, ಭೂಮಿ ಅವನಿಗೆ ಸೇರಿದ್ದು ಎಂಬ ನಂಬಿಕೆ ಇಂತಹ ಆಚರಣೆಗಳ ಹಿನ್ನೆಲೆಯಲ್ಲಿ ಇರುವಂತಿದೆ.

ಮೇಲಿನ ಹೆಸರುಗಳಲ್ಲದೆ, ಹಿಂದೆ ಬಳಕೆಯಲ್ಲಿದ್ದ ಕೆಲವು ಹೆಸರುಗಳು ಇವು.

**9. ಅಂತ್ಯಜ :** ಇದರ ಅರ್ಥ ಸ್ಪಷ್ಟ. (ಹಿಂದೆ ನೋಡಿ)

**10. ಪಂಚಮ :** ಇದರ ಅರ್ಥವೂ ಸ್ಪಷ್ಟವೇ. ಕನ್ನಡದಲ್ಲಿ ಬಹು ಹಿಂದಿನಿಂದ ಈ ಮಾತಿಗೆ ಅಸ್ಪೃಶ್ಯನೆಂಬ ಅರ್ಥವಿದ್ದರೂ[44] ಸಂಸ್ಕೃತದಲ್ಲಿ 'ಐದನೆಯದು' ಎಂಬರ್ಥವಿದೆಯೇ ಹೊರತು ಹೊಲೆಯ ಎಂಬರ್ಥವಿಲ್ಲ. (ಆಪ್ಟೆ, ಮೋನಿಯರ್ ವಿಲಿಯಂಸ್ ಅವರ ಸಂಸ್ಕೃತ ಕೋಶಗಳನ್ನು ನೋಡಿ.) 'ಪಂಚಮ' ಮಾತಿಗೆ ಐದನೆಯ ವರ್ಣ ಎಂಬರ್ಥ ಬರುವ ಸಾಧ್ಯತೆಯಿರುವುದರಿಂದ ಮತ್ತು ಹೊಲೆಯರನ್ನು ವರ್ಣದ ವ್ಯಾಪ್ತಿಯೊಳಗೆ ಪರಿಗಣಿಸಲು ಸಂಸ್ಕೃತ ವಿದ್ವಾಂಸರು ಬಯಸಲಿಲ್ಲವಾದುದರಿಂದ ಬಹುಶಃ 'ಪಂಚಮ' ಶಬ್ದವನ್ನು ಅಲ್ಲಿ ಅಸ್ಪೃಶ್ಯ ಎಂಬರ್ಥದಲ್ಲಿ ಬಳಸಲಿಲ್ಲ. ದೇಶೀಯ ಭಾಷೆಗಳಲ್ಲಿ ಆ ಅರ್ಥ ನಿಸ್ಸಂಕೋಚವಾಗಿ ಬೆಳೆದು ಬಂದಿದೆ.

**11. ಅನಾಮಿಕ :** ಅನಾಮಕ. ಇದಕ್ಕೆ ಸಂಸ್ಕೃತದಲ್ಲಿ "ಹೆಸರಿಲ್ಲದವನು, ಅಪ್ರಸಿದ್ಧ, ಉಂಗುರ ಹಾಕುವ ಬೆರಳು" ಎಂಬರ್ಥಗಳಿವೆಯೇ ಹೊರತು ಅಸ್ಪೃಶ್ಯ ಎಂಬರ್ಥವಿಲ್ಲ (ಆಪ್ಟೆ, ಮೋನಿಯರ್ ವಿಲಿಯಂಸ್ ಸಂಸ್ಕೃತ ಕೋಶಗಳನ್ನು ನೋಡಿ). ಕನ್ನಡದಲ್ಲಿ ಆ ಮಾತಿಗೆ ಅಸ್ಪೃಶ್ಯ ಎಂಬ ಅರ್ಥವಿದೆ. ಬಹು ಹಿಂದಿನಿಂದ ಅನಾಮಿಕ, ಅನಾಮಕ ಎಂದರೆ ಹೆಸರಿಲ್ಲದವನು, ಹೆಸರಿಗೆ ಅನರ್ಹ, ಎಂದರೆ ಯಾವುದೇ ಹೆಸರಾದರೂ ಅವನಿಗೆ ಆಗಬಹುದು ಎಂಬುದು ಒಂದರ್ಥ; ಅಥವಾ ಹೆಸರು ಹಿಡಿದು ಕರೆಯಬಾರದವನು (ಬಾಯಲ್ಲಿ ಹೆಸರು ಬಂದರೆ ಮೈಲಿಗೆ ಉಂಟು

---

44. ಬ್ರಹ್ಮಶಿವನ (12ನೇ ಶ.) ಸಮಯ ಪರೀಕ್ಷೆ (ಸಂ: ಬಿ.ಎಸ್. ಕುಲಕರ್ಣಿ. ಧಾರವಾಡ. ಪು. 367) ನೋಡಿ.

"ಒಕ್ಕಲಿಗನಕ್ಕೆ ಪಂಚಮ । ನಕ್ಕೆಮ ವೇದಮನೆ ಕೇಳಲಾಗದೆಂದೂಳ್ವರ್ ತಕ್ಕರಿನರಿದುಂ ವೇದ । ಕ್ಕೊಕ್ಕಲಿಗಂ ಭಕ್ತಿ ಮಾಳ್ಪುದಾವುದು ದುಃಖಂ ॥" 'ಪಂಚಮಂ' ಎಂದರೆ ಶಬ್ದಮಣಿದರ್ಪಣಕಾರನ ಪ್ರಕಾರ 'ತುಟಿಲ್ ಸಂದಂ' (=ವೀರ). ಮಂಗರಾಜ "ನೆರೆ ಪಂಚಮಂ ಪದ್ಯನಕ್ಕು" ಎನ್ನುತ್ತಾನೆ 'ಪದ್ಯ' ಅಥವಾ ಪಾದಜ (ಪಾದದಿಂದ ಹುಟ್ಟಿದವನು) ಎಂದರೆ ಶೂದ್ರನಾಗಬೇಕು. ಇಲ್ಲಿ ಬ್ರಹ್ಮಶಿವ ಶೂದ್ರ ಹೊಲೆಯರ ಮಧ್ಯೆ ಹೆಚ್ಚು ಭೇದ ಮಾಡಲು ಹೋಗಿಲ್ಲ. ಒಕ್ಕಲಿಗರೋ ಅಸ್ಪೃಶ್ಯರೋ ಬಲ್ಲವರಿಂದ ವೇದಗಳನ್ನು ತಿಳಿದರೆ ತಪ್ಪಿಲ್ಲವೆಂಬ ಬ್ರಹ್ಮಶಿವನ ಮಾತು ಗಮನಾರ್ಹ.

ಮಾಡುವವನು) ಎಂಬುದೂ ಆಗಬಹುದು. ರಾಘವಾಂಕನಲ್ಲಿ 'ಅನಾಮಿಕ' ಪದ ಪ್ರಯೋಗವಿದೆ. 'ಅನಾಮಿಕ ನಾಚಯ್ಯ'ನೆಂಬ ವಚನಕಾರನೇ ಇದ್ದಾನೆ.

**12. ಶ್ವಪಚ :** ಈ ಮಾತಿನ ವಿವರಣೆ ಹಿಂದೆಯೇ ಬಂದಿದೆ. (ನಾಯಿ ಮಾಂಸವನ್ನು ಬೇಯಿಸಿ ತಿನ್ನುವವನು, ತೀರ ಕೆಳಜಾತಿಯವನು ಎಂಬುದು ಪದದ ಅರ್ಥ.) ಅಸ್ಪೃಶ್ಯ ಭಕ್ತ ಶ್ವಪಚಯ್ಯನು ಬ್ರಾಹ್ಮಣ ಸಾಮವೇದಿಯ ಗರ್ವಭಂಗ ಮಾಡಿದ ಕತೆ ಕನ್ನಡದಲ್ಲಿ ಜನಪ್ರಿಯವಾಗಿದ್ದಿತು.

**13. ಚಂಡಾಲ :**

**14. ಸಮಗಾರ :** ಚಂಬಾರ–ಸಂ. ಚರ್ಮಕಾರ; ಇದೇ ಉತ್ತರ ಭಾರತದಲ್ಲಿ 'ಚಮಾರ್'[45] ಉತ್ತರ ಕರ್ನಾಟಕದ ಸಮಗಾರರಲ್ಲಿ ಬಹು ಜನರು ಮರಾಠಿ ಮಾತನಾಡುತ್ತಾರೆ.

**15. ಸಂಬೋಳಿ :** ಮಧ್ಯಕಾಲೀನ ಕರ್ನಾಟಕದಲ್ಲಿ ಹೊಲೆಯರನ್ನು ಸಂಬೋಳಿಗಳೆಂದು ಕರೆಯುತ್ತಿದ್ದರು. 'ಸಂಬೋಳಿ' ಪದದ ಮೊದಲ ಉಲ್ಲೇಖ ಕನ್ನಡದಲ್ಲಿ ಮೊದಲನೆಯ ನಾಗವರ್ಮನ (ಸು. 990) ಕರ್ಣಾಟಕ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತದೆ. ಬಸವಣ್ಣನ ಸಮಕಾಲೀನನಾಗಿ ಸಂಬೋಳಿ ನಾಗಿದೇವ ಎಂಬ ಹೆಸರಿನ ಹರಿಜನ ಶಿವಭಕ್ತನಿದ್ದ ಮತ್ತು ಅವನು ವಚನಕಾರನೂ ಹೌದು. ಹರಿಜನರು ಸವರ್ಣೀಯರ ಊರೊಳಕ್ಕೆ ಬರುವಾಗ 'ಸಂಬೋಳಿ' ಎಂದು ಕೂಗುತ್ತ ಕೋಲಿನಿಂದ ನೆಲವನ್ನು ಕುಟ್ಟುತ್ತ ಬರಬೇಕಿತ್ತು. ಆ ಕಾರಣ ಅವರನ್ನು ಸಂಬೋಳಿಗಳೆಂದೂ, ಅವರ ಕೋಲನ್ನು ಸಂಬಳಿಗೋಲೆಂದೂ ಕರೆಯುತ್ತಿದ್ದರು. ಪಂಜಾಬಿನಲ್ಲಿ ಈಗಲೂ ಅಸ್ಪೃಶ್ಯರು ಊರೊಳಗೆ ಬರುವಾಗ ಕೂಗಿ ಹೇಳಬೇಕು. ಹೀಗೆ ಸದ್ದು ಮಾಡುವ ಪದ್ಧತಿಯನ್ನು ಫಾಹಿಯಾನನೂ ಉಲ್ಲೇಖಿಸಿದ್ದಾನೆ.[46] ಹೇಮಚಂದ್ರನು ಚಂಡಾಲರು ಮತ್ತು ಮೊಂಬರು ನೆಲಕ್ಕೆ ಕುಟ್ಟುವ ಕೋಲುಗಳನ್ನು "ಝುಂಝುರಿ" ಎಂದೂ, "ಖಿಖ್ಖಿರಿ" ಎಂದೂ ಕರೆಯುತ್ತಾನೆ. ಅವನ ಪ್ರಕಾರ ಇವು ದೇಶ್ಯ ಶಬ್ದಗಳು. "ಖಿಖ್ಖಿರಿ" ಎಂಬುದೇ ರಾಘವಾಂಕನಲ್ಲಿ ಬರುವ 'ಕಂಕರಿಗೋಲು'. 'ಸಂಬೋಳಿ'

---

45. ಇವರ ಜೀವನ ವಿಧಾನದ ಬಗ್ಗೆ, ನೋಡಿ – Geo W. Briggs : The Chamaars. Delhi. 1975. 'ಚಮ್ರೌಟಿ' ಎಂಬುದು ಚಮ್ಮಾರರ ಕೇರಿಯನ್ನು ಹೇಳುತ್ತದೆ (ಅದೇ. ಪು. 20) ಇದು ಬಹುಶಃ 'ಚಮಾರ್+ಹಟ್ಟಿ' ಆಗಿರುವಂತಿದೆ. 'ಹಟ್ಟಿ' ದ್ರಾವಿಡ ಅಥವಾ ಕನ್ನಡ ಶಬ್ದ.

46. ಪಿ.ವಿ. ನಾರಾಯಣ : ವಚನ ಸಾಹಿತ್ಯ–ಒಂದು ಸಾಂಸ್ಕೃತಿಕ ಅಧ್ಯಯನ. (ಬೆಂಗಳೂರು ವಿಶ್ವವಿದ್ಯಾಲಯದ ಅಪ್ರಕಟಿತ ಪಿಎಚ್.ಡಿ. ನಿಬಂಧ). ಪು. 78. (ಈಗ ಈ ಕೃತಿ ಪ್ರಕಟವಾಗಿದೆ).

ಶಬ್ದದ ಹೆಚ್ಚಿನ ಉಲ್ಲೇಖಗಳು ಮುಂದೆ ಬರುತ್ತವೆ. ಇದು ಮರಾಠಿಯ 'ಸಂಭಾಳ' (=ಎಚ್ಚರ) ಎಂಬುದಕ್ಕೆ ಸಂಬಂಧಿಸಿದ ಜ್ಞಾತಿಪದವಿರುವ ಸಾಧ್ಯತೆಗಳಿವೆ. "ನಾವು ಬರುತ್ತಿದ್ದೇವೆ. ಎಚ್ಚರ, ದೂರವಿರಿ" ಎಂಬುದರ ಸೂಚನೆಯೇ 'ಸಂಬೋಳಿ' ಎಂಬ ಕೂಗು. ಉತ್ತರ ಕರ್ನಟಕದಲ್ಲಿ ಜಾತ್ರೆಗಳಲ್ಲಿ ಹಿಂದೆ 'ಸಂಬಾಲ್ ಸಂಬಾಲ್' (=ದೂರ ಹೋಗಿ, ದಾರಿ ಬಿಡಿ) ಎಂದು ಕೂಗಿಕೊಂಡು ಸನ್ಯಾಸಿಗಳು ಬರುತ್ತಿದ್ದುದನ್ನು ನನ್ನ ಗೆಳೆಯರೊಬ್ಬರು ಹೇಳಿದ್ದಾರೆ.

ಇಲ್ಲಿ ದಲಿತ ಜಾತಿಯ ಎಲ್ಲ ಹೆಸರುಗಳನ್ನು ಪಟ್ಟಿಮಾಡಲು ಹೋಗಿಲ್ಲ. ಎಷ್ಟೋ ದಲಿತ ಜಾತಿ, ಉಪಜಾತಿಗಳ ಹೆಸರು ಬಿಟ್ಟು ಹೋಗಿವೆ. ಉದಾಹರಣೆಗೆ, ಕೊರಗ ಮತ್ತು ಅಂಡೆ ಕೊರಗ. ಆದರೆ ಮೇಲಿನ ಹದಿನಾಲ್ಕು ಹೆಸರುಗಳ ಭಾಷಿಕ, ಸಾಮಾಜಿಕ ಹಿನ್ನೆಲೆಯನ್ನು ತಿಳಿದಿರುವುದು ಅಗತ್ಯವೆಂದು ಭಾವಿಸಿ ಅದನ್ನು ವಿವರಿಸ ಲಾಗಿದೆ. ಅವೆಲ್ಲವೂ ಸಮಾನಾರ್ಥಕಗಳಲ್ಲದಿದ್ದರೂ, ಕೆಲವು ಸ್ಪಷ್ಟವಾಗಿ ಸಗೋತ್ರ ವಿವಾಹ (Endogamous) ಗುಂಪುಗಳಾಗಿದ್ದರೂ (ಉದಾ: ಹೊಲೆಯ, ಮಾದಿಗ)[47] ಒಟ್ಟಾರೆ ಅವೆಲ್ಲ ಅಸ್ಪೃಶ್ಯರನ್ನು ಸೂಚಿಸಲು ಬಳಕೆಯಾಗುತ್ತಿದ್ದ, ಬಳಕೆಯಾಗುತ್ತಿರುವ ಪದಗಳು.

ಕರ್ನಾಟಕದ ದಲಿತರ ಮುಖ್ಯ ವೃತ್ತಿಗಳು ದೊನ್ನೆ ಮೊನ್ನೆಯವರೆಗೆ ಮತ್ತು ಕೆಲವು ಕಡೆ ಈಗಲೂ–ದನಗಳ ಹೆಣಗಳನ್ನು ಸಾಗಿಸುವುದು, ಚರ್ಮ ಸುಲಿಯು ವುದು, ಹದ ಮಾಡುವುದು, ಚರ್ಮದ ವಸ್ತುಗಳನ್ನು ಸಿದ್ಧಪಡಿಸುವುದು, ಮಲ ಹೊರುವುದು, ಮದುವೆಗಳಲ್ಲಿ ಮತ್ತು ಹೆಣದ ಮೆರವಣಿಗೆಗಳಲ್ಲಿ ವಾದ್ಯ ನುಡಿಸು ವುದು, ಸ್ಮಶಾನದಲ್ಲಿ ಹೆಣ ಹುಗಿಯಲು ಸಮಾಧಿ ಅಗೆಯುವುದು, ಬೀದಿ ಕಸ ಗುಡಿಸುವುದು, ಸಾವಿನ ಸುದ್ದಿ ತಿಳಿಸುವುದು, ಬಿಟ್ಟಿ ಕೆಲಸದವರಾಗಿ ಅಥವಾ ತೀರ ಕಡಮೆ ಹಣಕ್ಕೆ ತಮ್ಮ ಯಜಮಾನರ ಹೊಲ ತೋಟಗಳಲ್ಲಿ ದುಡಿಯುವುದು.

ಈ ಉಪನ್ಯಾಸದಲ್ಲಿ ಮುಖ್ಯವಾಗಿ ಹಿನ್ನೆಲೆಯ ಸಾಮಗ್ರಿಯನ್ನು ಮಾತ್ರ ವಿವೇಚಿಸಲಾಗಿದೆ. ಭಾರತದಲ್ಲಿ ವರ್ಣ, ಜಾತಿಗಳ ಹಿನ್ನೆಲೆಯಲ್ಲಿ ಅಸ್ಪೃಶ್ಯರ ಸ್ಥಾನಮಾನಗಳು, ಕರ್ನಾಟಕದಲ್ಲಿ ಅಸ್ಪೃಶ್ಯರಿಗಿದ್ದ ಹೆಸರುಗಳು ಅವರ ಸ್ಥಾನಮಾನ ಗಳು, ಅವರ ಅರ್ಥಿಕ ಸ್ಥಿತಿ ಇವುಗಳನ್ನು ಕುರಿತು ಇಲ್ಲಿ ಸಂಕ್ಷಿಪ್ತ ವಿವರಣೆಯನ್ನು ಕೊಡಲಾಗಿದೆ. ಜಾತಿಶ್ರೇಣಿಯ ಸಮಾಜದ ಕೆಳ ತುತ್ತತುದಿಯ ಅವರನ್ನು ಭಾರತೀಯ ಇತಿಹಾಸ ನಡೆಸಿಕೊಂಡು ಬಂದಿರುವುದನ್ನು ಇಲ್ಲಿ ಕೊಟ್ಟಿದೆ. ಮುಂದಿನ ಉಪನ್ಯಾಸ ಗಳಲ್ಲಿ ಕನ್ನಡ ವಾಙ್ಮಯದಲ್ಲಿ, ಮುಖ್ಯವಾಗಿ ಮಧ್ಯಕಾಲೀನ ಕರ್ನಾಟಕದಲ್ಲಿ ಅಸ್ಪೃಶ್ಯರ

---

47. ದನಗಳ ಹೆಣಗಳನ್ನು ಸಾಗಿಸುವ ಚರ್ಮ ಕೆಲಸ ಮಾಡುವ ಮಲ ಹೊರುವ ಮಾದಿಗ ರನ್ನು ಹೊಲೆಯರು ತಮಗಿಂತ ಕೀಳು ಎಂದು ಭಾವಿಸುತ್ತಾರೆ. ಹೊಲೆಯರದು ಮುಖ್ಯ ವಾಗಿ ಹೊಲ ತೋಟಗಳಲ್ಲಿ ಕೆಲಸ ಮಾಡುವ ಕಾರ್ಯ.

ಬದುಕಿನ ಚಿತ್ರಣ ಮೂಡಿ ಬಂದಿರುವ ಬಗೆಯನ್ನು ಕುರಿತು ವಿಚಾರ ಮಾಡುತ್ತೇನೆ. ಈ ಶತಮಾನದಲ್ಲಿ ನಡೆದಿರುವ ಮಹತ್ವದ ಸಾಮಾಜಿಕ ಬದಲಾವಣೆಯ ವಿಷಯ ಈ ಉಪನ್ಯಾಸಗಳಿಗೆ ಪೂರ್ತಿ ಹೊರತಾದರೂ ಅಂತ್ಯದಲ್ಲಿ ಅದನ್ನು ಕೇವಲ ಉಲ್ಲೇಖಿಸಿ ಕೈಬಿಡುತ್ತೇನೆ. ಈ ಉಪನ್ಯಾಸಗಳು ಮುಖ್ಯವಾಗಿ ಮಾಹಿತಿಮುಖಿ ಸಂಶೋಧನೆ ಎಂಬುದು ನಿಜವಾದರೂ ವ್ಯಾಖ್ಯಾನಮುಖಿ ಅಲ್ಲವೆಂದು ನಾನು ಹೇಳಲಾರೆ ಎಂಬ ಮಾತನ್ನು ಸೂಚಿಸಿ, ಅವುಗಳ ಹಿಂದೆ ಚಿಂತನೆ ಮಾತ್ರವಲ್ಲ ತೀವ್ರವಾದ ಸಾಮಾಜಿಕ ಚಿಂತೆಯೂ ಇದೆಯೆಂದೂ ಹೇಳಿ ಅಲ್ಲಿಗೆ ನಿಲ್ಲಿಸುತ್ತೇನೆ.



# ಉಪನ್ಯಾಸ – II*

**ಶಾಸನಗಳಲ್ಲಿ ಹೊಲೆಯರು :**

ಶಿಲಾಶಾಸನಗಳು ಪ್ರಾಚೀನ ಕರ್ನಾಟಕದ ಜನಜೀವನವನ್ನರಿಯಲು ಅತ್ಯುತ್ತಮ ಆಕರಗಳಾದರೂ ಅವು ಕೊಡುವ ಬದುಕಿನ ವಿವರಗಳು ಏನಿದ್ದರೂ ಮೇಲ್ವರ್ಗದ ಜಾತಿಯ ಜನರಿಗೆ ಸಂಬಂಧಪಟ್ಟುವಾದ್ದರಿಂದ ಅವುಗಳಿಂದ ಅಸ್ಪೃಶ್ಯರ ಬದುಕನ್ನು ತಿಳಿಯುವುದು ಅಸಾಧ್ಯವಾಗಿದೆ. ಅವರು ದಾನ ಕೊಟ್ಟರೂ ಸ್ವೀಕರಿಸಲು ಯಾರು ತಾನೇ ಸಿದ್ಧರಾಗಿರುತ್ತಿದ್ದರು? ದೇವಸ್ಥಾನವೊಂದು ನಿರ್ಮಾಣವಾದಾಗ ಅಷ್ಟೊಂದು ಶ್ರೀಮಂತರಲ್ಲದ ಜೇಡ, ಮೇದ, ಗಾಣಿಗ, ಕಲ್ಕುಟಿಗ, ತಂಬುಲಿಗ ಇತ್ಯಾದಿ ಜಾತಿಗಳವರು ದೇವಾಲಯಕ್ಕೆ ತಮ್ಮ ಜಾತಿಯ ಕಾಣಿಕೆಯನ್ನೋ ವರ್ಷದ ನಿಬಂಧನೆಯನ್ನೋ (ವರ್ಷಕ್ಕೆ ಇಷ್ಟು ಎಣ್ಣೆ, ಉತ್ಸವಕ್ಕೆ ಇಷ್ಟು ಎಲೆ ಇತ್ಯಾದಿ) ಕೊಡಲು ಮಾತು ಕೊಡುತ್ತಿದ್ದಂತೆ ಹೊಲೆಯರು ಏನು ಕೊಡಬಹುದಿತ್ತು! ಒಂದೇ ಒಂದು ಶಾಸನದಲ್ಲಿ ಹೊಲೆಯನೊಬ್ಬ ದಾನ ಕೊಟ್ಟ ಸಂಗತಿಯಿದೆ. ಮಾದಿಗ ಜಾತಿಯ ಒಬ್ಬ ವ್ಯಕ್ತಿ ಶ್ರೀಮಂತ ಮತ್ತು ಪುಲವಳ್ಳಿಯ (= ಹೊಲೆಯರ ಹಳ್ಳಿ?) ಗೌಡ ಅರಿವಾರ್ಮನ ತಮ್ಮ ನಾಣ್ಣೆಯ ಎಂಬಾತ ಹಲವು ಗೋಗಳನ್ನು ಕೊಟ್ಟಾಗ ("ಗೋಸಾಸವಿಟ್ಟಿ)" ಅವನ್ನು ತೆಗೆದುಕೊಂಡ ತಾಳಗುಂದದ ಬ್ರಾಹ್ಮಣರು ಅವನನ್ನು ಹರಸಿದ ವಿಷಯ ಬಂದಿದೆ. "ಮಾದಗರ ಕಮ್ಮಯ್ಯನ ಮಗಂ ನರಿವನ್ಮಗಾವುಂಡು ಗೆಯ್ಯೆ ಆತನ ತಮ್ಮಂ ನಾಣ್ಣೆಯಂ ಗೋಸಾಸವಿಟ್ಟಿ ತಣಗುಂದೂರ ಮಹಾಜನಂ ಪರಸಿದರ್ ಅರಿವತ್ತ... ಕಟ್ಟಿದ ಕೆಟಿ ಮಂಗಳ" (Ep. Carn. VIII. Sorab. 532, 964 A.D.) ಇಲ್ಲಿಯ 'ಮಾದಗರ' ಎಂಬುದು ಮಾದಿಗ ಜಾತಿ ಎಂಬರ್ಥವಲ್ಲದೆ ಬೇರೆ ಅರ್ಥವನ್ನು ಹೊಂದಿದೆ ಎಂಬುದನ್ನು ಯಾರಾದರೂ ತೋರಿಸುವ ತನಕ ಇದೊಂದು ವಿರಳ ನಿದರ್ಶನವೆಂದು ಭಾವಿಸಬೇಕು. ಅವರ ಉಲ್ಲೇಖಗಳು ಕೊನೆಯ ಪಕ್ಷ ವೀರಗಲ್ಲುಗಳಲ್ಲಿ ಹೆಚ್ಚಾಗಿ ಬರಬಹುದಿತ್ತು. ಊರುಗಳಿಗೆ ಕಳ್ಳರು ನುಗ್ಗಿದಾಗ ಅವರು ಹೋರಾಡಿ ಮಡಿದಿರಬಹುದು, ಸೈನ್ಯಕ್ಕೆ ಸೇರಿ ಕಾದಾಡಿ ಸತ್ತಿರಬಹುದು. ಎರಡೇ ಎರಡು ಶಾಸನಗಳಲ್ಲಿ ವೀರರಾದ ಹೊಲೆಯರ ಉಲ್ಲೇಖಗಳಿವೆ. ರಣಮಂಡೆ ಅಂಗು ಎಂಬ ಹೆಸರಿನ ಹೊಲೆಯ ತನ್ನ ಯಜಮಾನ ಜುದ್ಧಮಲ್ಲನ ಪರವಾಗಿ ಹೋರಾಡಿ ಸತ್ತ ವಿಷಯ ದಕ್ಷಿಣ ಕನ್ನಡ ಜಿಲ್ಲೆಯ ಶಾಸನವೊಂದರಲ್ಲಿದೆ ("ಸ್ವಸ್ತಿಶ್ರೀ

* 19.2.1982

ಧರೆಗೀಸನಾ ಕಾಳೆಗದುಳ್ ಜುದ್ಧಮಲ್ಲನಾ ಆಳು ರಣಮಂಡೆ ಅಂಗು ಪೆಸಾರ ಪೊಲೆಗನ್ ಸ್ವಸ್ತಿಶ್ರೀ ರಣಕೀಸರ ಉದಯ ಪುರಮಾನ್ ಪೊಗುತಿಪ್ಪಲ್ಲಿ ಎಜೆದು ಸ್ವರ್ಗಾಲಯಕ್ಕೇಜೆಮೊನ್" (ತುಳುನಾಡಿನ ಶಾಸನಗಳು, ಸಂಪುಟ 1. ಸಂ : ಕೆ.ವಿ. ರಮೇಶ್ ಮತ್ತು ಎಂ.ಜೆ. ಶರ್ಮಾ, ಮೈಸೂರು 1978. ಪು. 18). ಇನ್ನೊಂದು ಶಾಸನ ಮೇಲೆ ಹೇಳಿದ ದಾನ ಶಾಸನವಿರುವ ಊರಿನದು. ಪುಲವಳ್ಳಿಯ ಗಾಯಿಗ ನಾದ ಮಾದಗರ ಅರಿವಾರ್ಮ ಎಂಬಾತನು ಕಳ್ಳರು ತನ್ನ ಊರಿನ ದನಗಳನ್ನು ಅಪಹರಿಸಿದಾಗ ಹೋರಾಡಿ ಸತ್ತ ವಿಷಯ ಅಲ್ಲಿದೆ–"ಸಕವರಿಷಮೆಂಟುನೂಱ ತೊಂಬತನೆಯ ಪ್ರಭವಸಂವತ್ಸರದ ಚೈತ್ರ ಸುದ್ಧ ಪುಣ್ಣಮೆ ಮಾದಿತ್ಯವಾರವು ಸಂಕ್ರಾಂತಿಯಂದು ಪುಲವಳ್ಳಿಯ ಗಾಯಿಗಂ ಮಾದಾಗರ ರಿವಾರ್ಮ ತುಱುಗೊಳೊಳ್ ಸತ್ತಂ ಬಿಟ್ಟಗನ ಪೆರ್ಗಡೆ ದಾಸಯ್ಯನ ಮಗಂ ಭೀಮಯ್ಯ ಬರೆದ ಕನ್ನಯ್ಯಂ ಕಲ್ಲ ನಿಜೆಸಿದ" (EP. Carn. VIII.Sorab. 531.997 A.D.) ಪುಲವಳ್ಳಿಯ ಗಾಯಿಗ ('ಗಾಯಿಗ' ಎಂದರೆ ದನಗಾಹಿ ಎಂಬರ್ಥವೂ ಇದೆ) ಮಾದಗರ ಅರಿವಾರ್ಮ (ಇವನೇ ಮೇಲೆ ದಾನಶಾಸನದಲ್ಲಿ ಬರುವ ಗೌಡ ಮಾದಗರ ಕಮ್ಮಯ್ಯನ ಮಗ ಅರಿವಾರ್ಮ) ಗೋಗ್ರಹಣದಲ್ಲಿ ಸತ್ತಾಗ ಅವನಿಗಾಗಿ ಕನ್ನಯ್ಯ ವೀರಗಲ್ಲನ್ನು ನಿಲ್ಲಿಸುತ್ತಾನೆ. 'ಪೆರ್ಗಡೆ'ಯಂತಹ ಅಧಿಕಾರಿಯ ಮಗ ಈ ವೀರಗಲ್ಲಿನ ಪಾಠವನ್ನು ಬರೆದಿರಬೇಕಾದರೆ ಅರಿವಾರ್ಮನು ಮಾದಿಗರ ಜಾತಿಯವನಾದರೂ ತನ್ನ ಶೌರ್ಯ ತ್ಯಾಗಗಳಿಂದ ಜನರ ಪ್ರಶಂಸೆ ಗಳಿಸಿದ. ಇವನ್ನು ಬಿಟ್ಟರೆ ಯಾವುದೇ ವೀರಗಲ್ಲಿನಲ್ಲೂ ಹೊಲೆಯರ ಉಲ್ಲೇಖಗಳಿಲ್ಲವೆಂಬುದನ್ನು ಗಮನಿಸಿದರೆ ಅವರು ಸತ್ತಾಗ ಸ್ಮಾರಕ ಹಾಕಿಸಲೂ ಅನರ್ಹರೆಂದು ಹಿಂದಿನ ಸಮಾಜವು ಭಾವಿಸಿರಬಹುದು ಎಂದೇ ಭಾವಿಸಬೇಕಾಗುತ್ತದೆ. ಈಚಿನ ಕುಮಾರ ರಾಮ ಸಾಂಗತ್ಯವನ್ನು (16ನೇ ಶ). ಬಿಟ್ಟರೆ ಹೊಲೆಯ ಯೋಧರ ಉಲ್ಲೇಖ ಸಾಹಿತ್ಯದಲ್ಲೂ ಕಾಣಿಸದು. ಬದುಕಿನಲ್ಲಿ ಎಂತೋ ಸಾವಿನಲ್ಲೂ ಅದೃಷ್ಟಹೀನರು ಅವರು ಎಂದು ಹೇಳಬೇಕೆಂದು ಮನಸ್ಸಾಗು ತ್ತದೆ. ಶಾಸನಗಳಲ್ಲಿ ಅವರ ಉಲ್ಲೇಖಗಳ ಅಭಾವವೇ ಅವರ ಸಾಮಾಜಿಕ ಸ್ಥಾನ ಮಾನದ ಬಗ್ಗೆ ಬಹಳವನ್ನು ತಿಳಿಸುತ್ತದೆ.

ಮೇಲ್ಜಾತಿಯವರು ಕೊಟ್ಟ ದತ್ತಿಗಳ ಮೇರೆಗಳನ್ನು ಹೇಳುವಾಗಲೋ ಬೇರೆ ಪ್ರಸಂಗಗಳಲ್ಲೋ ಬರುವ ಉಲ್ಲೇಖಗಳು ಅಸ್ಪೃಶ್ಯರ ಮನೆಗಳು ಊರ ಹೊರಗೆ ಇದ್ದುವೆಂಬುದನ್ನು ಹೇಳುತ್ತವೆ.[1] ಕಾಸರಗೋಡು ತಾಲೂಕಿನ ತಳಂಗೆರೆ ಎಂಬ ಊರಿನ ಹತ್ತನೆಯ ಶತಮಾನದ ಒಂದು ಶಾಸನವು ಊರ ತುದಿಯ ತೊರೆಯ ದಡದ ಬಳಿ ಪುತ್ತೂರಿನ ಹೊಲೆಯರ ಕೇರಿಯಿತ್ತೆಂದೂ ಅದು ಇದ್ದ ಜಾಗ ಜೌಗು

1. "ಪೊಲಗೆ ಚಂಡಾಲಾಲಯಂ" (BKI. I. ii. 201. c. 1125 A.D.); "ನೀರು ಸಾಗರಕ್ಕೆ ಹೋದ ಓಣಿಯಿಂ ಪಡುವಲು ಹೊಲಗೇರಿಯಿಂ ಪಡು ಮುಖವಾಗಿ..."
(Karn. Inscriptions. V. 70.p.261. 1221 A.D.)

ನೀರಿನಿಂದ ತುಂಬಿತ್ತೆಂದೂ ಹೇಳುತ್ತದೆ.[2] ಹೊಲೆಯರಿಗಾಗಿಯೇ ಮೀಸಲಿಟ್ಟಿದ್ದ ನೀರಿನ ಕೊಳವೊಂದು ("ಕೂಂಟೆ, ಕುಂಟೆ") ದತ್ತಿಯ ಗಡಿಗಳನ್ನು ಹೇಳುವಾಗ ಕಾಣಿಸಿಕೊಂಡಿದೆ.[3] ದಾನದ ಶಾಪಾಶಯದ ಭಾಗದಲ್ಲಿ, ದಾನವನ್ನು ಅಪಹರಿಸಿದ ವ್ಯಕ್ತಿಗೆ ಒದಗಬಹುದಾದ ಕೆಡಕನ್ನು ಹೇಳುವಾಗ ಹೊಲೆಯರ ಮಾದಿಗರ ಉಲ್ಲೇಖ ಗಳು ಬರುತ್ತವೆ. ದಾನ ಅಪಹರಿಸುವುದು ತನ್ನ ಹೆಂಡತಿಯನ್ನು ಹೊಲೆಯರಿಗೆ ಮಾದಿಗರಿಗೆ ಕೊಟ್ಟದ್ದಕ್ಕೆ ಸಮಾನವೆನ್ನುತ್ತದೆ ಒಂದು ಶಾಸನ.[4] ದಕ್ಷಿಣ ಕರ್ನಾಟಕದ ಶಾಸನವೊಂದರಲ್ಲಿ ಬರುವ ಬಲಗೈ ಎಡಗೈ ಅಸ್ಪೃಶ್ಯರು ಉಳಿದ ಶಾಸನಗಳಲ್ಲಿ ಮತ್ತು ಸಾಹಿತ್ಯದಲ್ಲಿ ಬರುವ ಹೊಲೆಯರು ಮಾದಿಗರು ಎಂಬುದು ಸ್ಪಷ್ಟ.[5] 'ಹೊಲೆದೆಱೆ' ಎಂಬ ಒಂದು ತೆರಿಗೆಯ ಸ್ವರೂಪ ತಿಳಿಯುವುದಿಲ್ಲ. ಆದರೆ ಬಾದಾಮಿ ರಾಜಧಾನಿಯ ಬ್ರಾಹ್ಮಣರು ತಮ್ಮ ಊರಿನ 'ಸಮ್ಮಗಾಱ'ರ (=ಚರ್ಮಕಾರ) "ಕವಟ್ಟೆ"ಯನ್ನು ತೆಗೆದುಹಾಕಿಸಿದಂತೆ ಒಂದು ಶಾಸನ ಹೇಳುತ್ತದೆ. 'ಕವಟ್ಟೆ' ಅಥವಾ 'ಕವರ್ತೆ' ಎಂದರೆ ಒಂದು ಬಗೆಯ ತೆರಿಗೆ,[6] ಇದು ಚರ್ಮಕಾರರ ಆದಾಯದ ಮೇಲೆ ಹಾಕುತ್ತಿದ ತೆರಿಗೆ ಇರಬಹುದು ಮತ್ತು ಇದೂ 'ಹೊಲೆದೆಱೆ'ಯೂ ಒಂದೇ ಇರಬಹುದು.[7] ಇವೆರಡೂ ಹೊಲೆಯ ಅಥವಾ ಸಮಗಾರರನ್ನು ಗಂಭೀರವಾಗಿ ತೆಗೆದುಕೊಂಡಿರುವ ತೀರ ವಿರಳ ಉದಾಹರಣೆಗಳು. ಬಾದಾಮಿಯಂತಹ ಪಟ್ಟಣ

2. "ಊರ ಕಡೆಯ ತೋಟಿಯ ತಡಿಯ ಕರಿಯ ಕಲ್ಲ ದೋಱದಿಂ ಪುತ್ತೂರ । ಪೊಲೆಯ ರಿಪ್ಪ ಕೇರಿಯೊವಱ ನೀರ ಭೂಮಿಯಂ । ಸಾರ ಭೂರುಹಂಗಳೋಳಿಯೊಳಗೆ ನೆಟಿಯ ಕೆಱಿಯನಂ । ಭೋರುಹಾಕ್ಷಿ ತನ್ನ ಧನದಿನೊಪ್ಪೆ ಮಾಡಿಸಿಟ್ಟುದಂ" (Ep. Ind. 29, p. 203).

3. ಬೊಂಬಾಯಿ ಕರ್ನಾಟಕ ಶಾಸನಗಳು, 1937, ಸಿಂದಗಿ. 39–7.

4. "ಯಿದಕ್ಕೆ ತಪ್ಪಿದನು... ಅವನು ಹೆಂಡತಿಯ ಹೊಲಮಾದಿಗರಿಗೆ ಕೊಟ್ಟ" Ep. Carn. (Mysore Edition). IV. ಪಿರಿಯಾಪಟ್ಟಣ. 66, ಸು. 17ನೇ ಶ.

5. "ಯಿದಕ್ಕೆ ತಪ್ಪಿದರೆ ಬಲಗೆಯಡಗೆ(ಗೈ)ಯವನ ಯಂಜಲಿಗೆ ಆಶೆ ಮಾಡಿದಾಗೆ." Ep. Carn. (Rice Edition). Vol. IX. Anekal. 71-6,1600 A.D.

6. ಕನ್ನಡ ನಿಘಂಟು 2, ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು 1976. ಪು. 1620.

7. "ಹೊಲೆ" ಎಂದರೆ "ಹೊಲೆದೆಱೆ" ಎಂದು ಆಗುವುದೇ, ವಿಚಾರ ಮಾಡಬೇಕು. 'ದೇವರ ಜೀರ್ಣೋದ್ಧಾರಕ್ಕವೆಂದು ಕೊತ್ತಂಗೆಱಿಯ ಹಿರಿಯೂರ ಒಳವಾಱು ಹೊಱವಾಱು ತೋಟ ಎಮ್ಮೆ ಎತ್ತು ಪಶು ತೊತ್ತು ಕಟ್ಟಿದ ಭಂಡಿ ಬೆಳ್ದಂಡಿವ ಹಣ ಅಸಗ ಕಂಮಾರ ಬಡಗಿ ಅಗಸ್ನಾಲಿ ಕುಂಬಾಱ ನಾವಿದ ಅಂಗಡಿ ಗಾಣ ಜಾಡ ಸಾಲಿ ತಿಪ್ಪೆಸುಂಕ ಹೊಱಗಳಂ ಬಂದು ಮಾಱುವ ಯಂಣೆ ತುಪ್ಪ ಉಪ್ಪು ಹೊಲೆ ವೊಗ್ಗ ವೊಳಮಂ ಶ್ರೀ ಕೇಶವ ದೇವರ ಶ್ರೀ ಪಾದದಲ್ಲಿ ಧಾರಾಪೂರ್ವಕಂ ಮಾಡಿಕೊಟ್ಟರು.' (Ep. Carn. XII. [Rice]. P. 86-7.) ಒಳವಾಱು ಹೊಱವಾಱುಗಳು ಊರೊಳಗಿನವರ ವ್ಯಾಪಾರ ಮತ್ತು

ಗಳಲ್ಲಿನ ಚರ್ಮಕಾರರು ಪಾದರಕ್ಷೆಗಳನ್ನು ಮಾಡುವುದರ ಮೂಲಕ ಮಾತ್ರವಲ್ಲದೆ, ರಾಜನ ಆನೆ ಕುದುರೆಗಳಿಗೆ ಯೋಧರಿಗೆ ಬೇಕಾದ ಚರ್ಮದ ಉಪಕರಣಗಳನ್ನು ಮಾಡಿ ತಕ್ಕಮಟ್ಟಿಗೆ ಆದಾಯವನ್ನು ಸಂಪಾದಿಸುತ್ತಿದ್ದಿರಬಹುದು. ಆ ತೆರಿಗೆ ಅಂತಹ ಆದಾಯವಂತರ ಮೇಲೆ. ಅಸ್ಪೃಶ್ಯರಲ್ಲಿ ಹಿಂದೆ ಇಂತಹ ಆದಾಯವಂತರಿದ್ದರೆ ಅವರು ತೀರ ವಿರಳ ಅಪವಾದಗಳೆಂಬಂತೆ ತೋರಿ ಬರುತ್ತಾರೆ.

'ತೊತ್ತು'ಗಳನ್ನು ಸಂತೆಗಳಲ್ಲಿ ಮಾರಾಟ ಮಾಡುತ್ತಿದ್ದ ವಿಷಯ ಶಾಸನವೊಂದ ರಲ್ಲಿದೆ.[8] (ಹಾಗೆ ಮಾರಾಟಕ್ಕಿಟ್ಟವರ ತಲೆಯ ಮೇಲೆ ಹುಲ್ಲಿನ ಹಗ್ಗವನ್ನು ಮಾರಾಟ ವಸ್ತು ಸೂಚಕವಾಗಿ ಕಟ್ಟುತ್ತಿದ್ದಂತೆ ಊಹಿಸಲು ಅವಕಾಶವಿದೆ.) ಇವರು ಜೀತದಾಳು ಗಳು ಮತ್ತು ಜಾತಿಯಲ್ಲಿ ಇವರೆಲ್ಲ ಬಹುಶಃ ಅಸ್ಪೃಶ್ಯರು ('ತೊತ್ತು' 'ಮನೆದೊತ್ತು', 'ಮನೆಮಗ' ಈ ವಿವರಗಳಿಗೆ ಮುಂದೆ ನೋಡಿ).

ಹೊಲೆಗೇರಿಗೆ ಮುಖ್ಯಸ್ಥನಾದವನನ್ನು ಊರ ಗೌಡನೋ, ಆ ನಾಡಿನ ಪ್ರಭುವೋ ('ನಾಳ್ಪ್ರಭು') ನೇಮಿಸಿ ಅವನ ಕೈಗೆ ಅವನ ಅಧಿಕಾರ ಸೂಚಕವಾದ ಕಟ್ಟಿಗೆ ಯನ್ನು ಕೊಡುತ್ತಿದ್ದಂತೆ ಒಂದು ಶಾಸನದಿಂದ ಊಹಿಸಬಹುದು. 'ಗೌಡಿಕೆ' ಇದ್ದಂತೆ, 'ಮಾದಾಱಿಕೆ'[9] ಎಂಬ ಹೆಸರಿನ ಆ ಜಾಗಕ್ಕೆ ನೇಮಕವಾದರೆ, ಆ ವ್ಯಕ್ತಿ 'ಮಾದಾಱಿಕೆ ವಟ್ಟ'(ಮಾದಾಱಿಕೆ+ಪಟ್ಟ)ವನ್ನು ಪಡೆಯುತ್ತಿದ್ದ.[10] ವರ್ತಕ ಶ್ರೇಣಿಗೆ ಮುಖ್ಯನೆಂದು ಸೆಟ್ಟಿ ಪಟ್ಟವನ್ನು ಕಟ್ಟಿ ಆ ಪ್ರಧಾನ ಸ್ಥಾನ ಸೂಚಕವಾಗಿ ಕೊಡೆ, ಕುದುರೆ, ಅಡ್ಡಣಿಗೆಗಳನ್ನು

---

ಹೊರಗಿನಿಂದ ಬಂದವರ ವ್ಯಾಪಾರಗಳ (ಒಳ+ಮಾಱು, ಹೊಱ+ಮಾಱು) ಮೇಲೆ ಹಾಕುತ್ತಿದ್ದ ತೆರಿಗೆಗಳು. ವ್ಯಾಪಾರ ಸಾಮಗ್ರಿಗಳಲ್ಲಿ 'ತೊತ್ತು' ಕೂಡ ಸೇರಿದ್ದಾನೆ. ತೊತ್ತು ಗಳನ್ನು ಸಂತೆಗಳಲ್ಲಿ ಎಮ್ಮೆ, ಎತ್ತು, ಹಸುಗಳ ರೀತಿಯಲ್ಲಿ ಮಾರಾಟಮಾಡುತ್ತಿದ್ದರು. (ಈ ತೊತ್ತುಗಳು ಬಹುತೇಕ ಅಸ್ಪಶ್ಯರು). ಶಾಸನದಲ್ಲಿ ತುಪ್ಪ ಉಪ್ಪುಗಳ ಜೊತೆ 'ಹೊಲೆ' ಬರು ತ್ತದೆ. ಇದು 'ಓಲೆ'ಯ ಅಪಲಿಖಿತವಾಗಿರದಿದ್ದರೆ 'ಹೊಲೆದೆಱೆ' ಎಂಬರ್ಥವನ್ನು ಕೊಡಲು ಸಾಧ್ಯ. ದೇವರಿಗೆ ಒಪ್ಪಿಸಿದ ತೆರಿಗೆಗಳಲ್ಲಿ 'ಹೊಲೆ'ಯೂ ಒಂದಾಗಿತ್ತೆಂದು ಕಾಣುತ್ತದೆ.

8. 7ನೇ ಅಡಿಟಿಪ್ಪಣಿ ನೋಡಿ (ಜೊತೆಗೆ ಅನುಬಂಧಗಳನ್ನೂ ನೋಡಿ).

9. Ep. Carn. VIII (Rice). Thirthahalli. 196. 1404 A.D. ಅದೇ XII. ಬೌರಿಂಗ್‌ಪೇಟೆ. 72.

10. ಅದೇ. 'ಮಾದಾರಿಕೆ' ಎಂಬುದು ಮಾದಿಗರು ಕೊಡುವ ಒಂದು ಸುಂಕದ ಹೆಸರಾಗಿ ಅನೇಕ ಶಾಸನಗಳಲ್ಲಿ ಇದೆ. Ep. Carn. (XIV. Gundlupet. 84. 1521; South Ind. Inscs. IX. ii 440,1419 A.D.)

ಮಾದಾರರ ಮುಖ್ಯಸ್ಥನ ಸ್ಥಾನವೇ 'ಮಾದಾರಿಕೆವಟ್ಟ.' ಅವನ ಕೆಲಸ ಮಾದಾರರ ಸುಂಕ ವನ್ನು ಸಂಗ್ರಹಿಸುವುದು, ಅವರನ್ನು ನಿಯಂತ್ರಿಸುವುದು. ಅವನ ಸ್ಥಾನಸೂಚಕವಾಗಿ ಹಿಡಿಯುತ್ತಿದ್ದ ದಂಡವೇ 'ಮಾದಾರಿಕೆವಟ್ಟಗಟ್ಟಿಗೆ' ಇರಬೇಕು. 'ಮಾದಾರಿಕೆ'–ಅನುಬಂಧ ನೋಡಿ.

ಕೊಡುತ್ತಿದ್ದಂತೆ, ಮಾದಾರಿಕೆ ಪಟ್ಟವನ್ನು ಕೊಟ್ಟ ಹೊಲೆಯನ ಕೈಗೆ ಅವನ ವೃತ್ತಿ ಸೂಚಕವಾದ 'ಕೋಲ'ನ್ನು (ಇಲ್ಲಿ ಸಂಬಳಿಗೋಲು ಕಂಕರಿಗೋಲುಗಳನ್ನು ಜ್ಞಾಪಿಸಿ ಕೊಳ್ಳಬಹುದು) ಕೊಡುತ್ತಿದ್ದರು. ಇದೇ 'ಮಾದಾಱಿಕೆ ವಟ್ಟ ಕಟ್ಟಿಗೆ'. ಹೊಲೆಯರಲ್ಲಿ ಹಿರಿಯನೂ ವಿವೇಕಿಯೂ ಆದ ವ್ಯಕ್ತಿಗೆ ಈ ಪಟ್ಟ ಸಿಗುತ್ತಿತ್ತು ಮತ್ತು ಜಾತಿಯ ಜನರನ್ನು ನಿಯಂತ್ರಿಸುವಲ್ಲಿ ಅವನಿಗೆ ಹೆಚ್ಚಿನ ಜವಾಬ್ದಾರಿ ಇರುತ್ತಿತ್ತು.

## ಚಂಪೂ ಕವಿಗಳಲ್ಲಿ : ವರ್ಣ, ಜಾತಿ, ಅಸ್ಪೃಶ್ಯತೆ

ಸಾಂಪ್ರದಾಯಕ ವರ್ಣವ್ಯವಸ್ಥೆಯನ್ನು ತಾತ್ವಿಕವಾಗಿ ಕನ್ನಡಿಗರು ಒಪ್ಪಿ ಕೊಂಡಿದ್ದರಾದರೂ, 'ಪ್ರಾಚೀನ ಕರ್ನಾಟಕದಲ್ಲಿ ವರ್ಣಪದ್ಧತಿಯ ಪರಿಪಾಲನೆಯು ಬಹುಮಟ್ಟಿಗೆ ಕುಸಿದು ಹೋಗಿದ್ದಿತು.'[11] ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಹೆಸರುಗಳು ನಮಗೆ ಶಾಸನ, ಕಾವ್ಯಗಳಲ್ಲಿ ದೊರಕಿದರೂ ಆ ನಾಲ್ಕೂ ವರ್ಣಗಳವರು ತಮ್ಮದಲ್ಲದ ವೃತ್ತಿಗಳನ್ನು ಅವಲಂಬಿಸಿರುವುದು ಎದ್ದು ಕಾಣುವ ಸಂಗತಿ.

ಇವರಲ್ಲೆಲ್ಲ ಬ್ರಾಹ್ಮಣ ವರ್ಣವೊಂದು ಮಾತ್ರ ವೇದಕಾಲದಿಂದ ಇಂದಿನವರೆಗೆ ತನ್ನ ಅನನ್ಯತೆಯನ್ನು ಒಂದು ಗುಂಪಾಗಿ ಉಳಿಸಿಕೊಂಡು ಬಂದಿದ್ದರೂ[12] ಅವರೂ ಕೆಲವೊಮ್ಮೆ ತಮ್ಮ ವರ್ಣ ಧರ್ಮಕ್ಕೆ ಅನುಗುಣವಲ್ಲದ ವೃತ್ತಿಗಳನ್ನವಲಂಬಿಸಿದ್ದರು. ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಮಾತುಗಳು ಯಾರು ಬೇಕಾದರೂ ಬಳಸಿಕೊಳ್ಳ ಬಹುದಾಗಿದ್ದ ಪದಗಳಾಗಿದ್ದುವು. ಶೂದ್ರನೊಬ್ಬ ರಾಜನಾದರೆ ಅಥವಾ ವರ್ತಕನಾದರೆ ಅವನು ತನ್ನನ್ನು ಕ್ಷತ್ರಿಯನೆಂದೋ ವೈಶ್ಯನೆಂದೋ ಕರೆದುಕೊಳ್ಳಲು ಅಂತಹ ಸಾಮಾಜಿಕ ಅಡ್ಡಿಯೇನೂ ಇರಲಿಲ್ಲ. ಆದ್ದರಿಂದ ಇಲ್ಲಿ ವರ್ಣಗಳ ಬಗ್ಗೆ, ಅದಕ್ಕಿಂತ ಹೆಚ್ಚಾಗಿ ಜಾತಿಗಳ ಮತ್ತು ಅದರಲ್ಲೂ ಪಂಚಮ ಜಾತಿಯ ಬಗ್ಗೆ ಇದ್ದ ನಂಬಿಕೆ, ಧೋರಣೆಗಳೇನು ಎಂಬುದನ್ನು ಮುಖ್ಯವಾಗಿ ಪರಿಶೀಲಿಸಲಾಗುತ್ತದೆ.

ಕನ್ನಡದ ದೊದಲ ಕೃತಿ ಕವಿರಾಜಮಾರ್ಗದಲ್ಲಿ[13] (ಕ್ರಿ.ಶ.850) ನಾಲ್ಕು

---

11. ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಮೈಸೂರು. 1979. ಪು. 429.

12. ಇದಕ್ಕೆ ಕಾರಣ, ಬ್ರಾಹ್ಮಣ್ಯದಿಂದ ಹೊರಗೆ ಹೋಗಲು ಅವಕಾಶವಿರುವಂತೆ ಒಳಗೆ ಬರಲು ಅವಕಾಶವಿಲ್ಲದಿರುವುದು.

13. ಕವಿರಾಜಮಾರ್ಗಂ, ಸಂ: ಎಂ.ವಿ. ಸೀತಾರಾಮಯ್ಯ, ಮೈಸೂರು. 1975. 1.65.

**"ಪರದರ್ಗಾ ಪಾರ್ವರ್ಗಾ । ಯ್ತರಸರ್ಗಾ ಕುಡಿಯರಪ್ಪ ನಾಲ್ವರ್ಗಾಗಳ್ । ಸ್ಥಿರ**
**ಗೋಪಾಧ್ಯಾಯ ಕ್ಷ್ಮಾ । ಪರಿಪಾಲ್ಯ ಕ್ಷೇತ್ರಕರ್ಷಣಂಗಳ್ ಕ್ರಿಯೆಗಳ್"**

'ಕುಡಿಯ' ಎಂಬುದು ರೈತನನ್ನು ಹೇಳುತ್ತದೆ. ಸಿದ್ಧರಾಮ 'ಕುಡಿಯ' ಜಾತಿಯವನು ಮತ್ತು ಇಂದಿಗೂ ಈ ಜಾತಿಯವರನ್ನು ಉತ್ತರ ಕರ್ನಟಕದಲ್ಲಿ 'ಕುಡುವೊಕ್ಕಲಿಗ' ರೆನ್ನುತ್ತಾರೆ. (ಇವರೆಲ್ಲ ಈಗ ವೀರಶೈವರು).

ವರ್ಣಗಳನ್ನು ವೈಶ್ಯ, ಬ್ರಾಹ್ಮಣ, ಕ್ಷತ್ರಿಯ, ಶೂದ್ರ ಈ ಅನುಕ್ರಮದಲ್ಲಿ ಹೇಳಿ ಪಶುಪಾಲನೆ ('ಗೋಪ'), ಅಧ್ಯಯನ, ರಾಜ್ಯಭಾರ ('ಕ್ಷ್ಮಾಪರಿಪಾಲ್ಯ'), ವ್ಯವಸಾಯಗಳು ('ಕ್ಷೇತ್ರಕರ್ಷಣ') ಅವರ ವೃತ್ತಿಗಳು ಎಂದಿದೆ. ಒಂದು ಕಾಲಕ್ಕೆ ಪಶುಪಾಲನೆ ವ್ಯವಸಾಯ ವ್ಯಾಪಾರಾದಿಗಳೆಲ್ಲ ವೈಶ್ಯರ ವೃತ್ತಿಯಾಗಿದ್ದು, ಶೂದ್ರರದು ಮೇಲಿನವರ ಸೇವೆ ಮಾಡುವುದಷ್ಟೇ ಕೆಲಸವಾಗಿದ್ದು ಕ್ರಮೇಣ ವ್ಯಾಪಾರ ಮಾತ್ರ ವೈಶ್ಯರ ವೃತ್ತಿಯೆಂದೂ ಪಶುಪಾಲನೆ, ವ್ಯವಸಾಯಗಳು ಶೂದ್ರರ ಉದ್ಯೋಗಗಳೆಂದೂ ಪರಿಗಣಿತವಾದವು. ಹಿಂದಿನ ಕರ್ನಾಟಕದಲ್ಲಿ ಇದ್ದುದು ಈ ಕಲ್ಪನೆ. ಈ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣನೇ ಶ್ರೇಷ್ಠನೆಂದೂ ಉಳಿದ ವರ್ಣಗಳು ಅವನ ಸೇವೆಗಾಗಿ ಇರುವವೆಂದೂ ಸ್ಪಷ್ಟೋಕ್ತಿಗಳಿವೆ. ದುರ್ಗಸಿಂಹನ ಪಂಚತಂತ್ರದ ಪ್ರಕಾರ[14] (ಕ್ರಿ.ಶ. 1031) ಬ್ರಾಹ್ಮಣನಿಗೆ ಅಗ್ನಿಯೇ ಗುರು; ಕ್ಷತ್ರಿಯ ವೈಶ್ಯ ಶೂದ್ರರಿಗೆ ಬ್ರಾಹ್ಮಣನೇ ಗುರು.[15] ಶಾಸನಗಳಲ್ಲಿಯೂ ಇಂತಹುದೆ ಮಾತುಗಳು ಬರುತ್ತವೆ ("ಕ್ಷತ್ರಿಯ ವೈಶ್ಯ ಶೂದ್ರ ತ್ರಯ ಲಲಾಟಫಟ್ಟಿತರುಂ").[16] ಸುಕುಮಾರ ಚರಿತೆಯಲ್ಲಿ (8.1.ವ) ಬ್ರಾಹ್ಮಣ ನಾಗಶರ್ಮ ತನ್ನ ಮಗಳಿಗೆ ಹೀಗೆ ಹೇಳುತ್ತಾನೆ–"ನಾಮಪ್ಪೊಡೆ ವರ್ಣೋತ್ತಮರ್, ನಮಗತ್ತಲಾರು–ಮಿಲ್ಲಾ". ಕುಮಾರವ್ಯಾಸನೂ ದುರ್ಗಸಿಂಹನಂತೆಯೇ ಅಭಿಪ್ರಾಯಪಟ್ಟಿದ್ದಾನೆ.[17] ಇವರಿಬ್ಬರಿಗೂ ಮೂಲವಾದ ಸಂಸ್ಕೃತ ಪದ್ಯವೊಂದನ್ನು ದುರ್ಗಸಿಂಹನೇ ಕೊಟ್ಟಿದ್ದಾನೆ. ("ಗುರುರಗ್ನಿರ್ದ್ವಿಜಾತೀನಾಂ ವರ್ಣಾನಾಂ ಬ್ರಾಹ್ಮಣೋ ಗುರುಃ। ಪತಿರೇವ ಗುರುಃ ಸ್ತ್ರೀಣಾಂ ಸರ್ವಸ್ಯಾಭ್ಯಾಗತೋ ಗುರುಃ").[18] ಬ್ರಹ್ಮಶಿವನ ಪ್ರಕಾರ ವರ್ಣಗಳಲ್ಲಿ ಬ್ರಾಹ್ಮಣನಿಗಿಂತ ಕ್ಷತ್ರಿಯ ಮೇಲು. ನೋಡು–"ನೃಪನಾದಿಯಾಗೆ ಕಡೆಯೊಳ್ ಶ್ವಪಚಂಬರಂ..."[19] ಕ್ಷತ್ರಿಯನೇ ಭೂಮಿಗೆ ಒಡೆಯನೂ ತೀರ್ಥಂಕರನೂ ಆಗಿರುವುದರಿಂದ ಎಲ್ಲರಿಗಿಂತ ಅವನೇ ಶ್ರೇಷ್ಠ.[20] ಮೂಲದಲ್ಲಿ ಜೈನ, ಬೌದ್ಧಧರ್ಮಗಳು ಬ್ರಾಹ್ಮಣ

---

14. ಕರ್ಣಾಟಕ ಪಂಚತಂತ್ರಂ. ಸಂ. ಎನ್. ಅನಂತರಂಗಾಚಾರ್, ಮೈಸೂರು. 1973. ಪು. 97.

15. ಈ ಮಾತುಗಳನ್ನೂ ನೋಡಿ : ಪಂಪಭಾರತ (14.48) – "ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ"; "ಭುವನಕ್ಕಾರಾಧ್ಯ ವಿಪ್ರೋತ್ತಮಕುಳತಿಳಕಂ" (BKI, I. i. 133, 1087).

16. EC.V. (Rice), AK. 110,c. 1142 A.D.

17. "ವಿಪ್ರಜಾತಿಗೆ ಹುತವಹನು ವರ್ಣತ್ರಯಕೆ ಭೂದೇವರುಗಳಿರಲು ಕ್ಷಿತಿಯೊಳತಿಶಯವಾವುದೈ ಭೂಪತಿಯೆ ಕೇಳಿಹಪರಕೆ ಸುಖ ಸಂಗತಿಯನೊಲುವೊಡೆ ಪೂಜಿಸುವುದೈ ಬ್ರಾಹ್ಮಣೋತ್ತಮರ" – ಕರ್ನಾಟ ಭಾರತ ಕಥಾಮಂಜರಿ. ಉದ್ಯೋಗಪರ್ವ.

18. ಕರ್ಣಾಟಕ ಪಂಚತಂತ್ರಂ. ಪು. 97.

19. ಸಮಯ ಪರೀಕ್ಷೆ. 11.132

20. ಅದೇ. 2.23

ಶ್ರೇಷ್ಠತ್ವವನ್ನು ಪ್ರಶ್ನಿಸಿದುವು ಎಂಬುದನ್ನು ನೆನಪಿನಲ್ಲಿಟ್ಟುಕೊಂಡರೆ, ಬ್ರಹ್ಮಶಿವನ ಮಾತುಗಳು ಆಶ್ಚರ್ಯವನ್ನು ಹುಟ್ಟಿಸಲಾರವು. ಹಿಂದಿನ ಪದ್ಧತಿಯನ್ನನುಸರಿಸಿ ದುರ್ಗಸಿಂಹನು ಶೂದ್ರ ಅಥವಾ ರೈತನನ್ನು 'ಪಾದಜ'ನೆಂದು ಕರೆದಿದ್ದಾನೆ.[21]

ಈ ನಾಲ್ಕು ವರ್ಣಗಳೂ ತಂತಮ್ಮ ವರ್ಣಧರ್ಮವನ್ನು ಅನುಸರಿಸಿಕೊಂಡು ಇರುವುದೇ 'ಧರ್ಮ' ಎಂಬಂತಹ ಮಾತುಗಳುಂಟು. ಜನನ್ನಾಥವಿಜಯದ ಪ್ರಕಾರ, ಒಂದು ಉತ್ತಮ ದೇಶದ ಸಮಾಜದಲ್ಲಿ 'ವರ್ಣಸಂಕರ'ವು, ವರ್ಣಗಳ ಮಿಶ್ರಣವು ಇರದು. ದುರ್ಗಸಿಂಹ ಹೇಳುವಂತೆ ಇದು ನಾಲ್ಕು ವರ್ಣಗಳಿಗೆ ಮಾತ್ರವಲ್ಲ, ಸಮಸ್ತ ಪ್ರಾಣಿಗಳಿಗೂ ಅನ್ವಯವಾಗತಕ್ಕದು – "ಸಮಸ್ತ ಪ್ರಾಣಿಗಳುಂ ತಂತಮ್ಮ ಜಾತಿಗೆ ತಕ್ಕಂದದೊಳೆ ಜೀವನೋಪಾಯಮಂ ಚಿಂತಿಸಿಕೊಂಡು ಬಾಳ್ವುದೆ ಧರ್ಮ."[22] ಇದು ಜಾತಿಪದ್ಧತಿಯ ಸ್ಪಷ್ಟವಾದ ಲಕ್ಷಣ : ಹುಟ್ಟಿನಿಂದ ಒಬ್ಬ ವ್ಯಕ್ತಿ ಒಂದೊಂದು ಜಾತಿಗೆ ಸೇರುತ್ತಾನೆ ಮತ್ತು ಆಯಾ ಜಾತಿ ಅನುಸರಿಸಿಕೊಂಡು ಬಂದಿರುವ ವೃತ್ತಿಯನ್ನೇ ಅವನು ಅವಲಂಬಿಸಬೇಕು. ಉದಾಹರಣೆಗೆ ಕುಂಬಾರ ಮಡಕೆಯನ್ನು ಮಾಡುವುದು, ರೈತ ಹೊಲವನ್ನು ಉಳುವುದು, ನೇಕಾರ ಬಟ್ಟೆ ನೇಯುವುದು ಇತ್ಯಾದಿ. ಇಷ್ಟೇ ಮುಖ್ಯ, ಆಯಾ ಜಾತಿ ಒಟ್ಟು ಅನುಶ್ರೇಣಿಯಲ್ಲಿ ತನ್ನ ಸ್ಥಾನವನ್ನು ಕಾಪಾಡಿಕೊಂಡು ಬರುವುದು. ಉದಾ: ಕೆಲವಕ್ಕಿಂತ ಕೆಳಗೆ, ಆದರೆ ಕೆಲವಕ್ಕಿಂತ ಮೇಲು ಇತ್ಯಾದಿ. ಎಂದರೆ ಆಯಾ ಜಾತಿಯ ನಿಯಮಗಳನ್ನು ಆಯಾ ಜಾತಿಯವರು ಅನುಸರಿಸುವುದೇ "ಧರ್ಮ" – ಇಲ್ಲಿ "ಧರ್ಮ" ಎಂದರೆ ಮತ ಅಲ್ಲ, ಅನಾದಿ ಕಾಲದಿಂದ ನಡೆದುಬಂದಿರುವ ಪರಂಪರೆ, ಪದ್ಧತಿ, ಸಹಜ ನಿಯಮ. ಈ ಪರಂಪರೆಗೆ ಕಾಪಾಡುವ, ಶಿಕ್ಷಿಸುವ ಶಕ್ತಿ ಇರುತ್ತದೆ. ಭಾರತದಲ್ಲಿ ಮತದ ನಿಯಮಗಳಿಗಿಂತ ಜಾತಿಯ ನಿಯಮಗಳು ಹೆಚ್ಚು ಕಠಿಣವೆಂಬ[23] ಮಾತು ಒಂದರ್ಥದಲ್ಲಿ ನಿಜ.

"ಶೂದ್ರ" ಎನ್ನುವ ಮಾತು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಅಲ್ಲದ, ಅಸ್ಪೃಶ್ಯ ಅಲ್ಲದ ಅನೇಕ ಜಾತಿಗಳನ್ನು ಒಳಗೊಳ್ಳುತ್ತದೆ. ವರ್ಣ ವ್ಯವಸ್ಥೆಯಲ್ಲಿ ಇವರೇ ಕೊನೆಯವರು, ನಾಲ್ಕನೆಯವರು; ಹೊಲೆಯ ಈ ವ್ಯವಸ್ಥೆಯ ಹೊರಗಿನವ ಎಂದು

---

21. ಕರ್ಣಾಟಕ ಪಂಚತಂತ್ರಂ, ಪು. 17.

22. ಅದೇ. ಪು. 50.

23. "The ties of caste are stronger than those of religion. A man may be a bad Hindu so far as the practice of his religious duties goes; but caste rules must be minutely observed, or he will have to reap the consequences of neglect. With many Hindus the highest form of religious observance is the complete fulfillment of the claims of caste; and most of them conceive sin of breach of caste discipline rather than of moral law"- Sherring. (Quoted) Hutton in "Caste in India". P. 125.)

ನಯಸೇನ ಸ್ಪಷ್ಟವಾಗಿ ಸೂಚಿಸುತ್ತಾನೆ. ("ಪೊಲೆಯನಂತೆ ವರ್ಣಕ್ಕೆ ಸಲ್ಲದು"[24] – ಇಲ್ಲಿ ಶ್ಲೇಷೆ ಇದೆಯಾದರೂ 'ವರ್ಣ' ಎಂಬುದು ವರ್ಣ ವ್ಯವಸ್ಥೆ ಎಂಬೊಂದು ಅರ್ಥವನ್ನು ಪಡೆದೇ ಇದೆ.) ಆದ್ದರಿಂದಲೇ ಅವರು 'ಪಂಚಮರು' – ಒಕ್ಕಲಿಗ ಅಥವಾ ಶೂದ್ರನಿಗಿಂತ ಕೆಳಗಿನವರು.[25] ಜಾತಿ ಹುಟ್ಟಿನಿಂದ ಬರುವುದಾದ್ದರಿಂದ ಒಬ್ಬ ವ್ಯಕ್ತಿ ಶ್ರೀಮಂತನಾದರೆ ಅವನ 'ವರ್ಗ' (class) ಉತ್ತಮವಾಗಬಹುದೇ ಹೊರತು ಜಾತಿ ಅಲ್ಲ. ಹೊಲೆಯರು ಶ್ರೀಮಂತರಾಗಬಹುದು, ಒಂದು ವೇಳೆ; ಆದರೆ ಅದರಿಂದ ಅವರು ಮೇಲ್ಜಾತಿಯವರೆಂದು ಪರಿಗಣಿತರಾಗಲು ಸಾಧ್ಯವೇ ಇಲ್ಲ ಎಂಬ ನಯಸೇನನ ಹೇಳಿಕೆ ಹಿಂದಿನ (ಮತ್ತು ಇಂದಿನ) ವಾಸ್ತವ ಸತ್ಯವನ್ನು ಹೇಳುತ್ತದೆ. ("ಪೊಲೆಯರ್ ಧನಕ್ಕೊಡೆಯರಾಗಿಯುಂ ಮೇಲ್ಜಾತಿಯಾಗದಂತೆ.")[26] ಅವನಲ್ಲೇ, ಹೊಲೆಯರು ನೀತಿವಂತರಾಗಿ ನಡೆದರೆ ಅವರನ್ನು ಲೋಕ ಮೆಚ್ಚುತ್ತದೆಯಾದ್ದರಿಂದ "ಕುಲ"ಕ್ಕಿಂತ (ಜಾತಿಗಿಂತ) ಧರ್ಮವೇ ಮುಖ್ಯವಾಗುತ್ತದೆ[27]ಯೆಂಬ ಮಾತು ಅಂದಿನ ವಿವೇಕಿ ಜನರ ಸ್ಪಷ್ಟ ಅಭಿಪ್ರಾಯವಾಗಿತ್ತು. ವಿಪ್ರ ಮುಂತಾದ 'ಮೇಲ್ಜಾತಿ'ಗಳನ್ನು ಶುದ್ಧ ಚಾರಿತ್ರದಿಂದಲೂ ದುರಾಚಾರದಿಂದ 'ಕೀಳ್ಜಾತಿ'ಗಳನ್ನೂ ಗುರುತಿಸಬೇಕಾಗುತ್ತದೆ ಎಂಬ ಅವನದೇ ಮಾತು[28] ಅಂದಿನ ನಿಜವಾದ ನಂಬಿಕೆ ಆಚರಣೆಗಳನ್ನು ಬಿಂಬಿಸುತ್ತದೆ. ಪಂಪನಲ್ಲೂ ಕುಲದ ಪ್ರಶ್ನೆ ಸಾಕಷ್ಟು ಚರ್ಚಿತವಾಗಿದೆ. ತುಂಬಿದ ಸಭೆಯಲ್ಲಿ ಕರ್ಣನನ್ನು ಕುಲಹೀನ ಎಂದು ನಿಂದಿಸಿದಾಗ, "ಕುಲಂ ಕುಲಮಲ್ತು, ಚಲಂ ಕುಲಂ, ಗುಣಂ ಕುಲಂ, ಅಣ್ಮು ಕುಲಂ, ಅಭಿಮಾನವೊಂದೆ ಕುಲಂ" ಎಂದು ಕರ್ಣ ತನ್ನನ್ನು ಬಲವಾಗಿ ಪ್ರತಿಪಾದಿಸಿಕೊಳ್ಳುತ್ತಾನೆ. ಕರ್ಣನ ಚಲ, ಗುಣ, ಅಣ್ಮು, ಅಭಿಮಾನಗಳು ಅವನ ಕುಲವನ್ನು ಸಾಮಾಜಿಕವಾಗಿ ಎಳ್ಳಷ್ಟೂ ಉತ್ತಮಪಡಿಸಲಿಲ್ಲವೆಂಬುದನ್ನು ಎಲ್ಲರೂ ಬಲ್ಲರು. ಬ್ರಾಹ್ಮಣ ಬ್ರಾಹ್ಮಣರ ಮನೆಯಲ್ಲಿ ಮಾತ್ರ ಉಣ್ಣಬೇಕು, ಉಳಿದವರಲ್ಲಿ ನೀರೂ ಕುಡಿಯಕೂಡದು; ಅವನು ಇಷ್ಟಪಟ್ಟರೆ ತನ್ನದೂ ಸೇರಿದಂತೆ ನಾಲ್ಕು ವರ್ಣಗಳಲ್ಲಿ ಮದುವೆ ಮಾಡಿಕೊಳ್ಳಬಹುದು

---

24. ಧರ್ಮಾಮೃತಂ. ಸಂ: ಆರ್. ಶಾಮಾಶಾಸ್ತ್ರಿ. ಮೈಸೂರು. 4.174 ವಚನ.

25. ಹೋಲಿಸಿ – "ಒಕ್ಕಲಿಗನಕ್ಕೆಮ ಪಂಚಮನಕ್ಕೆಮ ವೇದಮನೆ ಕೇಳಲಾಗದೆಂದೂಳ್ವರ್" (ಸಮಯ ಪರೀಕ್ಷೆ. ಪು. 367).

26. ಧರ್ಮಾಮೃತ. 11.186.

27. ಅದೇ. 4.24 "ಪೊಲೆಯರ್ ಭಾವಿಸುವೊಡೆ ದುಷ್ಕುಲರ್, ಅನುಪಮ ಶುದ್ಧವೃತ್ತಿಯೊಳ್ ನಡೆವೊಡೆ ಭೂತಲಮೆಲ್ಲಂ ಬಣ್ಣಿಸುವುದು ಕುಲದಿಂದಂ ಧರ್ಮವಧಿಕಮೆಂದಱಿಪುವವೋಲ್"; 4.25 – "ಧರ್ಮಂ ಕುಲದಿಂದಂ ಪೂಜ್ಯಂ."

28. ಅದೇ. 4.285 – "ಶುದ್ಧಚಾರಿತ್ರದಿಂದಿವರ್ ವಿಪ್ರಾದಿ ಮೇಲ್ಜಾತಿಗಳ್, ದುರಾಚಾರದಿಂದಿವರ್ ಕೀಳ್ಜಾತಿಗಳೆಂದಱಿವಂತೆ."

ಎನ್ನುತ್ತಾನೆ ಬ್ರಹ್ಮಶಿವ.[29] ಈ ಅನುಲೋಮಕ್ಕೆ ಭಾರತೀಯ ಧರ್ಮಶಾಸ್ತ್ರಗಳ ಒಪ್ಪಿಗೆಯಿದೆ, ಪ್ರತಿಲೋಮ ವಿವಾಹಕ್ಕೆ ಅಲ್ಲ. ಒಬ್ಬ ಚಂಡಾಲ ಕನ್ಯೆ ಸುಂದರಿಯಾಗಿದ್ದರೆ ಅವಳನ್ನು ನೋಡಿ ಸಂತೋಷಿಸಬೇಕು, ಅಷ್ಟೆ. ನಾಗವರ್ಮ (ಬಾಣನದು ಈ ಅಭಿಪ್ರಾಯ) ಚಂಡಾಲ ಕನ್ನೆಯೊಬ್ಬಳನ್ನು "ಅಮೂರ್ತೆಯಂತೆ ಸ್ಪರ್ಶವರ್ಜಿತೆ", "ಆಲೇಖ್ಯಗತೆಯಂತೆ ದರ್ಶನಮಾತ್ರಸಫಲೆ"[30] ಎಂದು ವರ್ಣಿಸುತ್ತಾನೆ. ಅವಳು ಮುಟ್ಟಲು ಅನರ್ಹಳು, ಅನ್ಯರಿಂದ ನೋಡಲ್ಪಟ್ಟು ಅಷ್ಟರಿಂದ ಮಾತ್ರ ಸಫಲಳಾದವಳು. ಬ್ರಹ್ಮ 'ದುಷ್ಟಚಂಡಾಲರ ಕುಲ'ದಲ್ಲಿ ಹುಟ್ಟಿದ ಕಪ್ಪು ಮೈಯ, ದಂತದೋಲೆಯ ಅವಳಿಗೆ ಚೆಲುವನ್ನು ಕೊಟ್ಟು 'ಅಸ್ಥಾನ'ದಲ್ಲಿ ಆ ಚೆಲುವು ಇರುವಂತೆ ಮಾಡಿದ. (ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಇಂತಹುದೇ ಚರ್ಚೆ ಇದೆ–ವಿವರಗಳಿಗೆ ಮುಂದೆ ನೋಡಿ). ಹೊಲೆಯ ಅಸ್ಪೃಶ್ಯ, ಅವನನ್ನು ಯಾರೂ ಮುಟ್ಟ ಕೂಡದು. ಅವನು ದೇವರ ಪ್ರಸಾದವನ್ನು ಹೊತ್ತಾಗ ("ಎಡೆವೊತ್ತು") ಸ್ಪೃಶ್ಯನಾಗುತ್ತಾನೆ.[31] (ನೋಡಿ–ಪಂಚತಂತ್ರ. 155–5. 1898ರ ಆವೃತ್ತಿ) ಕೀಳುಜಾತಿಗಳಿಗೆ ಸ್ವಲ್ಪ ಗೌರವ ತೋರಿದರೂ ಅವರು ಉಬ್ಬಿಹೋಗುತ್ತಾರೆ.[32]

ಹೊಲೆಯರನ್ನು ಸ್ಪರ್ಶಿಸುವ ಮಾತಿರಲಿ, ಅವರ ಹೆಸರು ಕಿವಿಗೆ ಬಿದ್ದರೂ ಬ್ರಾಹ್ಮಣರು ಮೈಲಿಗೆಯೆಂದು ಭಾವಿಸಿ ಉಣ್ಣುವುದನ್ನು ನಿಲ್ಲಿಸುತ್ತಾರೆ ಎಂಬ ಮಾತನ್ನು ಬ್ರಹ್ಮಶಿವನಲ್ಲಿ ಕಾಣುತ್ತೇವೆ.[33] 'ಅನಾಮಿಕ' ಶಬ್ದದ ಅರ್ಥಗಳಲ್ಲಿ 'ಹೆಸರು ಹೇಳಬಾರದವನು' (ಮತ್ತು ಕೇಳಬಾರದವನು) ಎಂಬುದು ಒಂದು, ಹೆಸರಿಲ್ಲದವನು ಅಥವಾ ಯಾವುದೇ ರೀತಿ ಬೇಕಾಬಿಟ್ಟಿಯಾಗಿ ಕೂಗಲು ಅರ್ಹ ಎಂಬುದು ಇನ್ನೊಂದು. ವ್ಯಕ್ತಿನಾಮವು ಒಬ್ಬ ವ್ಯಕ್ತಿಗೆ ಒಂದು ಅಸ್ಮಿತೆಯನ್ನು (identity) ತರುತ್ತದೆ. ಚಂಡಾಲರನ್ನು ಅನಾಮಿಕರೆಂದು ಭಾವಿಸಿದ್ದುದು ಅಸ್ಮಿತೆ, ವ್ಯಕ್ತಿತ್ವ, ವೈಶಿಷ್ಟ್ಯವಿಲ್ಲದ ವಸ್ತು ಅವರು ಎಂಬುದರ ದ್ಯೋತಕವಾಗಿದೆ.

ಜೈನ ಭವಾವಳಿಯಲ್ಲಿ ಮಾದಿಗ ಕುಲದಲ್ಲಿ ಹುಟ್ಟುವುದು ಘೋರ ಪಾಪಕರ್ಮದ ತುತ್ತತುದಿಯ ಫಲ : ಅದಕ್ಕಿಂತ ಹೀನಸ್ಥಿತಿ ಮತ್ತೊಂದಿಲ್ಲ, ಬಹುಶಃ ಹೆಣ್ಣುಕತ್ತೆ ಹಂದಿಯಾಗಿ ಹುಟ್ಟುವುದಕ್ಕಿಂತ ಅದು ಕ್ಲೇಶಕರ. ವಡ್ಡಾರಾಧನೆಯ ಸುಕುಮಾರಸ್ವಾಮಿಯ ಕತೆಯ ಪ್ರಕಾರ ವಾಯುಭೂತಿ ತನ್ನ ಭವದಲ್ಲಿ ಮಾಡಿದ

---

29. ಸಮಯ ಪರೀಕ್ಷೆ. 6.91.

30. ಕರ್ಣಾಟಕ ಕಾದಂಬರಿ. ಸಂ: ಬಿ. ಮಲ್ಲಪ್ಪ. ಮೈಸೂರು. 1892. ಪು. 11.

31. "ಎಡೆವೊತ್ತು ಪೊಲೆಯಂ ಮುಟ್ಟಲ್ ಬರ್ಪಂತೆ."

32. ನೋಡಿ – "ಮನ್ನಣೆವಡೆದ ಕೀಳ್ಜಾತಿಯಂತೆ." ಧರ್ಮಾಮೃತ, 5.125.

33. ಸಮಯ ಪರೀಕ್ಷೆ, 14.96.

ಪಾಪಕರ್ಮದ ಫಲವಾಗಿ ಅನೇಕ ಜನ್ಮಗಳೆತ್ತಿ ಅಂತ್ಯದಲ್ಲಿ ಹೆಣ್ಣುಕತ್ತೆಯಾಗಿ, ಹೊಲಸು ಹಂದಿಯಾಗಿ, ಕೊನೆಯಲ್ಲಿ 'ಮಾದೆಗ' ಮತ್ತು 'ಮಾದೆಗಿ'ಯರಿಗೆ 'ಪೊಲತಿ'ಯಾಗಿ ಹುಟ್ಟಿದ. 'ದುರೂಪೆ ದುರ್ವರ್ಣೆ ದುರ್ಗಂಧೆ ದುಸ್ಸ್ವರೆ ಪುಟ್ಟುಂಗುರುಡಿ ಪೊಲತಿ' ಅವಳು.[34] (ಆ ಜನ್ಮದಲ್ಲಿ ಆಕಸ್ಮಿಕವಾಗಿ ದೊರೆತ ಬೋಧೆಯಿಂದಾಗಿ ಆಕೆ ಮುಂದಿನ ಜನ್ಮದಲ್ಲಿ ನಾಗಶ್ರೀಯೆಂಬ ಹೆಸರಿನಲ್ಲಿ ಬ್ರಾಹ್ಮಣನ[35] ಮಗಳಾಗಿ ಹುಟ್ಟುತ್ತಾಳೆ). ಜನ್ನನ ಯಶೋಧರ ಚರಿತೆಯಲ್ಲೂ ಯಶೋಧರ ಚಂದ್ರಮತಿಯರು ತಮ್ಮ ಪಾಪಕರ್ಮಗಳಿಂದಾಗಿ ಬೇರೆ ಬೇರೆ ಪ್ರಾಣಿಗಳಾಗಿ ಹುಟ್ಟಿ ತಮ್ಮ ಅಂತ್ಯಜನ್ಮದಲ್ಲಿ 'ಪೊಲಗೇರಿಯ ಮಾದಿಗನ ಮನೆಯ ಕೋಳಿ'ಯ ಬಸಿರಲ್ಲಿ ಕೋಳಿಗಳಾಗಿ ಹುಟ್ಟುತ್ತಾರೆ.[36] ಕ್ರಿ.ಶ. 1352ರ ಬಾಹುಬಲಿಯ ಧರ್ಮನಾಥ ಪುರಾಣದಲ್ಲಿ (ಸಂ:ಎನ್. ಬಸವಾರಾಧ್ಯ ಮೈಸೂರು, 1975, ಪು. 336) " ಮಾತಂಗ ಸ್ಪರ್ಶನ"ವು ಅಪವಿತ್ರರಿಗೂ ಅಯೋಗ್ಯವೆಂದಿದೆ. "ಸಾತಿಶಯರ್ಗೆ ಉಚಿತಮಲ್ತು ನೀಚಸ್ಪರ್ಶಂ" (ಇಲ್ಲಿ 'ಮಾತಂಗ' ಎಂದರೆ ಮಾದಿಗ ಆಗಬಹುದು, ಆನೆ ಆಗಬಹುದು. ಕವಿಯು ಶಬ್ದವನ್ನು ಶ್ಲೇಷಾರ್ಥದಲ್ಲಿ ಬಳಸಿದ್ದಾನೆ).

## ವಾಸ

ಈ ಭಾಗದಲ್ಲಿ ಮತ್ತು ಮುಂದೆ ವಚನಗಳು ಮತ್ತು ಲಿಂಗಾಯತ ಕಾವ್ಯಗಳೂ ಸೇರಿದಂತೆ ಎಲ್ಲ ಆಕರಗಳನ್ನೂ ಬಳಸಿಕೊಂಡಿದೆ. (ವರ್ಣ, ಜಾತಿ, ಅಸ್ಪೃಶ್ಯತೆ ಬಗ್ಗೆ ಮುಂದೆ ಪ್ರಸ್ತಾಪಿಸುವಾಗ ಲಿಂಗಾಯತ ಕೃತಿಗಳನ್ನು ಮಾತ್ರ ಪ್ರತ್ಯೇಕವಾಗಿ ಅನುಲಕ್ಷಿಸಲಾಗುತ್ತದೆ.) 'ಪೊಲೆಗೇರಿ'[37] ಎಂಬುದೇ ಹೊಲೆಯರ ಕೇರಿ, 'ಹೊಲಗೇರಿ'[38] ಅಥವಾ 'ಹೊಲೆಗೇರಿ.'[39] ಇದನ್ನೇ ನಾಗವರ್ಮ 'ಮಾತಂಗರ ಪಳ್ಳಿ' ಎಂದೂ 'ಪೊಲೆವಟ್ಟು' ಎಂದೂ ಕರೆದಿದ್ದಾನೆ.[40] ('ಪಕ್ಕಣ' ಎಂದರೂ ಇದೇ). ಅದು ಇದ್ದುದು ಊರ

34. ವಡ್ಡಾರಾಧನೆ. ಸಂ: ಡಿ.ಎಲ್. ನರಸಿಂಹಚಾರ್. ಬೆಂಗಳೂರು, 1970, ಪು. 9.
35. ಈತ ಒಮ್ಮೆ ತನ್ನ ಮಗಳಿಗೆ ಹೇಳುವ ಮಾತುಗಳು ಹೀಗಿವೆ – "ಮಗಳೆ ನಾಗಶ್ರೀ ನಾಮುಂ ಪಾರ್ವರೆಮುಂ, ಲೋಕಕ್ಕೆಲ್ಲಮಗ್ಗಳಂ, ಲೋಕದಿಂದಂ ಪೂಜಿತರೆಮುಂ, ಎಮ್ಮಿಂದಗ್ಗಳಂ ಪೆಱರಿಲ್ಲ" (ಅದೇ. ಪು. 13).
36. ಯಶೋಧರ ಕಾವ್ಯಂ. ಸಂ: ಎಸ್. ಬೊಮ್ಮರಸ ಪಂಡಿತ. ಮರದೂರು. 1951, ಪು. 70.
37. ಧರ್ಮಾಮೃತ. 4.174 ವ.
38. ರಾಘವಾಂಕನ ವೀರೇಶ ಚರಿತೆ. ಸಂ ಬಿ. ಶಿವಮೂರ್ತಿ ಶಾಸ್ತ್ರೀ, ಬೆಂಗಳೂರು. 1966, ಪುಟ. 19.
39. ಸಕಲ ಪುರಾತನರ ವಚನಗಳು. 1. ಪು. 10.
40. ಕರ್ನಾಟಕ ಕಾದಂಬರಿ. ಪು. 396, 398.

ಹೊರಗೆ.[40.1] ಅಸ್ಪೃಶ್ಯರಲ್ಲಿ ಬಹು ಹಿಂದಿನಿಂದ ಮತ್ತು ಈಗಲೂ ಇರುವ ಮುಖ್ಯ ಪಂಗಡಗಳೆಂದರೆ ಹೊಲೆಯರು ಮತ್ತು ಮಾದಿಗರು. ಕುಮಾರ ರಾಮನ ಬಳಿ ಇದ್ದ ವೀರಯೋಧರಲ್ಲಿ ಹೊಲೆಯರ ಹುಳ್ಳ ಒಬ್ಬ ಮತ್ತು ಮಾದಿಗರ ಹಂಪ ಇನ್ನೊಬ್ಬ.[40.2] ಅವನ ಬಳಿ ಇದ್ದ ಸೈನ್ಯಗಳಲ್ಲಿ ಆಧುನಿಕ ಕಾಲದ ಗೂರ್ಖಾ ಮರಾಠಾ ಮದರಾಸ್ ರೆಜಿಮೆಂಟುಗಳಿರುವಂತೆ–ಬೇರೆ ಬೇರೆ ಜಾತಿಯ ಸೈನ್ಯಗಳೇ ಇದ್ದುವು : ಉದಾ. "ಒಕ್ಕಲಿಗರ ಪಡೆ", "ಬೇಡರ ಪೌಜು", "ಮಾದಿಗರ ಪಡೆ" ಇತ್ಯಾದಿ. ಶೂರನಾಗಿದ್ದ ಹಂಪ[41] ಬಹುಶಃ ಮಾದಿಗರ ಪಡೆಯ ಮುಖ್ಯಸ್ಥನಾಗಿದ್ದಿರಬಹುದು; ಅದರೊಡನೆ ಇದ್ದಿರಬಹುದಾದ ಹೊಲೆಯರ ಪಡೆಗೆ ಹುಳ್ಳ ಮುಖ್ಯಸ್ಥನಾಗಿರಬಹುದು. ಕೋಲ ಶಾಂತಯ್ಯನ ಬೆಡಗಿನ ವಚನವೊಂದರಲ್ಲಿ ಊರಿನ ಒಂದು ಕೆಲದಲ್ಲಿ ಹೊಲೆಗೇರಿಯೂ ಬಲದಲ್ಲಿ ಮಾದಿಗರ ಮನೆಗಳೂ ಇರುತ್ತಿದ್ದುವೆಂಬುದಕ್ಕೆ ಸೂಚನೆಯಿದೆ (ಸಕಲ ಪುರಾತನರ ವಚನಗಳು I. ಪು. 10). ಈಗಲೂ ಇಬ್ಬರಿಗೂ ಕೊಳು ಕೊಡೆ ಇಲ್ಲ ಮತ್ತು ಬಹುಕಡೆಗಳಲ್ಲಿ ಇಬ್ಬರ ಕೇರಿಗಳೂ ಬೇರೆ ಬೇರೆಯಾಗಿಯೇ ಇರುತ್ತವೆ. ಅವರಿಬ್ಬರಿಗೂ ಸೂಕ್ಷ್ಮ ಭೇದಗಳಿದ್ದರೂ ಸ್ಪಷ್ಟವಾಗಿ ಹೇಳದ ಹೊರತು ಹೊಲೆಯ, ಮಾದಿಗ ಎರಡೂ ಸಮಾನಾರ್ಥಕಗಳೆಂದು ಈ ಪುಸ್ತಿಕೆಯಲ್ಲಿ ಭಾವಿಸಲಾಗಿದೆ. ಹೊಲೆಗೇರಿಯ ವರ್ಣನೆಗಳು ಹಲವೆಡೆ ದೊರಕುತ್ತವೆ. ಅದು ನರಕದ ನೆಲೆ, ಹೇಸಿಕೆಯ ಆಗರ, ಹೊಲಸು ತುಂಬಿದ ಗಾಳಿ ಅಲ್ಲಿಯದು ಎನ್ನುತ್ತದೆ ಕರ್ಣಾಟಕ ಕಾದಂಬರಿ (ಪು. 396, 398). ವೀರೇಶಚರಿತೆಯ ಪ್ರಕಾರ ಶಸ್ತ್ರವನ್ನು ಮಸೆ, ಕೊಲೆಗೂಟವನ್ನು ಪೂಜಿಸಿ ಪ್ರಾಣಿಗಳನ್ನು ಕೊಲ್ಲು, ಮಾಂಸ ತೆಗೆ, ರಕ್ತ ಬರಿಸು ಇಂತಹ ಮಾತುಗಳಿಂದ ಹೊಲೆಗೇರಿ ತುಂಬಿರುತ್ತದೆ.[42] ಹಸಿಯ ತೊಗಲನ್ನು ಹೊರಗೆ

---

40.1 'ಊರ ಹೊಱಗಣ ಹೊಲೆಯ.' ಸುಂಕದ ಬಂಕಣ್ಣನ ವಚನ. ಸಕಲ ಪುರಾತನರ ವಚನಗಳು–2. ಪು. 652.

40.2 ರಾಮನಾಥ ಚರಿತೆ 11. ಸಂ: ಎಚ್. ದೇವೀರಪ್ಪ. ಮೈಸೂರು. 1959, ಪು. 226.

41. ಅದೇ,– **ಆದರಿಸುತ ಕುದುರೆಯ ತನ್ನ ದುಂದಿಯ । ಮೂದಲಿಸುತ ಮುಂದುವರಿದು ।**
**ಮಾದಿಗ ಹಂಪ ಹೊಕ್ಕೇಱಿ ಮೋಹರವನು । ಬೀದಿಯ ಬಿಡಿಸಿ ತೋಱಿದನು ॥**
**ಅವನ ಹೊಳಕೆಯ ಬಂಟನು ಹೊಲೆಯರ ಹುಳ್ಳ । ತವಕದಿಂ ತನ್ನಾಳುವೆರಸು ।**
**ಬವರವ ಹೊಕ್ಕು ಹೊಯ್ದಾಡಲುಭಯ ಬಲ । ತವೆ ಕೊಂಡಾಡಿದುದವನ ॥**

42. ವೀರೇಶ ಚರಿತೆ. ಪು. 19–

**ಮಸೆ ಶಸ್ತ್ರವ ಪೂಜಿಸು ಯೂಪವ ಬಂ**
**ಧಿಸುವಜಪಶುವೊಱಲದವೊಲ್ ಗಂಟಲ ಮುಱಿ ಮ**
**ರ್ದಿಸು ಬಳಿಕುಪಚರಿಸಂಗಂಗಳನರ್ಚಿಸು ಕೊಯಿ ಪಲಲವ ತೆಗೆ ಶೋಣಿತವ**
**ಬಸಿ ಸುಲಿ ವಪೆಯಂ ಕಾಸಾಹುತಿಯಂ ಕೊಡು ಮಿ**
**ಕ್ಕೆಸರಂ ಪ್ರೋಡಾಶಪ್ರಾಶನಮಂ ಮಾಡೆಂ**
**ಬ ಸರಂ ಹೊಲಗೇರಿಯೊಳೊಗೆವಂತೊಗೆಯುತ್ತಿರೆ ಸಭೆವೊಕ್ಕಂ ನಾರದನು ॥**

ಒಣಹಾಕಿದೆ; ಒರಲಿ ಕೂಗಿಡುವ ನಾನಾ ಪ್ರಾಣಿಗಳ ಸದ್ದು ಕೇಳಿಬರುತ್ತದೆ; ಪ್ರಾಣಿಗಳನ್ನು ಕೊಂದದ್ದರಿಂದ ಸಿಡಿದ ರಕ್ತ ಚೆಲ್ಲಾಡಿದ ಕರುಳು ಅಲ್ಲುಂಟು; ಎಲುವಿನ ತಡಿಕೆಗೆ ಹೊದಿಸಿದ ಚರ್ಮದ ಮಂಚ, ನರಕಪಾಲದಲ್ಲಿ ಹೆಂಡದ ಸೇವನೆ.[43] ಈ ವರ್ಣನೆ ಕಲ್ಪನಾಮಯವಾಗಿದೆ ಅಷ್ಟೆ. ಹೊಲೆಗೇರಿ ಮೂಳೆಗಳಿಂದ ತುಂಬಿರುತ್ತದೆ, ವಾಸದ ಮನೆಗಳು ಕೊಳಕಾಗಿರುತ್ತವೆ ಎಂಬ ಧರ್ಮಾಮೃತದ ಮಾತುಗಳು[44] ಸಾಕಷ್ಟನ್ನು ಹೇಳುತ್ತವೆ. ಚಿಕ್ಕ ಗುಡಿಸಲುಗಳು, ಇಕ್ಕಟ್ಟಾದ ಬೀದಿಗಳು, ಕೊಳಕು ವಾತಾವರಣ ಇಂದಿನಂತೆಯೇ ಅಂದೂ ಇದ್ದುವು.

**ವೇಷ ಭೂಷಣ :**

ಹೊಲೆಯರು ಸಾಮಾನ್ಯವಾಗಿ ಉತ್ತಮರ ಹತ್ತಿರ ಬರುತ್ತಿರಲಿಲ್ಲ.[45] ಹೊಲೆಯರ ಒಡನಾಟವಾಗಲಿ ಕೆಳೆಯಾಗಲಿ ಕೇಡಿಗೆ ಕಾರಣವೆಂಬರ್ಥದ ಗಾದೆಯೇ ಹನ್ನೆರಡನೇ ಶತಮಾನದಲ್ಲಿತ್ತು.[45.1] ಆಕಾಸ್ಮಾತ್ ಎದುರಿಗೆ ಕುಲಜನೊಬ್ಬ ಬಂದರೆ ಹೊಲೆಯ ಕುಸಿಯುತ್ತಿದ್ದ;[46] ಎಂದರೆ ಬಾಗಿ ನಿಲ್ಲುತ್ತಿದ್ದ ಅಥವಾ ನೆಲಕ್ಕೆ ಮೈ ಚಾಚುತ್ತಿದ್ದ. ನೀಲಕಂಠಾಚಾರ್ಯನ ಆರಾಧ್ಯಚಾರಿತ್ರದಲ್ಲಿ ಬರುವ ಹೊಲೆಯ, ಹೊಲತಿಯರ ವೇಷಭೂಷಣಗಳು[47] ಹೀಗಿವೆ. ಸ್ನಾನ ಮಾಡದ ಅಂಗ, ಹಲ್ಲು ತಿಕ್ಕಿಲ್ಲ, ತಲೆಯಲ್ಲಿ ಬಾಚದೆ ಸಿಕ್ಕು ಸಿಕ್ಕಾಗಿ ಬೆಳೆದಿರುವ ಕೂದಲು, ತೊಗಲನ್ನು ಕೊಯ್ಯುವಾಗ ಕತ್ತಿ ತಾಗಿದ ಗಾಯ, ಹರಕಲು ಗಡ್ಡ. ಹೊಲತಿಯ ವರ್ಣನೆಯಲ್ಲಿ ಕೆಲವು ಸ್ವಾರಸ್ಯದ ಅಂಶಗಳಿವೆ. ತಲೆ ಬಾಚಿ ಡೊಂಕಾಗಿ ಬೈತಲೆ ತೆಗೆದಿದ್ದಾಳೆ. ಉಜ್ಜಿದ್ದರಿಂದ ಹಲ್ಲು ಬೆಳ್ಳಗಿವೆ; ಗುರುಗುಂಜಿ ಸರವನ್ನು ಹಾಕಿಕೊಂಡಿದ್ದಾಳೆ. ಸೌಭಾಗ್ಯದ ಸೂಚಕವಾಗಿ ಅವಳು ಕಂಚಿನ ಕಾಲುಂಗುರವನ್ನು ಧರಿಸಿದ್ದಾಳೆ. ಕೈಯಲ್ಲಿ 'ಗಾಟುವಳೆ' (ಬಹುಶಃ

---

43. ಹರಿಶ್ಚಂದ್ರ ಕಾವ್ಯಂ. ಸಂ: ಎಸ್. ಬಸಪ್ಪ, ಎನ್. ಬಸವಾರಾಧ್ಯ. 11. 29–31.

44. ಧರ್ಮಾಮೃತ, 4.175 ವ; 14.104.

45. "ಪೊಲೆಯರ್ ಕುಲಜರಂ ಪೊರ್ದದಂತೆ" – ಧರ್ಮಾಮೃತ.

45.1 "ಹುಲ್ಲ ಕಿಚ್ಚು ಹೊಲೆಯನ ಮೇಳಾಪ : ಅಲ್ಲಿ ಹುರುಳಿಲ್ಲ" – ಬಸವಣ್ಣನವರ ಷಟ್ಸ್ಥಲದ ವಚನಗಳು. ವಚನ 112. "ಪುಲ್ಲ ಕಿರ್ಚುಂ ಪೊಲೆಯನ ಕೆಳೆಯುಂ ಮಾಡದಾವಂಗೆ ಕೇಡಂ" – ಲೀಲಾವತೀ ಪ್ರಬಂಧಂ. ಸಂ: ಕೆ. ವೆಂಕಟರಾಮಪ್ಪ ಮತ್ತು ಡಿ. ಜವರೇಗೌಡ. ಮೈಸೂರು. 1966, 9.52. "ಹೊಲೆಯನ ಮಾತು ಮಾತಲ್ಲ, ಹುಲ್ಲು ಬೆಂಕಿ ಬೆಂಕಿಯಲ್ಲ" ಎಂಬ ಗಾದೆ ಈಗಲೂ ಬಳಕೆಯಲ್ಲಿರುವುದು ಗಮನಾರ್ಹ. (ಸಂ: ಕಾಳೇಗೌಡ ನಾಗವಾರ : ಬೀದಿ ಮಕ್ಕಳು ಬೆಳೆದೊ. ಬೆಂಗಳೂರು. 1977. ಪು. 152)

46. "ಕುಲಜನಂ ಕಂಡ ಪೊಲೆಯನಂತೆ ಕುಸಿಯದೆ." ಅದೇ, 11.37 ("ಪುಸಿಯದೆ" ಎಂಬುದಕ್ಕಿರುವ "ಕುಸಿಯದೆ" ಎಂಬ ಪಾಠಾಂತರವನ್ನು ಅಂಗೀಕರಿಸಲಾಗಿದೆ).

47. ಆರಾಧ್ಯ ಚಾರಿತ್ರ. ಸಂ: ಎನ್. ಬಸವಾರಾಧ್ಯ. ಮೈಸೂರು. 1980, 7. 7–8.

'ಗಾಜುವಳೆ'); ಒಂದು ಸುತ್ತಿನ ಸೀರೆ ಉಟ್ಟಿದ್ದಾಳೆ ("ಉಡೆಯೊಳೊರ್ಚುತ್ತಿನೊಳ್ ಪುಟ್ಟುಗೆ"[48]). ಹೊಲತಿಯರ ಉಡುಗೆಗೆ ಹಿಂದೆ ಇದ್ದ ನಿರ್ಬಂಧಗಳಲ್ಲಿ ಒಂದು ಸುತ್ತಿನ ಸೀರೆ ಇದ್ದರೂ ಇರಬಹುದು. ಹೊಲತಿಯರು ಚಿನ್ನ ಬೆಳ್ಳಿಯನ್ನು ಧರಿಸುವಂತಿರಲಿಲ್ಲವಾದ್ದರಿಂದ, ಹೊಲತಿಯರು ಕಾಲಿಗೆ ಕಂಚಿನ ಕಾಲುಂಗುರವನ್ನಿಡುತ್ತಿದ್ದರೆಂದು ಭಾವಿಸಬಹುದು. ಹೊಲೆಯ ಜಾತಿಗೆ ಹಿತ್ತಾಳೆಯ ಒಡವೆಗಳೇ ಅಮೂಲ್ಯ. ಅವೇ ಅವರಿಗೆ ಚಿನ್ನದ ಒಡವೆಗಳು.[49] ಅವರಿಗೆ 'ಪೊನ್' (=ಚಿನ್ನ) ಹೇಗೋ ಲಭ್ಯವಾದರೆ ಹಿಗ್ಗುತ್ತಿದ್ದರು.[50]

**ಸಂಬಳಿಗೋಲು :**

ಹೊಲೆಯರು ಸವರ್ಣೀಯರ ಊರೊಳಕ್ಕೆ ಸಾಮಾನ್ಯವಾಗಿ ಬರಬಾರದು. ಊರಿನ ಕಶ್ಮಲವನ್ನು ತೆಗೆಯುವುದು ಅವರ ಕೆಲಸವಾದ್ದರಿಂದ[51] ಇಂತಹ ಇತರ 'ಕೊಳಕು' ಕೆಲಸಗಳಿಗಾಗಿ ಅವರು ಊರೊಳಕ್ಕೆ ಬಂದಾಗ ತಮ್ಮ ಬರವನ್ನು ಸದ್ದಿನ ಮೂಲಕ ಘೋಷಿಸಬೇಕಿತ್ತು. ತಮ್ಮನ್ನು ಮುಟ್ಟಿಸಿಕೊಂಡು ಜನರಿಗೆ ಮೈಲಿಗೆಯಾಗದಿರಲೆಂದು ಕೋಲು ಕುಟ್ಟಿ ಸದ್ದು ಮಾಡುತ್ತಿದ್ದುದು ಒಂದು ವಿಧಾನ. ಆ ಸದ್ದಿನ ಜೊತೆ 'ಸಂಬೋಳಿ' ಎಂದು ಮತ್ತೆ ಮತ್ತೆ ಕೂಗುತ್ತಿದ್ದುದರಿಂದ ಆ ಕೋಲಿಗೇ 'ಸಂಬಳಿಗೋಲು' ಎಂಬ ಹೆಸರು ಪ್ರಾಪ್ತವಾಗಿತ್ತು. ಇದರ ಪ್ರಾಚೀನ ಉಲ್ಲೇಖ ನಾಗವರ್ಮನ ಕಾದಂಬರಿಯಲ್ಲಿದೆ. ಶೂದ್ರಕನ ಆಸ್ಥಾನವನ್ನು ಪ್ರವೇಶಿಸಿದ ಚಂಡಾಲ ಕನ್ಯೆಯು ತನ್ನ 'ವೇಣುಲತೆ'ಯಿಂದ ("ಜರ್ಜರಿತ ಮುಖಭಾಗಾಂ ವೇಣುಲತಾಂ") ನೆಲವನ್ನು ಕುಟ್ಟಿ ಸದ್ದು ಮಾಡಿದಳು ಎಂದು ಬಾಣ ವರ್ಣಿಸಿದರೆ, ನಾಗವರ್ಮ ಆ 'ವೇಣುಲತೆ'ಯನ್ನು (ತೆಳುವಾದ ಬಿದಿರಿನ ಕೋಲು) 'ಸಂಬಳಿಗೋಲು' ಎಂದು ಕರೆಯುತ್ತಾನೆ.[52] (ಜೇಡರ

---

48. ಅದೇ. ದೀಕ್ಷಾ ಪ್ರಕರಣ. 8.3.

49. ಧರ್ಮಾಮೃತ. 4.35 – "ಪಿತ್ತಳೆಯ ತೊಡವು ಪೊಲೆಯರ್ಗುತ್ತಮಮೆನಿಸಿರ್ದ ಪೊನ್ನ ತೊಡವೆನಿಸುವವೋಲ್." ಇಂತಹುದೇ ಮಾತು ಬಂಧುವರ್ಮನ (ಕ್ರಿ.ಶ. 1200) "ಸತೀಧರ್ಮಸಾರ"ದಲ್ಲೂ (ಸಂ: ಬಿ.ಎಸ್. ಸಣ್ಣಯ್ಯ. ಮೈಸೂರು. 1976. ಪು. 45) ಬಂದಿದೆ– "ಪೊಲೆಯರಿಗೆ ತವರ ಹಿತ್ತಳೆ । ವೊಳುಹಾಗಿಹುದವರಿಗದುವು ತಾಂ ಭಂಗಾರಂ । ಕುಲಜರ್ಗೆ ಬೆಳ್ಳಿ ಚಿನ್ನಂ । ಯಿಳೆಯೊಳಗಾ ತೆಱದಿ ತಕ್ಕ ದೈವವ ಪಿಡಿವರ್."

50. ಧರ್ಮಾಮೃತ. 11. 15 – "ಪೊಲೆಯಂಗೆ ಪೊನ್ ದೊರೆಕೊಂಡಂತೆ ಪೆರ್ಚಿ".

51. "ಕಸ ನೂಂಕುವ ಮಾದಿಗನ ತೆರದಿ." ರಾಘವಾಂಕ ಚರಿತೆ. ಸಂ: ಸ.ಸ. ಮಾಳವಾಡ.

52. ಕರ್ಣಾಟಕ ಕಾದಂಬರಿ. ಪು. 8, "ಅರುಣದಳೋತ್ಪಲ ಕೋಮಲ ಕರತಲದೊಳ್ ತಳೆದದೊಂದು ಸಂಬಳಿಗೋಲಿಂ । ದಿರದೆ ಪಳಂಚಿಸಿದಳ್ ಜ । ರ್ಝರರವದೊಗೆಯಲ್ಕೆ ನೃಪಸಭಾಕುಟ್ಟಿಮಮಂ."

ದಾಸಿಮಯ್ಯ ಅದನ್ನು ಅಂತ್ಯಜ ಹಿಡಿದಿದ್ದ 'ಹಿಡಿಗೋಲು' ಎನ್ನುತ್ತಾನೆ.[53]) ಬಸವಣ್ಣ ತನ್ನ ವಚನವೊಂದರಲ್ಲಿ ತನ್ನನ್ನು 'ಹೊಱಗಳ'ವನು ಎಂದೂ, ಮನೆಯೊಳಗೆ ಭಕ್ತರು ಲಿಂಗಪೂಜೆ ಮಾಡುತ್ತಿರುವಾಗ 'ಹೊಱಗಣ'ವನಂತೆ (ಹೊಲೆಯನಂತೆ) 'ಸಂಬೋಳಿ ಸಂಬೋಳಿ' ಎನ್ನುತ್ತಿದ್ದೇನೆ ಎಂದು ಹೇಳುವುದರ ಮೂಲಕ ತನ್ನ ವಿನಯವನ್ನು ವ್ಯಕ್ತಪಡಿಸಿದ್ದಾನೆ, ವಚನದಲ್ಲಿ ಬರುವ 'ಹೊಱಗಳವನು' ಮತ್ತು 'ಅನಾಮಿಕ' ಎರಡೂ ಸಮನಾರ್ಥಕಗಳೆಂಬುದು ಸ್ಪಷ್ಟ.[54] ಹರಿಹರನ ರಗಳೆಗಳಲ್ಲಿ ಅಂತ್ಯಜರ ವರ್ಣನೆಗಳನ್ನು ಮಾಡುವಾಗ ಅವರು ಹಿಡಿದಿದ್ದ ಸಂಬಳಿಗೋಲಿನ ಉಲ್ಲೇಖ ಬರುವುದಲ್ಲದೆ[55] 'ಸಂಬಳಿ ನಾಗಿದೇವ'ನೆಂಬ ಶಿವಭಕ್ತನ ಪವಾಡವನ್ನೇ ಅವನು ಬಸವರಾಜದೇವರ ರಗಳೆಯಲ್ಲಿ ತಂದಿದ್ದಾನೆ. ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಸ್ಮಶಾನಾಧಿಕಾರಿಯಾದ ವೀರಬಾಹು 'ಸಂಬಳಿಗೋಲು' ಹಿಡಿದಿದ್ದುದಲ್ಲದೆ ಮುಂದೆ ಹರಿಶ್ಚಂದ್ರನಿಗೆ ತನ್ನ ಅಧಿಕಾರವನ್ನು ಒಪ್ಪಿಸುವಾಗ ಸಂಬಳಿಗೋಲನ್ನೂ ಕೊಡುತ್ತಾನೆ ("ಉಡುಗೊಱೆಯ ವೀಳೆಯವ ಕೂಡೆ ತಾ ಹಿಡಿದ ಸಂಬಳಿಗೋಲ ಮುದ್ರೆಗೊಟ್ಟಂ ವನಧಿಮುದ್ರಿತಧರಾಧಿ ಪತಿಗೆ"). ಹರಿಶ್ಚಂದ್ರ ತನಗೆ ಸ್ಮಶಾನವನ್ನು ಕಾಯುವ ಅಧಿಕಾರವು ದೊರೆತುದನ್ನು ಊರಲ್ಲಿ ಜನರಿಗೆ ತಿಳಿಸುವಾಗ 'ಕಂಕರಿಗೋಲ'ನ್ನು ನೆಲಕ್ಕೆ ಬಡಿಯುತ್ತ 'ಸಂಬಳಿ ಸಂಬಳಿ' ಎಂದು ಕೂಗಿದಂತೆ ವರ್ಣನೆಯಿದೆ.[56] ಉರಿಲಿಂಗ ಪೆದ್ದಿ (ಇವನು ಒಬ್ಬ ಅಸ್ಪೃಶ್ಯ ವಚನಕಾರ) ಪ್ರಕಾರ ಬ್ರಾಹ್ಮಣರು ಮತ್ತು ಹೊಲೆಯರು ಮಲ ಸೋದರರು. ಜಮದಗ್ನಿಗೆ ಬ್ರಾಹ್ಮಣಿ ರೇಣುಕಾದೇವಿಯಲ್ಲಿ ಹುಟ್ಟಿದವರೇ ಬ್ರಾಹ್ಮಣರು; ಹೊಲತಿ ಮಾತಂಗಿಯಲ್ಲಿ ಹುಟ್ಟಿದವರೇ ಹೊಲೆಯರು. ಇವರಿಬ್ಬರಿಗೆ ಜಗಳವಾಗಬಾರದೆಂದು ಭಾರದ್ವಾಜ, ವಿಶ್ವಾಮಿತ್ರ, ಅಗಸ್ತ್ಯ, ನಾರದ, ಕೌಂಡಿಲ್ಯ ಎಂಬ ಐವರು ಋಷಿಗಳ ಸಾಕ್ಷಿಯಾಗಿ ಆಸ್ತಿ, ಹಕ್ಕುಗಳನ್ನು ಹಂಚಿಕೊಟ್ಟದ್ದು ಹೀಗೆ: ಊರಿನ ಗಡಿಯಲ್ಲಿರುವ ಮನೆ ಹೊಲೆಯರಿಗೆ, ಸತ್ತ ಹಸುವನ್ನೊಯ್ಯುವುದು ಅವರ ಹಕ್ಕು. ಹದಿನೆಂಟು

53. "ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ." ಜೇಡರ ದಾಸಿಮಯ್ಯನ ವಚನ ಗಳು. ಸಂ: ಎಚ್. ದೇವೀರಪ್ಪ ಮತ್ತು ಆರ್. ರಾಚಪ್ಪ. ಸಿರಿಗೆರೆ. 1974. ವಚನ 3.

54. "ಲಿಂಗಾರ್ಚನೆಯ ಮಾಡುವ ಮಹಿಮರೆಲ್ಲರೂ ಸಲಿಗೆವಂತರಾಗಿ ಒಳಗೆ ಐದಾರೆ. ಆನು ದೇವಾ ಹೊಱಗಳವನು. ಸಂಬೋಳಿ ಸಂಬೋಳಿ ಎನ್ನುತ್ತ ಇಂಬಿನಲ್ಲಿ ಇದ್ದೇನೆ. ಕೂಡಲಸಂಗಮದೇವಾ ನಿಮ್ಮ ನಾಮವಿಡಿದ ಅನಾಮಿಕನು ನಾನು." ಬಸವಣ್ಣನವರ ಷಟ್ಸ್ಥಲದ ವಚನಗಳು. ವಚನ 933.

55. "ಹೆಗಲ ಮಿಣಿ ಸಂಬಳಿಗೋಲಿನೀಶ್ವರಂ." ಹರಿಹರನ ರಗಳೆಗಳು. (ಕೆಂಭಾವಿ ಬೋಗಣ್ಣನ ರಗಳೆ).

56. ಹರಿಶ್ಚಂದ್ರ ಕಾವ್ಯ. 11. 29–31 – "ನಸುಕುಸಿದ ದೇಹ ಕಂಕರಿಗೋಲನಿಱೆದು ಬಾರಿಸುತ ಕೈವಿಡದೆ ಸಂಬಳಿ ಸಂಬಳೆಂದನು ಕೊಸರುತಿಹ ಬಾಯ್ವೆರಸಿ ಬೀದಿ ಬೀದಿಯೊಳು ಸುಳಿದು ಸತ್ಯಸಂಪನ್ನನು."

ಜಾತಿಯ ಜನರನ್ನು ಬೇಡಿ ಬದುಕಿರುವ ಹಸುವನ್ನು 'ಗೋದಾನ' ಎಂಬ ನೆಪದಲ್ಲಿ ಕೊಂಡೊಯ್ಯುವುದು ಬ್ರಾಹ್ಮಣರ ಹಕ್ಕು (ಅವರ ವಾಸ ಊರೊಳಗೆ ಎಂಬುದು ಧ್ವನಿತ). ಇಬ್ಬರಿಗೂ ಸಂಬಂಧವಿಲ್ಲವೆಂದು, ಬ್ರಾಹ್ಮಣರು ಕಂಡಾಗ ತೊಲಗಬೇಕೆಂದು 'ಸಂಭೋಳಿ' ಎಂಬ ಹೆಸರನ್ನು ಹೊಲೆಯರಿಗೆ ಕೊಟ್ಟು 'ತೊರೆಪತ್ರ' ಬರೆಯಲಾಯ್ತು.[57] ಆರಾಧ್ಯಚಾರಿತ್ರ (7.7–8),[58] ಹರಿವಂಶಪುರಾಣ[59] (8.46), ಹರಿವಂಶಾಭ್ಯುದಯ[60] ಇತ್ಯಾದಿ ಕಡೆಗಳಲ್ಲಿ ಮಿಣಿ, ಕೈಯ ಕೆರ, ಸಂಬಳಿಗೋಲುಗಳು ಮಾದಿಗನ ಲಕ್ಷಣಗಳೆಂದಿದೆ. ಪಾಲ್ಕುರಿಕೆ ಸೋಮನಾಥನ ತೆಲುಗು ಬಸವಪುರಾಣದಲ್ಲಿ,[61] ಅದರ ಹದಿನಾಲ್ಕನೇ ಶತಮಾನದ ರೂಪಾಂತರವಾದ ಕನ್ನಡ ಬಸವಪುರಾಣದಲ್ಲಿ ಶಿವನಾಗಮಯ್ಯ ಎಂಬ ಅಂತ್ಯಜ ಶಿವಭಕ್ತನು–ಇವನೇ ಹರಿಹರನಲ್ಲಿ ಬರುವ ಸಂಬೋಳಿ ನಾಗಿದೇವ–ದೊದಲು ಬೀದಿಯಲ್ಲಿ ಬರುವಾಗ ಉತ್ತಮರಿಗೆ ಹೆದರಿ 'ಸಂಬೋಳಿ' ಎನ್ನುತ್ತಿದ್ದವನು ಈಗ (ಬಸವನ ಸಂಪರ್ಕ ಬಂದ ಮೇಲೆ) ಯಾರಿಗೂ ಹೆದರುತ್ತಲೂ ಇಲ್ಲ, ಸಂಬೋಳಿ ಎಂದು ಕೂಗುತ್ತಲೂ ಇಲ್ಲ ಎಂದು ಬ್ರಾಹ್ಮಣರು ಬಿಜ್ಜಳನಿಗೆ ತಮ್ಮ ದುಗುಡವನ್ನು ಹೇಳಿಕೊಳ್ಳುವ ಪ್ರಸಂಗ ಬರುತ್ತದೆ. ಹೀಗೆ ಅಸ್ಪೃಶ್ಯರು ಊರೊಳಗೆ ಬಂದಾಗ ಕೋಲಿನಿಂದ ಕುಟ್ಟುವ, ಕೂಗುವ ಪದ್ಧತಿಯನ್ನು ಅನೇಕ ಪ್ರವಾಸಿಗರೂ ಬರೆದಿಟ್ಟಿದ್ದಾರೆ. ಪಂಜಾಬಿನಲ್ಲಿ ಈಚಿನವರೆಗೆ ಇದು ರೂಢಿಯಲ್ಲಿದ್ದಿತು. 'ಕಂಕರಿಗೋಲು' 'ಸಂಬಳಿಗೋಲು' ಎರಡೂ ಒಂದೇ. ಹೇಮಚಂದ್ರನ ದೇಶೀನಾಮಮಾಲಾದಲ್ಲಿ ಬರುವ 'ಖಿಖ್ಖಿರಿ' ಎಂಬ ದೇಶ್ಯಪದದ ಮೂಲ 'ಕಂಕರಿ' ಎಂಬುದು ಸ್ಪಷ್ಟ. 'ಸಂಬಳಿ' ಎಂಬುದರ ಮೂಲ 'ಸಂಬೋಳಿ'–ಇದು ಮರಾಠಿಯ "ಸಂಭಾಳ್"

---

57. ಉರಿಲಿಂಗ ಪೆದ್ದಿಗಳ ವಚನಗಳು. ವಚನ 240 – "ಇನ್ನು ನಿಮಗೂ ತಮಗೂ ಸೊಮ್ಮು ಸಂಬಂಧವಿಲ್ಲವೆಂದು ಕಂಡಾಗ ತೊಲಗುವಂತೆ ಸಂಭೋಳಿಯೆಂಬ ನಾಮಾಂಕಿತವಂ ಕೊಟ್ಟು ತೊರೆಪತ್ರಮಂ ಬರೆದರಾಗಿ..."

58. 'ಅಂತ್ಯಜನ ವರವೇಷ'ದ ವರ್ಣನೆ ಇದು.

59. "ಪೆಗಲೊಳ್ ತಗುಳ್ಚಿ ಮಿಳಿಗಳನೊಗೆಯಲ್ ಸಂಬಳಿಗೋಲ ಕೆರ್ಪುಟಿಸಹಿತಂ ಪುಗುತರೆ." ಹೊಲೆಯರ ಹೆಗಲಲ್ಲಿ ಮಿಣಿ, ಕೈಯಲ್ಲಿ ಸಂಬಳಿಗೋಲು, ಕೆರ, ಉಳಿಗಳು ಇದ್ದುವು. ಕೆರ ಇನ್ನೊಬ್ಬರಿಗೆ ಒಪ್ಪಿಸಬೇಕಾದ್ದು, ಧರಿಸತಕ್ಕದಲ್ಲ.

60. ಸಂ: ಬಿ.ಎಸ್. ಸಣ್ಣಯ್ಯ. ಮೈಸೂರು. 1970. 9.62 "ತಿದಿಯುಂ ಸಂಬಳಿಗೋಲುಂ ಕೆಂಪುಂ (ನ್ಯಾಯವಾಗಿ 'ಕೆರ್ಪುಂ') ಪೊಸಮಿಳಿಯುಂ."

61. ಇದರ ಆಧುನಿಕ ಕನ್ನಡಾನುವಾದವನ್ನು ನೋಡಿ–ಪಿ.ವಿ. ನಾರಾಯಣ. ಬಸವಪುರಾಣ, ಸಿರಿಗೆರೆ. 1982. ಪು. 402–"ಬೀದಿಗಳಲ್ಲಿ ಬರುವಾಗಲೆಮ್ಮ ಕಡೆಗೆ ಲಕ್ಷ್ಯವಿಡರು ಸಂಬೋಳಿಯವರು." ಇದರ ತೆಲುಗು ಮೂಲವನ್ನು ಭೀಮಕವಿ ಕನ್ನಡದಲ್ಲಿ ಹೀಗೆ ತಂದಿದ್ದಾನೆ–"ಭಕ್ತನು ಮದಿಸಿ ಪುರವೀದಿಯಲ್ಲಿ ಬರುತಂ ಬೆದಱ ಸಂಬೋಳಿಯೆನ್ನನು ಎಮ್ಮುವನಿನಿತು ಬಗೆಗೊಳ್ಳ" (ಬಸವಪುರಾಣ. ಧಾರವಾಡ. 1969. 55–5).

(=ಎಚ್ಚರ ಪದಕ್ಕೆ ಸಂವಾದಿಯಾದುದು). ಅದೇನೇ ಇರಲಿ, ಕರ್ನಾಟಕದಲ್ಲಿ ಕೋಲಿನಿಂದ ಕುಟ್ಟಿ ಸದ್ದು ಮಾಡುತ್ತ ಅಸ್ಪೃಶ್ಯರು ಊರೊಳಗೆ ಬರುತ್ತಿದ್ದ ಪದ್ಧತಿಯಿದ್ದುದಕ್ಕೆ ಮೇಲಿನವು ಸ್ಪಷ್ಟಾಧಾರಗಳು. 'ಸಂಬಳಿಗೋಲು' ಅಸ್ಪೃಶ್ಯನನ್ನು ಸೂಚಿಸುತ್ತಿದ್ದ ಚಿಹ್ನೆಗಳಲ್ಲೊಂದಾಗಿತ್ತು.

**ಆಹಾರ, ಪಾನೀಯ :**

ಹೊಲೆಯರ ಆಹಾರ ಪಾನೀಯಗಳಲ್ಲಿ ಮುಖ್ಯವಾಗಿ ಉಲ್ಲೇಖವಾಗಿರುವುವು ಮಾಂಸ ಮತ್ತು ಹೆಂಡ. ಮಾಂಸ ಸತ್ತ ಪ್ರಾಣಿಯದು. ಬ್ರಹ್ಮಶಿವ ಹೇಳುವಂತೆ, ಕುಲಹೀನನಾಗಲಿ. 'ಏಳು ಬೇಲಿಯ ತಲೆ'ಯವನಾಗಲಿ[62] ಸತ್ತ ಪಶುವನ್ನಲ್ಲದೆ ಮುಟ್ಟರು. "ಏಳು ಬೆಲೆ (=ಬೇಲಿ?) ಹೊರಗಾದ ಹೊಲೆಯ"ನ ಉಲ್ಲೇಖವನ್ನು ವೀರಶಂಕರ ದಾಸಯ್ಯ ಮಾಡಿದ್ದಾನೆ. (ಸಕಲಪುರಾತನರ ವಚನಗಳು–3, ಪು. 272). ಅವರ ಮಾಂಸದ ಅಡುಗೆಯೇ 'ಬಾಡು'[63] ('ಬಾಡು' ಎಂದರೆ ಮಾಂಸ). ತೊಗಲ ಚೀಲದಲ್ಲಿ ನೀರು ಕುಡಿಯುವುದು, ಮಾಂಸವನ್ನು ತಿನ್ನುವುದು ಹೊಲೆಯರ ನಡತೆಯೆನ್ನುತ್ತಾನೆ ಬ್ರಹ್ಮಶಿವ.[64] ಧರ್ಮಾಮೃತದಲ್ಲಿ 'ಕಳ್ಳಸಿಗಗೇರಿ' (–ಹೆಂಡ ಇಳಿಸುವವರ ಬೀದಿ)ಯನ್ನು ವರ್ಣಿಸಲಾಗಿದೆ. ಪಂಪನಂತಹ ಕವಿ, ಮಲ್ಲಿಗೆ ಇಮ್ಮಾವುಗಳೇ ಬದುಕಿನ ಸಾರ ಸರ್ವಸ್ವ ಎಂದರೆ ("ಬೀಯವಲ್ಲಿ ಮಲ್ಲಿಗೆಗಳು ಮಿಮ್ಮಾವುಗಳ್ ಎಂದೊಡಿನ್ ಪೆಱತಾವುದೊ ಸಂಸಾರಸಾರಸರ್ವಸ್ವಫಲಂ"), ಅದೆ ಪಂಪ ಮನ್ಮಥನ ಓಡಾಡುವ ಬಳ್ಳಿಗಳಂತಹ ಚೆಲುವೆಯರಿಂದಲೇ ಸಂಸಾರವು ಸಾರ ಎನ್ನಿಸಿಕೊಳ್ಳುವುದು ಎಂದರೆ ("ಸಾರಮನಂಗ ಜಂಗಮಲತಾಲಲಿತಾಂಗಿಯರಿಂದ ಮಲ್ತೆ ಸಂಸಾರಂ..."[65]), ನಯಸೇನನ ಕಾಲದ ಕೆಲವರ ಪ್ರಕಾರ ಹೆಂಡ ಮಾಂಸಗಳನ್ನು ಬಿಟ್ಟರೆ ಬದುಕಿನಲ್ಲಿ ಉಳಿಯುವ ಸ್ವಾರಸ್ಯವಾದರೂ ಏನು? ("ಸಂಸಾರದ ಫಲಮಾವುದೊ ಬಿಸುಟು ಕಳ್ಳುಮಂ ಮಾಂಸಮುಮಂ."[66]) ಕಳ್ಳನ್ನು

---

62. ಸಮಯ ಪರೀಕ್ಷೆ. 11. 103. 'ಏಳು ಬೇಲಿಯ ತಲೆ'ಯವರು ಅಸ್ಪೃಶ್ಯರಲ್ಲಿ ಮಾದಿಗರಿರಬಹುದು. ಅಥವಾ ಇನ್ನೂ ಕೆಳಗಿನ ಯಾವುದೋ ಜಾತಿಯವರಿರಬಹುದು. 'ಏಳು ಬೇಲಿ' ಎಂಬುದು ಉತ್ತಮರಿಂದ ಇರಬೇಕಾದ ದೂರವನ್ನು ಹೇಳಬಹುದು 'ಏಳು ಬೇಲಿ' ಎಂಬುದನ್ನು ಅಕ್ಷರಶಃ ತೆಗೆದುಕೊಳ್ಳಬೇಕಾಗಿಲ್ಲ. ಊರ ಪಕ್ಕದಲ್ಲಿ 'ಕಣ'ದ ಬೇಲಿಗಳು ಒಂದರ ಹಿಂದೆ ಒಂದು ಬರುತ್ತವೆ. ಅವುಗಳ ಆಚೆ ವಾಸಿಸುವ ಹೊಲೆಯರೇ (ಆಥವಾ ಮಾದಿಗರೇ) 'ಏಳು ಬೇಲಿಯ ತಲೆ'ಯವರಿರಬಹುದು.

63. ಬಿ.ವ್ಹಿ. ಮಲ್ಲಾಪುರ: ನಯಸೇನ ಮತ್ತು ಅವನ ಕೃತಿಗಳು. ಧಾರವಾಡ. 1978. ಪು. 297.

64. ಸಮಯ ಪರೀಕ್ಷೆ. 14.96.

65. ಪಂಪಭಾರತ. 1.55; 1.114.

66. ಧರ್ಮಾಮೃತ. 2.198.

ಕುಡಿಯುವವರು ತಾವು ಕುಡಿಯುವ ಮುನ್ನ ಬಡವರಿಗೆ ಧರ್ಮಗಳ್ಳನ್ನು (=ಬಿಟ್ಟಿ ಹೆಂಡ) ಹೊಯಿಸುತ್ತಿದ್ದುದನ್ನು ನಯಸೇನ ಹೇಳಿದ್ದಾನೆ.[67] ಅವನಿಗೆ ಮುಂಚೆಯೇ ಪಂಪ ಈ ಧರ್ಮಗಳ್ಳಿನ ವಿವರಣೆಗಳನ್ನು ತನ್ನ ಪಂಪಭಾರತದಲ್ಲಿ ಕೊಟ್ಟಿದ್ದ.[68] (ಇವರೆಲ್ಲ ಅಸ್ಪೃಶ್ಯರೆಂದು ಭಾವಿಸಬೇಕಾಗಿಲ್ಲ). ಹೊಲೆಯ ಜಾತಿಯ ಮೇಲಿನ ಶೂದ್ರ ಜಾತಿಯವರು ಗೋಮಾಂಸವನ್ನು ಬಿಟ್ಟು ಉಳಿದೆಲ್ಲ ಮಾಂಸವನ್ನು ತಿನ್ನುವ ಬ್ರಾಹ್ಮಣರಿಗೆ ಊರಲ್ಲಿರಲು ಅವಕಾಶ ಕೊಟ್ಟು, ಗೋಮಾಂಸ ತಿನ್ನುವ ಹೊಲೆಯರನ್ನು ಮಾತ್ರ ಊರ ಹೊರಗೆ ಇಟ್ಟುದನ್ನು ವಚನಕಾರರು ಪ್ರತಿಭಟಿಸಿದ್ದಾರೆ.[69]

## ಹೊಲೆಯರ ನೀರು :

ಹೊಲೆಯರಿಗೇ ಪ್ರತ್ಯೇಕವಾದ ಬಾವಿ, ಕುಂಟೆಗಳಿದ್ದುವು. ಜೇಡರ ದಾಸಿಮಯ್ಯ ಎಲುಬು ನಟ್ಟಿದ್ದ ಹೊಲೆಯರ ಬಾವಿಯನ್ನು ಉಲ್ಲೇಖಿಸಿದ್ದಾನೆ.[70] ("ಹೊಲೆಯರ ಬಾವಿಯಲೊಂದು ಎಲು ನಟ್ಟಿದ್ದರೆ ಹೊಲೆಯೆಂಬುದು ಲೋಕವೆಲ್ಲಾ"). ಹೊಲೆಯರ

67. ಅದೇ. 1.184 – "ನೆರೆದೆಲ್ಲರ್ ಕಳ್ಗುಡಿಯುತ್ತಿರೆ ಬಡವರ್ಗಲ್ಲಿ ಧರ್ಮಗಳ್ಳೆಂದೆಱೆವರ್."

68. ಪಂಪಭಾರತ. 4.87, ವ – "ಮೂನೂಱಱುವತ್ತು ಜಾತಿಯ ಕಳ್ಗಳಂ ಮುಂದಿಟ್ಟು ಮಧುಮಂತ್ರದಿಂ ಮಧುದೇವತೆಗಳನರ್ಚಿಸಿ ಪೊನ್ನ ಬೆಳ್ಳಿಯ ಪದ್ಮರಾಗದ ಪಚ್ಚೆಯ ಗಿಳಿಯ ಕೋಗಿಲೆಯ ಕೊಂಚೆಯಂಚೆಯ ಕುಂತಳಿಕೆಯ ಮಾಣ್ಕೆಯ ಸಿಪ್ಪುಗಳೊಳ್ ಬೊಟ್ಟನಿಟ್ಟುಕೊಂಡು ಕೆಲದರ್ಗೆಲ್ಲಂ ಬೊಟ್ಟಿಟ್ಟು ಕಿಱಿಯರ್ ಪಿರಿಯರಱಿದು ಪೊಡವಟ್ಟು ಧರ್ಮಗಳ್ ಕುಡಿವರ್ಗೆಲ್ಲಂ ಮೀಸಲ್ಗಳ್ಳನೆಱೆದು ಪೊನ್ನ ಬೆಳ್ಳಿಯ ಸಿಪ್ಪುಗಳೊಳ್ ಕಿಱಿಕಿಱಿದನೆಱೆದು ಕುಡಿ ಬಿದಿರ ಕುಡಿಯ ಮಾವಿನ ಮಿಡಿಯ ಮಾರುದಿನ ಮೆಣಸುಗಡಲೆಯ ಪುಡಿಯೊಳಡಸಿದಲ್ಲವಲ್ಲಣಿಗೆಯ ಚಕ್ಕಣಂಗಳಂ ಸವಿಸವಿದು..." 'ಧರ್ಮಗಳ್ಳಿ'ನ ವಿಷಯ ಬಾಹುಬಲಿಯ ಧರ್ಮನಾಥ ಪುರಾಣದಲ್ಲೂ ಇದೆ (ಸಂ: ಎನ್. ಬಸವಾರಾಧ್ಯ. ಮೈಸೂರು. 1975. ಪು. 257). ಸಿರಿಸಿಂಬಿ, ತಂಪುಗ, ಬಬ್ಬರಿ, ಗಂಗಾಸಾಗರ, ಸುರಾಳ, ಸೋಮ, ವರವಾಣಿ, ಮಾಳವೋದರಿ, ಮರವಟ್ಟಿಗೆ ಇವು ಕೆಲವು ಮದ್ಯಗಳ ಹೆಸರು (ಪು. 256).

69. "ಕುಱಿ ಕೋಳಿ ಕಿಱುಮೀನ ತಿಂಬವರ ಊರೊಳಗೆ ಇರು ಎಂಬರು, ಅಮೃತಾನ್ನವ ಕಱೆವ ಗೋವ ತಿಂಬವರ ಊರಿನಿಂದ ಹೊರಗಿರು ಎಂಬರು" (ಅಂಬಿಗರ ಚೌಡಯ್ಯನ ವಚನಗಳು. ಸಂ: ಸಿದ್ಧಾಶ್ರಮ ಮತ್ತು ಎಸ್. ವಿದ್ಯಾಶಂಕರ. ಬೆಂಗಳೂರು, ವಚನ 7); "ಕುಱಿ ಕೋಳಿ ಕಿಱುಮೀನು ತಿಂಬವರಿಗೆಲ್ಲ ಕುಲಜ ಕುಲಜರೆಂದೆಂಬರು ಶಿವಗೆ ಪಂಚಾಮೃತವ ಕಱೆವ ಪಶುವ ತಿಂಬ ಮಾದಿಗ ಕೀಳುಜಾತಿಯೆಂಬರು" (ಶಿವಶರಣೆಯರ ವಚನಗಳು. ಪು. 391). ಈ ಎರಡನೆಯ ವಚನದ ಕರ್ತೃ ಅಸ್ಪೃಶ್ಯಳಾದ ಕಾಳವ್ವೆ; ಈಕೆ ಉರಿಲಿಂಗ ಪೆದ್ದಿಯ ಹೆಂಡತಿ.

70. ಜೇಡರ ದಾಸಿಮಯ್ಯನ ವಚನಗಳು. ಸಂ: ಎಚ್. ದೇವೀರಪ್ಪ ಮತ್ತು ಆರ್. ರಾಚಪ್ಪ. ಸಿರಿಗೆರೆ. 1974, ವಚನ 3. ಇಲ್ಲಿಯ ಸೂಚನೆಗೆ ನಾನು ಡಾ. ಎಂ.ಎಂ. ಕಲಬುರ್ಗಿ ಅವರಿಗೆ ಕೃತಜ್ಞ.

ಬಾವಿ ಎಂದು ಸೂಚನೆ ಕೊಡಲು ಅದರ ಒಳಗೆ ಅಥವಾ ಮೇಲ್ಭಾಗದಲ್ಲಿ ಎಲುಬನ್ನು ಸಿಕ್ಕಿಸಿದ್ದರೆ ಆಶ್ಚರ್ಯವಿಲ್ಲ. ಅವರಿಗೆ ಮೀಸಲಾಗಿದ್ದ ಬಾವಿಯ ನೀರಾಗಲಿ ಅವರ ಮನೆಯ ನೀರಾಗಲಿ ಮೈಲಿಗೆಗಳು.

ಬಾಣನ ಕಾದಂಬರಿಯಲ್ಲಿ ಹೊಲೆಯರ ಪಾತ್ರೆಯ ನೀರು ಪವಿತ್ರವೆಂಬ ಜನೋಕ್ತಿಯನ್ನು ಉಲ್ಲೇಖಿಸಲಾಗಿದೆ. ಗಿಳಿಯಾಗಿದ್ದ ವೈಶಂಪಾಯನನಿಗೆ ಜಾತಿಸ್ಮರತ್ವವಾಗುತ್ತದೆ. ದುರದೃಷ್ಟವಶದಿಂದ ಅದು ಒಬ್ಬ ಚಂಡಾಲನ ಕೈಗೆ ಸಿಕ್ಕು ಅವನು ಗಿಳಿಯನ್ನು ತನ್ನ ಯಜಮಾನನಿಗೆ ಒಪ್ಪಿಸುತ್ತಾನೆ. ಆ ಮನೆಯ ಚಂಡಾಲಕನ್ಯೆ ಗಿಳಿಗೆ ಆಹಾರ ಕೊಡಲು ಹೋದಾಗ ತಾನು ಹಿಂದೆ ಬ್ರಾಹ್ಮಣ ಜಾತಿಯವನೆಂಬ ನೆನಪು ಬಂದಿದ್ದ ಗಿಳಿ ಆ ಆಹಾರವನ್ನು ಸ್ವೀಕರಿಸಲು ತಿರಸ್ಕರಿಸುತ್ತದೆ. ಆಗ ಆಕೆ–"ಪಾನೀಯಮಪಿ ಚಾಂಡಾಲಭಾಂಡಾದಪಿ ಭುವಿ ಪತಿತಂ ಪವಿತ್ರಮೇವ ಇತ್ಯೇವಂ ಜನಾಃ ಕಥಯತಿ" (ಹೊಲೆಯರ ಪಾತ್ರೆಯಿಂದ ಭೂಮಿಗೆ ಬಿದ್ದ ನೀರು ಪವಿತ್ರವೇ ಸರಿ ಎಂದು ಜನರು ಹೇಳುತ್ತಾರೆ) ಎಂದು ಹೇಳಿ ಒಪ್ಪಿಸುತ್ತಾಳೆ. ಕರ್ಣಾಟಕ ಕಾದಂಬರಿಯಲ್ಲಿ ಆ ಭಾಗ ಹೀಗಿದೆ – "ಚಂಡಾಲ ಭಾಂಡದಿಂ ಭೂಮಿ ಪತಿತಮಾದಂಬುವುಂ ಪವಿತ್ರಂ ಎಂಬುದುಂಟು."[71] ಗಿಳಿಗೆ ಅವಳ ಜಾಣ್ಮೆಯ ಮಾತು ಕೇಳಿ, ವಿವೇಕವು ಚಂಡಾಲ ಜಾತಿಯಲ್ಲಿರಲು ಹೇಗೆ ಸಾಧ್ಯ ಎಂದು ಆಶ್ಚರ್ಯಪಡುತ್ತದೆ. ಕ್ರಿ.ಶ. ಏಳನೇ ಶತಮಾನದಷ್ಟು ಹಿಂದಿನ ಬಾಣನಲ್ಲಿ ದಾಖಲಾಗಿರುವ ಜನಶ್ರುತಿ ಇಂದಿಗೂ ಜೀವಂತವಾಗಿರುವುದು ಆಶ್ಚರ್ಯ. ಬ್ರಾಹ್ಮಣರು ಹೊಲೆಗೇರಿಯೊಳಕ್ಕೆ ಹೋದರೆ, ತಮಗೆ ಪುಣ್ಯ ಪ್ರಾಪ್ತಿಯೆಂದು ಬ್ರಾಹ್ಮಣರೂ ತಮಗೆ ಅನಿಷ್ಟಪ್ರಾಪ್ತಿಯೆಂದು ಹೊಲೆಯರೂ ಈಗಲೂ ಭಾವಿಸುವ ಸಂಗತಿಯನ್ನು ಹಿಂದೆ ನೋಡಿದ್ದೇವೆ. ಒಂದು ಪ್ರಬಲವಾಗಿ ಮತ್ತು ವ್ಯಾಪಕವಾಗಿ ಹಬ್ಬಿರುವ ವದಂತಿಯ ಪ್ರಕಾರ ಎಷ್ಟೋ ಬ್ರಾಹ್ಮಣರು ತಮ್ಮ ಮದುವೆ ಹಿಂದಿನ ದಿನ ರಾತ್ರಿ ಹೊಲೆಗೇರಿಗೆ ಗುಟ್ಟಾಗಿ ಹೋಗಿ ಲಂಚಕೊಟ್ಟು ಚಪ್ಪಲಿಯನ್ನು ಅದ್ದಿ ಹೊಲಿಯಲು ಇಟ್ಟಿದ್ದ ಬಾನಿಯ ನೀರನ್ನು ತರುತ್ತಾರೆ. ಇದನ್ನು ನಿಜವೆಂದು ಅಥವಾ ನಿಜವಲ್ಲದೆಂದು ಸಾಧಿಸಿ ತೋರುವುದು ಅಷ್ಟು ಸುಲಭವಲ್ಲವಾದರೂ ಜನವದಂತಿಯಂತೂ ಪ್ರಬಲವಾಗಿದೆ; ಬಾಣ ಅದನ್ನು ಹಿಡಿದಿಟ್ಟಿರುವುದು ಮೆಚ್ಚಬೇಕಾದ್ದು.

ಈ ಬಗ್ಗೆ ಜೈನನಾದ ಬ್ರಹ್ಮಶಿವನಲ್ಲಿ ಸ್ಪಷ್ಟವಾದ ಕೆಲವು ಹೇಳಿಕೆಗಳಿವೆ. 'ಕರವತಿಗೆ' (ಕರಪಾತ್ರಿಕಾ) ಎಂಬುದು ಕೈಯಲ್ಲಿ ಹಿಡಿಯುವ ಪಾತ್ರೆಯೆಂಬುದು ವಾಚ್ಯಾರ್ಥವಾದರೂ ಅದು ಚರ್ಮದಲ್ಲಿ ಮಾಡಿದ್ದೆಂಬುದಕ್ಕೆ ಸ್ಪಷ್ಟ ಆಧಾರಗಳಿವೆ.[72] ಚರ್ಮದ ಪಾತ್ರೆಯ ಕೊಳಕು ನೀರು ಬ್ರಾಹ್ಮಣರಿಗೂ 'ಭಗವ' ಸನ್ಯಾಸಿಗಳಿಗೂ

71. ಕರ್ಣಾಟಕ ಕಾದಂಬರಿ. ಸಂ :ಬಿ. ಮಲ್ಲಪ್ಪ. ಮೈಸೂರು. 1892, ಪು. 401.

72. ಸಮ್ಮಗಾರರು ಪ್ರಾಣಿಚರ್ಮವನ್ನು ನೀರಲ್ಲಿ ಅದ್ದಿ ಹದಪಡಿಸಿ ಮಾಡಿದ್ದು ಕರವತಿಗೆ (ಸಮಯ ಪರೀಕ್ಷೆ, 6.17); ಅದು ತೊಗಲಿಂದ ಮಾಡಿದ್ದು (ಅದೇ, 6.16).

ವ್ಯಾಧರಿಗೂ ಪವಿತ್ರವಾಗಿದ್ದಿತು.[73] ಕರವತಿಗೆಯ ನೀರನ್ನು 'ಗೋಚರ್ಮವಾರಿ' ಎಂದು ಕರೆದಿರುವುದನ್ನು ಗಮನಿಸಬೇಕು.[74] ಗೋಮಾಂಸ, ಗೋಚರ್ಮ ಎರಡೂ ಒಂದೇ ಆದ್ದರಿಂದ ಗೋಚರ್ಮಜಲವನ್ನು ಕುಡಿಯಬಾರದೆಂದು ಅವನ ವಾದ.[75] ಹೊಲೆಯರು ನೀರಿಗಾಗಿ ಇಟ್ಟುಕೊಂಡಿರುತ್ತಿದ್ದ ಚರ್ಮದ ನೀರನ್ನು ಬ್ರಾಹ್ಮಣರೂ ಸನ್ಯಾಸಿಗಳೂ ಪವಿತ್ರವೆಂದು ಭಾವಿಸಿದ್ದರು. ತೊಗಲಿನ ನೀರನ್ನು ಕುಡಿಯುವುದು, ಮಾಂಸವನ್ನು ತಿನ್ನುವುದು ಹೊಲೆಯರ ಸ್ವಭಾವ; ಅದನ್ನು ಮೇಲ್ಜಾತಿಯವರು ಅನುಸರಿಸುವುದು ಬ್ರಹ್ಮಶಿವನಿಗೆ ಸಮ್ಮತವಾಗದು (ಸಮಯ ಪರೀಕ್ಷೆ. 14.96).

## ಬ್ರಾಹ್ಮಣರು ಮತ್ತು ಮಾಂಸಭಕ್ಷಣೆ :

ಕರ್ನಾಟಕದ ಬ್ರಾಹ್ಮಣರು ಮಧ್ಯಯುಗದಲ್ಲಿ ಮಾಂಸ ಭಕ್ಷಣವನ್ನು ಮಾಡುತ್ತಿದ್ದ ರೆಂಬುದಕ್ಕೆ ಕೆಲವು ಸ್ಪಷ್ಟ ಆಧಾರಗಳಿವೆ. ಬ್ರಾಹ್ಮಣನಾದ ದುರ್ಗಸಿಂಹನ ಪಂಚತಂತ್ರ ದಲ್ಲಿ ಹೀಗೆ ಹೇಳಿದೆ[76]: ಬ್ರಾಹ್ಮಣರೂ ಕ್ಷತ್ರಿಯರೂ ವೇದೋಕ್ತ ಮಾರ್ಗದಲ್ಲಿ ನಡೆಯು ವವರು; ಅವರು ಯಾಗ, ಅತಿಥಿ, ಪಿತೃದೇವತಾ ನಿಮಿತ್ತವಾಗಿ ವಿಧಿ ಪೂರ್ವಕವಾಗಿ ಪ್ರಾಣಿವಧೆ ಮಾಡುವರೇ ಹೊರತು ಅನ್ಯವಲ್ಲ. ವ್ಯರ್ಥವಾಗಿ ಅವರು ವಧೆ ಮಾಡುವು ದಿಲ್ಲ ("ವೃಥಾ ವಧಗೆಯ್ವರಿಲ್ಲ"). ಪ್ರಾಣಿಬಲಿಯು ಅವರಿಗೆ ಪುಣ್ಯ ಫಲವನ್ನು ಕೊಡು ತ್ತದೆ ("ಅವರ್ಗಂ ಆ ಕರ್ಮಂ ಪುಣ್ಯಫಲಮನೀವುದೊಂದುಂ ಸಂದೆಯಮಿಲ್ಲ"). ಈ ಕ್ರಮದಲ್ಲಲ್ಲದೆ ಅನ್ಯರೀತಿಯಲ್ಲಿ ಪ್ರಾಣಿಗಳನ್ನು ಕೊಂದರೆ, ಅಥವಾ ತಿಂದರೆ ಮಹಾಪಾತಕ ("ಈಯಂದಮಲ್ಲದೆ ಪ್ರಾಣಿಗಳಂ ಕೊಂದೊಡಂ ತಿಂದೊಡಂ ಮಹಾ ಪಾತಕಂ"). ಬ್ರಹ್ಮಶಿವನಲ್ಲೂ ಬಸವ ಮತ್ತು ಇತರ ವಚನಕಾರರಲ್ಲೂ ಇದಕ್ಕೆ ಸಮರ್ಥನೆಯಿದೆ. "ಹೋಮದ ನೆವದಲ್ಲಿ ಹೋತನ ತಿಂಬ ಅನಾಮಿಕರು" ಎಂದು ಬಸವಣ್ಣ ಬ್ರಾಹ್ಮಣರನ್ನು ಕರೆದಿದ್ದಾನೆ.[77] ಅವರ ನಡೆ ನುಡಿಗಳು ಏಕವಾಗಿಲ್ಲವೆಂದು ಹೇಳುವಾಗ ಅವರ ಗೋಮಾಂಸ ಭಕ್ಷಣೆಯನ್ನು ಹೇಳಿದ್ದಾನೆ.[78] ಪಶುವನ್ನು ಕೊಂಡು

---

73. "ಕರವತಿಗೆಯ ಕೊಳೆ ನೀರ್ ಪಾ। ರ್ವರಿಗಂ ಭಗವರಿಗಮಂತೆ ವ್ಯಾಧರಿಗಂ ತಾಂ । ಪರಮಂ ಪವಿತ್ರಮುಂ ಜನರಲ್ಲಿ ಪೊಲೆಯರ್ಗಮಾಗದೆಂತುಂ ಕುಡಿಯಲ್" (ಅದೇ, 6.13).
74. ಅದೇ, 6.19.
75. ಅದೇ, 6.20.
76. ಪಂಚತಂತ್ರ, ಪು. 50–1.
77. ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ 576.
78. ಅದೇ, ವಚನ, 574 – "ಏನಯ್ಯಾ ವಿಪ್ರರು ನುಡಿದಂತೆ ನಡೆಯರು: ಇದೆಂತಯ್ಯಾ, ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ. ಕೂಡಲ ಸಂಗಮದೇವಾ, ಹೊಲೆಯರ ಬಸುಱಲ್ಲಿ ವಿಪ್ರರು ಹುಟ್ಟಿ ಗೋಮಾಂಸವ ತಿಂಬುವರೆಂಬುದಕ್ಕೆ ಇದೇ ದೃಷ್ಟ."

ಸುಟ್ಟು ತಿಂದು ಬ್ರಾಹ್ಮಣರು ಸ್ವರ್ಗಕ್ಕೆ ಹೋಗುತ್ತೇವೆಂದು[79] ನಂಬುತ್ತಾರೆ. ಅವರ ಪ್ರಕಾರ 'ಪಶುಕರ್ಮ'ವೇ ವೇದದ ಸಾರ, ಶ್ರೀಮಂತನಿಗೆ ಪಶುಕರ್ಮ ಮಾಡಿಸುವುದೇ ಪರಮ.[80] ಯಾರಾದರೂ ನೋಡಿಯಾರೆಂದು ಊರ ಹೊರಗೆ ಹೋಗಿ ಪಶುವು ಕೂಗದಂತೆ ಎಚ್ಚರ ವಹಿಸಿ ಕೊಂದು ತಿನ್ನುತ್ತಾರೆ.[81] ಯಜ್ಞ ಶಾಲೆಗೂ ಹೊಲೆಯನ ಮನೆಗೂ ಭೇದವಿಲ್ಲ.[82] ಬ್ರಾಹ್ಮಣರು ವೇದವನ್ನು ಓದಲು ಮುಖ್ಯ ಕಾರಣ ಅದು ಮಾಂಸವನ್ನು ತಿನ್ನಲು ಮತ್ತು ಪರವನಿತೆಯರನ್ನು ಭೋಗಿಸಲು ಅವಕಾಶ ಕೊಡುತ್ತದೆ ಎಂದು.[83] ಹಾವಿನಹಾಳ ಕಲ್ಲಯ್ಯನ ಪ್ರಕಾರ, ಗೋಮಾಂಸ ತಿನ್ನುವುದನ್ನು ಕಲಿತ ಬ್ರಾಹ್ಮಣನಿಂದ ಉಪದೇಶ ಹೊಂದಿ ಉಳಿದ ಹದಿನೇಳು ಜಾತಿಗಳು ಮಾಂಸ ತಿನ್ನುವುದನ್ನು ಕಲಿತುವು ("ಮಿಕ್ಕ ಹದಿನೇಳು ಜಾತಿ ವಿಪ್ರರ ಕೈಯಲನುಗ್ರಹವ ಪಡೆದು ತಿನ ಕಲಿತರಯ್ಯಾ").[84] ಜನ್ನನ ಯಶೋಧರಚರಿತದಲ್ಲೂ ಬ್ರಾಹ್ಮಣರ ಮಾಂಸಾಹಾರದ ಉಲ್ಲೇಖಗಳಿವೆ.

ಮಧ್ಯಕಾಲೀನ ಯುಗದ ಬಳಿಕ–ಯಾವಾಗ ತಿಳಿಯದು–ಬ್ರಾಹ್ಮಣರು ಲಿಂಗಾಯತ ಮತದ ಪ್ರಭಾವದಿಂದಾಗಿ ಪೂರ್ಣ ಸಸ್ಯಾಹಾರಿಗಳಾದಂತೆ ಕಾಣುತ್ತದೆ. (ಜೈನಧರ್ಮದ ಪ್ರಭಾವದಿಂದಾಗಿ ಸಸ್ಯಾಹಾರಿಗಳಾದರು ಎಂದು ವಾದಿಸಲು, ಜೈನ ಧರ್ಮದ ಏಳಿಗೆಯ ಕಾಲದಲ್ಲೂ 10, 11ನೆಯ ಶತಮಾನ–ಬ್ರಾಹ್ಮಣರು ಮಾಂಸಾಹಾರಿಗಳಾಗಿದ್ದುದು ಅಡ್ಡಿಯಾಗಿದೆ.) ಬ್ರಾಹ್ಮಣರು ಈಗಲೂ ನೇಪಾಳದಲ್ಲಿ ವಿಶೇಷ ಸಂದರ್ಭಗಳಲ್ಲಿ (ಉದಾ: ಶಿವರಾತ್ರಿ) ಮಾಂಸಾಹಾರವನ್ನು ಮಾಡುತ್ತಾರೆ. ಕಾಶ್ಮೀರದ ಬ್ರಾಹ್ಮಣರೂ ಗೋಮಾಂಸ ವಿನಾ ಮಾಂಸಾಹಾರಿಗಳೇ.

## ಹೊಲೆಯರ, ಬ್ರಾಹ್ಮಣರ ಕೆಲವು ಸಂಬಂಧಗಳು :

ಹೊಲೆಗೇರಿಗೆ ಬ್ರಾಹ್ಮಣರ ಪ್ರವೇಶವಿಲ್ಲವೆಂಬುದನ್ನು ಬ್ರಹ್ಮಶಿವನೂ ಹೇಳಿದ್ದಾನೆ. ಪೊಲೆಯರು ತಮ್ಮ ಕೇರಿಗೆ ಪೊಲೆಯರು ಬಂದರೆ ಸಂಭ್ರಮಿಸುತ್ತಾರೆ, ಆದರೆ ಅವರು 'ಕುಲಜರ್ ಸಮಯಿಗಳಂ' (ಬ್ರಾಹ್ಮಣರನ್ನು) ಒಳಕ್ಕೆ ಬಿಟ್ಟುಕೊಳ್ಳುವುದಿಲ್ಲ. ಆದರೆ

---

79. ಸಮಯಪರೀಕ್ಷೆ, 11.104.

80. ಅದೇ, 11.105

81. ಅದೇ, 11.107, "ಆರಾನುಂ ಕಂಡಪರೆಂ । ದೂರಿಂ ಪೊಱಗೊಯ್ದು ವೊಳಱದಂತಿರೆ ಪಶುವಂ । ಘೋರಂಬಡಿಸಿಯೆ ಕೊಂದದ । ನಾರೋಗಿಪ ವಿಪ್ರಸಮಿತಿ ಗೆಯ್ಯದು–ದುಂಟೇ ॥"

82. ಅದೇ, 11.111.

83. ಅದೇ, 11.143.

84. ಸಕಲ ಪುರಾತನರ ವಚನಗಳು–2. ಪು. 731.

'ನಿಷ್ಕಪಟತೆ'ಯಿಂದ, ಎಂದರೆ ಮನಃಪೂರ್ವಕವಾಗಿ ಜೈನರನ್ನು ಬಿಟ್ಟುಕೊಳ್ಳುತ್ತಾರೆ."[85] ಹೊಲೆಯರ ಚರ್ಮದ ಪಾತ್ರೆಯ ನೀರು ಬ್ರಾಹ್ಮಣರಿಗೆ ಪವಿತ್ರವಾಗಿದ್ದಿತೆಂಬುದನ್ನು ನೋಡಿದ್ದೇವೆ. ಇನ್ನೂ ಕೆಲವು ವಿಲಕ್ಷಣ ಸಂಬಂಧಗಳು ಆ ಅತಿ ಮೇಲಿನ ಜಾತಿ ಮತ್ತು ಅತಿ ಕೆಳಗಿನ ಜಾತಿಗಳ ಮಧ್ಯೆ ಇದ್ದುವು. ಮಾರಬ್ಬೆ, ಮಸಣಿವಾಸಿಣಿ (ಶ್ಮಶಾನ ವಾಸಿನಿ), ಬೀರ, ಮೈಲಾರ ದೈವಗಳ ಹಬ್ಬಗಳ ಸಂದರ್ಭಗಳಲ್ಲಿ ಬ್ರಾಹ್ಮಣರನ್ನು ಹೊಲೆಯರು ಮುಟ್ಟಿದರೆ ಮೈಲಿಗೆಯಾಗದೆಂದು ಬ್ರಾಹ್ಮಣರೇ ಹೇಳುತ್ತಿದ್ದರು.[86] ಹೊಲೆಯರ 'ಬಳರಿ' (=ದೇವತೆ) ತಮಗೆ ಕೆಟ್ಟುದನ್ನು ಮಾಡಿಯಾಳೆಂದು ಶೈವರೂ, ವೈದಿಕರೂ, ಬ್ರಾಹ್ಮಣರೂ ತಮ್ಮ ಶ್ರೇಷ್ಠತ್ವವನ್ನು ಬಿಟ್ಟು ಹೊಲೆಯರ ಜೊತೆ 'ಅರ್ಚನೆಗುಣಿ'ಯುತ್ತಿದ್ದರು.[87] ಅರಿಸಿನ ಹಚ್ಚಿಕೊಂಡು, ಬಾಸಿಂಗವನ್ನು ಹಣೆಗೆ ಕಟ್ಟಿಕೊಂಡು ಕೋಲು ಹಿಡಿದು ದೇವಿಯ ಮುಂದೆ ಕುಣಿಯುವುದೇ 'ಅರ್ಚನೆಗುಣಿ' ಯುವುದು. ಬಳರಿ ಹೊಲೆಯರ ದೇವತೆ; ಮಾರಿ, ಮಸಣಿವಾಸಿಣಿಗಳೂ ಹೊಲೆಯರ ದೈವಗಳೇ. ಆ ದೈವಗಳಿಗೆ ಹೆದರಿದ ಬ್ರಾಹ್ಮಣರು ಅವುಗಳ ನೋಂಪಿ ಯನ್ನು ಹೊತ್ತ ಮೇಲೆ, ಆ ದೈವಗಳ ಅನುಯಾಯಿಗಳಾದ ಹೊಲೆಯರು ಪರೆ ಬಾಜಿಸುತ್ತಾ ಕುಣಿಯುತ್ತಿದ್ದರೆ ಅವರ ಜೊತೆ ಅನಿವಾರ್ಯವಾಗಿ ಮಿಶ್ರವಾಗುತ್ತಿದ್ದರು. ಅಗತ್ಯತೆ ಅಸ್ಪೃಶ್ಯತೆಯನ್ನು ಹೋಗಲಾಡಿಸುತ್ತಿದ್ದ ಕ್ರಮ ಇದು. ಈಗಿನ ಕಾರ್ಖಾನೆ ಗಳು, ಸಾರ್ವಜನಿಕ ವಾಹನಗಳು, ಫಲಾಹಾರಮಂದಿರಗಳು ಮಾಡುತ್ತಿರುವ ಸ್ಪೃಶ್ಯರನ್ನೂ ಅಸ್ಪೃಶ್ಯರನ್ನೂ ಸಮಾನ ವೇದಿಕೆಗೆ ತರುವ ಕೆಲಸವನ್ನು ಅಂದಿನ ಕೆಲವು ಕೆಳವರ್ಗದ ದೈವಗಳು ನೆರವೇರಿಸುತ್ತಿದ್ದುವು. ಭೂತಬಲಿಯಿಡುವಾಗ ಪಾಪಿ ಬಂದು ಬೇಡಿದರೂ ಶ್ವಪಚ ಬಂದರೂ ಅವರಿಗೆ ದಾನ ಕೊಡುವುದು, ಊಟಕ್ಕೆ ಹಾಕುವುದು ಪುಣ್ಯಕರವೆಂದು ಬ್ರಾಹ್ಮಣರು ನಂಬಿದ್ದರು.[88]

---

85. ಸಮಯಪರೀಕ್ಷೆ. 4.87 – "ಪೊಲೆಯರ್ ತಮ್ಮಯ ಕೇರಿಗೆ । ಪೊಲೆಯರ್ ಬರೆ ತುಷ್ಟಿ ಮಾಳ್ಪರೆಂದದನಱಿದುಂ । ಕುಲಜರ್ ಸಮಯಿಗಳಂ ಸಾ । ರಲೀಯರಾರ್ಹತರ ತೆಱದೆ ನಿಃಕಪಟತೆಯಿಂ."

86. ಅದೇ, 99.5 – "ಮಾರಬ್ಬೆ ಮಸಣಿವಾಸಿಣಿ । ಬೀರಂ ಮೈಲಾರನೆಂಬವರ ನೋಂಪಿ ಗಳೊಳ್ । ಪಾರುವರಂ ಪೊಲೆಯರ್ ಬಂ। ದೋರಂತಿರೆ ಮುಟ್ಟಲಕ್ಕುಮೆಂಬರ್ ಪಾರ್ವರ್."

(ಸಂಪಾದಕರು 'ಪೋರುವರಂ' ಎಂಬುದನ್ನಿಟ್ಟುಕೊಂಡಿದ್ದರೂ. 'ಪಾರುವರಂ' ಎಂಬುದೇ ಮೂಲಪಾಠವೆಂಬಲ್ಲಿ ಅನುಮಾನವಿಲ್ಲ. 'ಪೋರುವರಂ' ಸ್ಪಷ್ಟವಾಗಿ ಅಪಲಿಖಿತ.)

87. ಅದೇ, 9.92–3.

88. ಅದೇ, 11.94.

ಹೊಲೆಯನು ಚಿತೆಗೆ ಹಾಕಿದ ಮಾಂಸವನ್ನು ಬ್ರಾಹ್ಮಣನು ಯಾವುದೇ ಯೋಚನೆಯಿಲ್ಲದೆ ತೆಗೆದುಕೊಳ್ಳಬಹುದೆಂದೂ, ಹಾಗೆ ತೆಗೆದುಕೊಂಡಿದ್ದರಿಂದ ಬರಬಹುದಾದ ದೋಷನಿವಾರಣೆಗೆ ಮಾಂಸವನ್ನು ಕತ್ತರಿಸಿದ ಹೊಲೆಯನ ಖಡ್ಗಕ್ಕೆ ತನ್ನ ನೊಸಲನ್ನು ಮುಟ್ಟಿಸಿದರೆ ಸಾಕು ಎಂದೂ ಬ್ರಾಹ್ಮಣರು ಹೇಳುತ್ತಿದ್ದರು.[89]

**ವೃತ್ತಿಗಳು :**

ಊರ ಕಸವನ್ನು ಗುಡಿಸುವುದು ಅಸ್ಪೃಶ್ಯರ ಕೆಲಸ. ಊರ ಸತ್ತ ದನವನ್ನು ಹೊತ್ತು ಸಾಗಿಸುವುದು ಅವರ ಕೆಲಸಗಳಲ್ಲೊಂದು.[90] ಅದನ್ನು ಸುಲಿದು ಚರ್ಮ ಹದ ಮಾಡಿ ವಸ್ತುಗಳನ್ನು ತಯಾರಿಸುವ ಚರ್ಮದ ಕೆಲಸವನ್ನು "ಸಮ್ಮಗಾರವೆಸ" ವೆಂದಿದೆ.[91] ಚರ್ಮದ ವಸ್ತುಗಳನ್ನು (ಪಾದರಕ್ಷೆ, ಮಿಣಿ, ಪಟ್ಟಿ, ಚಾಟಿ) ಮಾಡಿ ಕೊಟ್ಟದ್ದಕ್ಕೆ ರೈತರಿಂದ 'ಆಯ' ದೊರಕುತ್ತಿದ್ದಿರಬಹುದು.[92] ಆದರೆ ಈ ಬಗ್ಗೆ ಸಾಹಿತ್ಯಕ ದಾಖಲೆ ಏನೂ ಇಲ್ಲ. ವಾದ್ಯಗಳನ್ನು ನುಡಿಸುವುದು ಅವರ ಕೆಲಸ ಗಳಲ್ಲೊಂದು ("ಪೊಲೆಯರೆ ಬಡಿದ ಪಱೆಯೋಜೆಗಾಡುವ ಪಗರಣೆಗರಂ...)"[93] – ಅದು ಮದುವೆ, ಶವಸಂಸ್ಕಾರ, ದೇವರ ಉತ್ಸವಗಳ ಸಂದರ್ಭಗಳಾಗಬಹುದು. ಅಥವಾ ಹಗರಣದಂತಹ ಮನರಂಜನೆಯ ವೇಷ ಪ್ರದರ್ಶನವಾಗಬಹುದು. ಆಡು,

---

89. ಅದೇ, ಪು. 366 – "ಅಡಗಂ ಪೊಲೆಯಂ ಚಿತೆಗಿತ್ತಡೆ ಕೊಳ್ವುದು ಕುಲಜನಪ್ಪವಂ, ಪೊಲೆಯಂ ಮತ್ತಡಗರಿವಾ ಕತ್ತಿಗೆಗೊಯ್ದಿಡೆ ನೊಸಲು ಶುದ್ಧಮಕ್ಕುಮೆಂಬರ್ ಪಾರ್ವರ್" ('ನೊಸಲಿಂ' ಎಂಬುದನ್ನು 'ನೊಸಲು' ಎಂದು ತಿದ್ದಿಕೊಳ್ಳಲಾಗಿದೆ).

90. 'ಸತ್ತುದನೆಳೆವನೆತ್ತಣ ಹೊಲೆಯ' – ಬಸವಣ್ಣನವರ ಷಟ್‌ಸ್ಥಲರ ವಚನಗಳು, ವಚನ 575.

91. ಸಮಯ ಪರೀಕ್ಷೆ, 6.17. 'ಮಾದೆಗನಂತೆ ಬಾರೆತ್ತುವರ್' ಎಂಬಲ್ಲೂ (ಧರ್ಮಾಮೃತ, 3.72 ವ.) ಮಾದಿಗನ ಕೆಲಸ ಚರ್ಮಕ್ಕೆ ಸಂಬಂಧಿಸಿದ್ದು ಎಂಬುದು ಸ್ಪಷ್ಟವಾಗುತ್ತದೆ.

92. ಆಯ ಮತ್ತು ಆಯಗಾರರ ಬಗ್ಗೆ ನೋಡಿ – ಎಚ್.ಬಿ. ನಾಗೇಶ : 'ಆಯ ಮತ್ತು ಆಯಗಾರರು.' ಗ್ರಾಮವ್ಯಾಸಂಗ, ಧಾರವಾಡ. 1981. ಪು 25–52. "ಕೃಷಿ ಕಾರ್ಯಗಳಿಗೆ ಬೇಕಾದ ಸೇವೆಗಳನ್ನು ಸಲಕರಣೆಗಳನ್ನು ಒದಗಿಸುವ ಜನರಿಗೆ ಧಾನ್ಯರೂಪದಲ್ಲಿ ಸಲಿಸುವ ಸಂಭಾವನೆ 'ಆಯ' ಎನ್ನುತ್ತಾರೆ" (ಅದೇ, ಪು. 26). ಈಗ ಉತ್ತರ ಕರ್ನಾಟಕದಲ್ಲಿ ಸಾಮಾನ್ಯವಾಗಿ ಹಳ್ಳಿಗಳಲ್ಲಿ ಕಾಣಬರುವ ಆಯಗಾರರು ಇವರು: ಹಡಪದ, ಬಡಗಿ, ಕಮ್ಮಾರ, ಅಗಸ, ಬಾರಿಕಾರ (ವಿಷಯ ಸಾರುವವನು), ತಳವಾರ, ಕೊರವ, ಚಲವಾದಿ ಮತ್ತು ಮಾದಿಗ. ಈ ಸಂಖ್ಯೆ ಬೇರೆಯಾಗುವುದುಂಟು. ಇನ್ನು ಕೆಲವೆಡೆ ಕಾಣಬರುವ ಆಯಗಾರರು ಇವರು: ಗೌಡ, ಬಣಗಾರ, ಬಡಗಿ, ಕಮ್ಮಾರ, ಅಕ್ಕಸಾಲೆ, ಕುಂಬಾರ, ಕ್ಷೌರಿಕ, ಬಾರಿಕ, ತಳವಾರ, ಆಗಸ, ಚಲವಾದಿ, ಮತ್ತು ಮಾದಿಗ. (ಅದೇ, ಪು. 38–9).

93. ಧರ್ಮಾಮೃತ, 5.103.

ಹಂದಿಗಳಂತಹ ಪ್ರಾಣಿಗಳನ್ನು ಮಾಂಸಕ್ಕಾಗಿ ಅವರು ಸಾಕುತ್ತಿದ್ದರು. ಸಾಕುತ್ತಿದ್ದ ಆಡಿಗೆ 'ಮಾಣಿಕದೇವಿ' ಎಂಬ ಸೌದ್ಯೋಕ್ತಿ ಶಬ್ದವನ್ನು (euphemism) ಬಳಸುತ್ತಿದ್ದು ದನ್ನು ನಯಸೇನ ಹೇಳುತ್ತಾನೆ.[94] 'ಹೊಲೆಗೇರಿಯ ಹಂದಿ'ಯ ಹೆಸರನ್ನು ಮಡಿವಾಳ ಮಾಚಿದೇವ ಒಂದೆಡೆ ಹೇಳುತ್ತಾನೆ.[95] ಉತ್ತಮ ಜಾತಿಯ ಜನರ ಭೋಗವಸ್ತುಗಳಾಗಿ ಅಸ್ಪೃಶ್ಯ ಹೆಂಗಸರು ಪರಿಗಣಿಸಲ್ಪಟ್ಟಿದ್ದರು ಎಂಬುದಕ್ಕೆ ಸೂಚನೆಗಳಿವೆ.[96] ಡೊಂಬರು ಮಧ್ಯಭಾರತ ಮತ್ತು ಉತ್ತರಭಾರತಗಳಲ್ಲಿ ಅಸ್ಪೃಶ್ಯರೇ. "ಊರಿಂದ ಹೊರಗಣ ಡೊಂಬ" ಎಂಬ ಮಾತನ್ನು ನೋಡಿದರೆ[97] ಹಿಂದಿನ ಕರ್ಣಾಟಕದಲ್ಲೂ ಅವರು ಅಸ್ಪೃಶ್ಯ ವರ್ಗಕ್ಕೇ ಸೇರಿದ್ದರೆಂದು ಊಹಿಸಬೇಕಾಗುತ್ತದೆ. ಡೊಂಬರವನನ್ನು ಜಾತಿ ಕಾರರೆಂದು, ವೇಷ ಕಟ್ಟುವವರೆಂದು ಹೇಳಲಾಗಿದೆ.[98] ಕೊಲ್ಲಟಿಗರೆಂದೂ ಕರೆಯಿಸಿ ಕೊಳ್ಳುತ್ತಿದ್ದ ಇವರು ಗಳೆಯ ಮೇಲೆ ಲಾಗಹಾಗುವುದೇ ಮುಂತಾದ ಕಸರತ್ತುಗಳ ಮೂಲಕ ಜನರನ್ನು ರಂಜಿಸುತ್ತಿದ್ದರು. ಡೊಂಬರು ಕೋಡಗಗಳನ್ನು (=ಕರಿಯ ಮುಖದ ದೊಡ್ಡ ಕೋತಿ) ಆಡಿಸುವುದರ ಮೂಲಕವೂ ಮನರಂಜನೆ ಒದಗಿಸು ತ್ತಿದ್ದರು. 'ಡೊಂಬರ ಕೋಡಗ'ವನ್ನು ಪಂಪ ಉಲ್ಲೇಖಿಸಿದ್ದಾನೆ.[99] "ಕೋಳಿಯಂತೆ ಕೂಗಿ ಡೊಂಬರಂತೆ ಕೂಡಿ ಆಡಿ ಬಾಗಿ ಹಿಂಗದಿದ್ದಡೆ ಈ ಲಾಗವ ನೋಡಿಕೊಳ್ಳಿ", "ಪಂದೆಯ ಮಾತಿನಂತೆ ಡೊಂಬರ ತೋಟಿಯಂತೆ", "ಅಗಣಿತರಹ ಡೊಂಬರು ಗಳು ಬಗೆ ಬಗೆಯಾಟವ ತೋಱಿಯಾಸ್ಥಾನವ ಮಿಗೆ ಮೆಚ್ಚಿಸಿದರು"[100]–ಇವು ಅವರ ಆಟದ ಕೌಶಲವನ್ನು ಹೇಲುವ ಸಾಹಿತ್ಯ ಮೂಲದ ಕೆಲವು ಉಲ್ಲೇಖಗಳು.

ಮರಣ ದಂಡನೆಗೆ ಒಳಗಾದವರನ್ನು ಗಲ್ಲಿಗೇರಿಸುವ ಕೆಲಸವು ಅಸ್ಪೃಶ್ಯನ

---

94. ಅದೇ, 8.175 ವ., ಅಮಂಗಳವಾದುದನ್ನು ಉತ್ತಮ ಶಬ್ದದ ಮೂಲಕ ಹೇಳುವುದೇ ಸೌಮ್ಯೋಕ್ತಿ, euphemism. ನಯಸೇನ ಇನ್ನೂ ಕೆಲವು ಮಂಗಳೋಕ್ತಿಗಳನ್ನು ಹೇಳುತ್ತಾನೆ–ವಾಂತಿಗೆ 'ಮೈಲಾರ', ತೊತ್ತಿಗೆ 'ಸಿರಿಯದೇವಿ', ಎಮ್ಮೆಗೆ 'ಮಹಾದೇವಿ', ಹುರಿಯುವ ಹಂಚಿಗೆ 'ಮಂಗಳ' ಎಂಬುದು ಅವನ ಕಾಲದಲ್ಲಿ ಬಳಕೆಯಲ್ಲಿದ್ದ ಕೆಲವು ಸೌಮ್ಯೋಕ್ತಿಗಳು. ಆಯಾ ವಸ್ತುಗಳ ಸಾಮಾಜಿಕ ಹಿನ್ನೆಲೆ ತಿಳಿಯದೆ ಸೌಮ್ಯೋಕ್ತಿಗಳಿಗೆ ವಿವರಣೆ ಹೇಳುವುದು ಕಷ್ಟ.
95. ಮಡಿವಾಳಯ್ಯನ ವಚನಗಳು, ವಚನ 7.
96. ಅದೇ. ವಚನ 61 – "ಮತ್ತೆ ಮರಳಿ ವ್ಯಸನಕ್ಕೆ ದಾಸಿ ವೇಸಿ ಮಾದಗಿತ್ತಿ ಡೊಂಬತಿ ದೊದಲಾದವರಿಗೆ ಹೇಸದೆ ಆಸೆಯ ಮಾಡುವವರ ಭಕ್ತಿಯ ತೆರನೆಂತೆಂದಡೆ."
97. ಅದೇ, ವಚನ 72.
98. ಅದೇ, ವಚನ 85.
99. ಪಂಪಭಾರತ, 6.72 ವ.
100. ಕನ್ನಡ ನಿಘಂಟು, 4. ಬೆಂಗಳೂರು. 1979, ಪು. 4093.

ದಾಗುತ್ತಿತ್ತು. ಕತೆಗಳಲ್ಲಿ ಬರುವಂತೆ, ಕೂಸನ್ನೋ ಅಥವಾ ಯಾರನ್ನೋ ಕೊಲ್ಲಲು ನೇಮಿಸುತ್ತಿದ್ದುದು 'ಮಾದಿಗ' ಅಥವಾ ಹೊಲೆಯನನ್ನು. ಅಭಿನವದಶಕುಮಾರ ಚರಿತೆಯಲ್ಲಿ (ಸಂ: ಎಸ್.ಜಿ. ನರಸಿಂಹಾಚಾರ್ ಮತ್ತು ಎಂ.ಎ. ರಾಮಾನುಜ ಅಯ್ಯಂಗಾರ್. ಮೈಸೂರು 1902) ವಧೆಗೆ ನೇಮಕವಾಗುವ ವ್ಯಕ್ತಿ ಒಬ್ಬ ಮಾದಿಗ (9.47–9). ಧರ್ಮಾಮೃತದಲ್ಲಿ ಬರುವ ಕತೆಯೊಂದರಲ್ಲಿ, ದೊರೆ ಕೂಸನ್ನು ಕೊಲ್ಲಲು ನೇಮಿಸಿದ್ದು 'ಮಾದಿಗ'ನನ್ನು. ಅವನು ಅದನ್ನು ಕಾಡಿಗೆ ಒಯ್ದು ಕೊಲ್ಲುವಷ್ಟರಲ್ಲಿ ಶಿಶುವಿನ ಮುದ್ದಾಟ ಆ 'ದುರಾತ್ಮ'ನಲ್ಲೂ ಕರುಣೆ ಹುಟ್ಟಿಸಿತು. ಕೂಸನ್ನು ಹೊಳೆಯ ಮರಳಲ್ಲಿ ಬಿಟ್ಟುಹೋದ.[101] ಸ್ಮಶಾನದಲ್ಲಿ ಗುಂಡಿ ತೋಡುವ ಕೆಲಸವೂ ಅವನದೇ. ಸ್ಮಶಾನದ ಕೆಲವು ಹಕ್ಕುಗಳನ್ನು ಹರಿಶ್ಚಂದ್ರ ಕಾವ್ಯವು ಹೇಳಿದೆ. ಹೆಣವನ್ನು ಹೂಳಲೋ ಸುಡಲೋ ಬರುವ ವ್ಯಕ್ತಿಗಳು ಹೊಲೆಯನಿಂದ ಭೂಮಿ ಯನ್ನು ಪಡೆಯಲು ಕೊಡುವ ಹಣವೇ 'ನೆಲದೆರಿಗೆಯ ಹಾಗ' (ಇದನ್ನು ಈಚಿನ ಹರಿಶ್ಚಂದ್ರ ಸಾಂಗತ್ಯ, ತುರಂಗ ಭಾರತಗಳು 'ನೆಲಹಾಗ' ವೆಂದು ಕರೆದಿವೆ. 'ನೆಲಹಾಗ' ಈಗಲೂ ಬಳಕೆಯಲ್ಲಿರುವ ಪದ; ನೆಲಹಾಗ ಕೊಡುವ ಪದ್ಧತಿಯು ಈಗಲೂ ಜೀವಂತವಾಗಿದೆ). ಆ ಶುಲ್ಕವನ್ನು ಕೊಡದೆ ಸ್ಮಶಾನದಲ್ಲಿ ಹೂಳುವ ಸುಡುವ ಹಕ್ಕು ಯಾರಿಗೂ ಇಲ್ಲ. 'ತಲೆಯಕ್ಕಿ', ಹೆಣದ ಬಟ್ಟೆ ಸ್ಮಶಾನದ ಹೊಲೆಯ ನಿಗೇ ಸೇರುತ್ತವೆ (ಹರಿಶ್ಚಂದ್ರ ಕಾವ್ಯ, 11.36).

### ತೊತ್ತುಗಳು (Slaves)[102] :

ಮಧ್ಯಕಾಲೀನ ಕರ್ನಾಟಕದಲ್ಲಿ 'ತೊತ್ತು'ಗಳ ಮಾರಾಟವು ನಡೆಯುತ್ತಿದ್ದಿ ತೆಂಬುದಕ್ಕೆ ಶಾಸನಾಧಾರವಿದೆ[103] ಯೆಂಬುದನ್ನು ಹಿಂದೆ ನೋಡಿದ್ದೇವೆ. ಬಾಲಚಂದ್ರ ದೇವನ ತತ್ವರತ್ನ ಪ್ರದೀಪಿಕೆಯಲ್ಲಿ ಸ್ಪಷ್ಟವಾಗಿ ತೊತ್ತುಗಳ ಮಾರಾಟವು ನಡೆಯುತ್ತಿದ್ದು ದನ್ನು ಹೇಳಿದೆ – "ಅಲ್ಲಿ ತೊಳ್ತಿರುಮಂ ಬಂಟರುಮಂ ಈ ದೇಶದಿಂದೊಯ್ದು ಮತ್ತೊಂದು ದೇಶದೊಳೆ ಮಾರಿದೊಡೆ ಪಿರಿದರ್ಥಲಾಭಮಕ್ಕುಮೆಂದು ನುಡಿವುದು ತಾಂ ಕ್ಲೇಶ ವಣಿಜ್ಯೆ."[104] ಹರಿಶ್ಚಂದ್ರ ಕಾವ್ಯದಲ್ಲಿ ಹರಿಶ್ಚಂದ್ರ ತನ್ನ ಹೆಂಡತಿ ಮಗನನ್ನು ಮಾರಾಟಕ್ಕೆ ಇಟ್ಟಾಗ ತಲೆಗೆ ಹುಲ್ಲು ಕಟ್ಟಿದ್ದುದನ್ನು ಹೇಳಿದೆ ("ಪೊಡವಿಪತಿ ಸತಿಸುತರ ತಲೆಗಳಲಿ ಹುಲುಗಟ್ಟಿ..."11.5). ಬಸವಣ್ಣ "ಕೈಯ ಬೋಹರಿಗೆ, ಮಂಡೆಯ ಮೇಲೆ

---

101. ಧರ್ಮಾಮೃತ, 10.140.

102. "ತೊಟ್ತೆಂದು ದಾಸನುಂ ದಾಸಿಯುಮಕ್ಕುಂ" (ಶಬ್ದಮಣೀದರ್ಪಣ).

103. "ಕೊತ್ತಂಗೆಱೆಯ ಪಿರಿಯೂರ ಒಳವಾೞು ಹೊಱವಾೞು ತೋಟ, ಎಮ್ಮೆ, ಪಶು, ತೊತ್ತು, ಕಟ್ಟಿನ ಬಂಡಿ..." (Ep. Carn. XII. Rice Edition. pp. 86-7).

104. ತತ್ವರತ್ನ ಪದೀಪಿಕೆ. ಸಂ: ಶಾಂತಿರಾಜಶಾಸ್ತ್ರೀ. ಮೈಸೂರು, 1955. ಪು. 276–7.

ಸಿಂಬಿ, ಸಿಂಬಕನ ಮನೆಯ ಮಗ ನಾನಯ್ಯ" (ವಚನ 354) ಎಂದು ಹೇಳುವಲ್ಲಿ, 'ಸಿಂಬಿ' ಪದ ಹುಲ್ಲಿನ ಸರವಿಯನ್ನು ಹೇಳುವಂತೆ ತೋರುತ್ತದೆ. 'ದಾಸೀ ವಿಕ್ರಯಪತ್ರ' ವೊಂದರಲ್ಲಿ ತಲೆಯ ಮೇಲೆ ಹುಲ್ಲು ಕಟ್ಟಿಕೊಂಡಿದ್ದ ದಾಸಿಯರ ಬಹಿರಂಗ ಮಾರಾಟದ ವಿಷಯವಿದೆ–ಇದು ಉತ್ತರಭಾರತದ ದಾಖಲೆ. ಗುಲಾಮರು ಹುಲ್ಲು ತಿನ್ನುವ ಪಶುಗಳಂತೆ ಮಾರಾಟಾರ್ಹರು ಎಂಬುದು ಇಲ್ಲಿನ ಧ್ವನಿ ("ಕತ್ತಾಲ ದಾರಿ ದೂರ" : ಸಂ. ಕೃಷ್ಣಮೂರ್ತಿ ಹನೂರು. ಬೆಂಗಳೂರು. 1981. ಪು. 5–6) ಈ ತೊತ್ತುಗಳು ಯಾವ ಜಾತಿಯವರು?

ಕರ್ನಾಟಕದ ಯಾವ ಶಾಸನದಲ್ಲಾಗಲಿ ಸಾಹಿತ್ಯ ಕೃತಿಯಲ್ಲಾಗಲಿ ಹೊಲೆಯರು ಭೂಮಿಗೆ ಒಡೆಯರಾಗಿದ್ದರೆಂಬುದಕ್ಕೆ ಯಾವುದೇ ಸೂಚನೆಯೂ ಇಲ್ಲ. ವೃತ್ತಿಯಾಗಿ ವ್ಯವಸಾಯ ಅವರಿಗೆ ನಿಷಿದ್ಧ. ಆ ಕಾರಣದಿಂದಲೇ ಅವರು ಹಸು, ಎತ್ತುಗಳನ್ನು ಸಾಕುತ್ತಿದ್ದರೆಂಬುದಕ್ಕೂ ಸೂಚನೆಗಳು ಇಲ್ಲ. ಅವರು ಎಂದಿನಿಂದಲೂ ಹೊಲಗಳಲ್ಲಿ ಕೆಲಸ ಮಾಡುವ ಜೀತದಾಳುಗಳು. ಗೌಡರ ಅಥವಾ ಹಳ್ಳಿಯ ಪ್ರಬಲ ರೈತಾಪಿ ಮನೆಗಳಿಗೆ ಒಂದೊಂದು ಹೊಲೆಯರ ಕುಟುಂಬ ಸೇರುವೆಯಾಗಿದ್ದು ರೈತನ ಯಾವುದೇ ಕೆಲಸವನ್ನು ಅವನು ಮಾಡಿಕೊಡಬೇಕು. ಅವನನ್ನು 'ಆಳ್ಮಗ' ಎಂದೂ ಕೆಲವೆಡೆ ಕರೆಯುವುದುಂಟು. ಸಕಲೇಶಪುರ ಪ್ರದೇಶದಲ್ಲಿರುವ 'ಗಡ್ಡ ಮಂಡೆ ಪದ್ಧತಿ'ಯ ಸ್ವರೂಪವನ್ನು[105] ಇಲ್ಲಿ ತಿಳಿಯುವುದು ಪ್ರಸ್ತುತವಾಗಿದೆ. ಊರಿನ ಗೌಡನ ಕೆಲಸಕ್ಕೆ ಮೀಸಲಾದ 'ಹುಟ್ಟಾಳು ಹೊಲೆಯರು' ಇರುತ್ತಾರೆ. "ಹುಟ್ಟಿನಿಂದಲೇ ಅವರು ಗೌಡನ ಮನೆಯ ಆಳಾಗುತ್ತಾರೆ."[106] ಮದುವೆ, ಸಾವು, ಗೃಹಪ್ರವೇಶ ಇತ್ಯಾದಿಗಳಲ್ಲಿ ಹುಟ್ಟಾಳುವಿನ ಪಾತ್ರ ಗಣನೀಯವಾದುದು. ಗೃಹಪ್ರವೇಶದ ದಿನ ಬಲಿ ತೆಗೆಯಲು ಹಾಕಿದ ಅನ್ನವನ್ನು ಹುಟ್ಟಾಳು ಹೊಲೆಯನು ಗೌಡನ ಯಾವ ಗದ್ದೆಗೆ ಹಾಕುತ್ತಾನೋ ಅದು ಹುಟ್ಟಾಳು ಹೊಲೆಯನ ಸಂತತಿಯ ಆಸ್ತಿಯಾಗುತ್ತದೆ. ಗೌಡ ಸತ್ತಾಗ ಅವನ ಸ್ವಂತ ಮಗನಿಗಿಂತ ಮಿಗಿಲಾದ ಪಾತ್ರ ಹುಟ್ಟಾಳಿನದು. ಆ ದಿನ ಅವನು ಗಡ್ಡ ಮಂಡೆಗಳನ್ನು ನುಣ್ಣಗೆ ಬೋಳಿಸಿಕೊಳ್ಳುತ್ತಾನೆ. (ಆ ಕಾರಣ ಅವರನ್ನು 'ಗಡ್ಡ ಮಂಡೆ ಒಕ್ಕಲಿನವರು' ಅನ್ನುತ್ತಾರೆ.) ಹೀಗೆ ಗಡ್ಡ ಮಂಡೆ ತೆಗೆಸಿಕೊಂಡಾದ ಮೇಲೆ ಸ್ನಾನ ಮಾಡಿ ತಲೆಗೆ ಎಣ್ಣೆ ಹಚ್ಚಿಕೊಂಡು ಗೌಡರ ಮನೆಯವರು ಕೊಟ್ಟ ಹೊಸ ಬಟ್ಟೆ ಉಟ್ಟು ಶವದ ಹತ್ತಿರ ಕುಳಿತಿರುತ್ತಾನೆ. ಶವದ ಬಾಯಿಗೆ ಇಟ್ಟ ತಾಂಬೂಲವನ್ನು ಗಡ್ಡ ಮಂಡೆ ಹೊಲೆಯನಿಗೆ ಕೊಟ್ಟಾಗ ಅವನು ಆಗಿದು ಅದನ್ನು ಗೌಡನ ಯಾವ ಗದ್ದೆಗೆ

105. ವಿವರಗಳಿಗೆ, ನೋಡಿ – ಮ. ರಾಜಶೇಖರ ನಾರ್ವೆ : 'ಗಡ್ಡ ಮಂಡೆ ಪದ್ಧತಿ', ಸಾಧನೆ, 9.1, ಪು. 152–7.

106. ಇವರು "ತರಗು ಗುಡ್ಸಿ ಮನೆ ಕಟ್ಟಿದವರು" ಎಂದು ಜನ ಹೇಳುತ್ತಾರೆ. ಎಂದರೆ ಅವರೇ ಆ ಊರಿನ ಮೊದಲಿಗರು.

ಉಗಿಯುತ್ತಾನೋ ಅದು ಅವನಿಗೆ ಸೇರುತ್ತದೆ. ಹನ್ನೊಂದನೆಯ ದಿನದ ತಿಥಿಗೆ ಅವನು ಬಂದಾಗ ಅವನಿಗೆ ಗೌಡ ಬಳಸುತ್ತಿದ್ದ ಹಾಸಿಗೆ, ಹೊದಿಕೆ, ತಟ್ಟೆ, ಲೋಟ, ಬಟ್ಟೆ ಕೊಟ್ಟು ಕಳಿಸುತ್ತಾರೆ.

ಈ ಸಂಪ್ರದಾಯವನ್ನು ಸರಿಯಾದ ವಿವರಗಳೊಡನೆ ದಾಖಲು ಮಾಡಿ ಎಚ್ಚರಿಕೆಯಿಂದ ವ್ಯಾಖ್ಯಾನಿಸಬೇಕಾಗಿದೆ. ಹುಟ್ಟಾಳು ಹೊಲೆಯನ ಮತ್ತು ಗೌಡನ ಸಂಬಂಧ ಹಿಂದಿನ ವೇಳೆವಾಳಿ ಮತ್ತು ರಾಜನ ಸಂಬಂಧವನ್ನು ನೆನಪಿಗೆ ತರುತ್ತದೆ. ಒಟ್ಟು ಗಡ್ಡ ಮಂಡೆ ಶಾಸ್ತ್ರ, ಶವದ ತಾಂಬೂಲವನ್ನು ತಾನೂ ಬಾಯಲ್ಲಿ ತೆಗೆದುಕೊಳ್ಳುವುದು ಇವೆಲ್ಲ ಗೌಡನ ಮತ್ತು ಅವನ ಹುಟ್ಟಾಳುಗಳ ಸಾಮಾಜಿಕ ಸಂಬಂಧವನ್ನು ದೃಢಪಡಿಸುತ್ತವೆ. ಆ ಸಂಬಂಧ ಗಾಢವಾದಷ್ಟು ಆರ್ಥಿಕ ಲಾಭಗಳೂ ಉಂಟು, ಗೌಡನ ವಂಶಕ್ಕೆ. ಹುಟ್ಟಾಳುವು ಗೌಡನಿಗೆ ಆಪ್ತನಾದಷ್ಟು ಅವನು ಆ ವಂಶವನ್ನು ತ್ಯಜಿಸಿ ಬೇರೊಂದೆಡೆ ಹೋಗುವುದಿಲ್ಲ. ಗೌಡನ ವಂಶಕ್ಕೆ ಶಾಶ್ವತವಾದ, ವಿಧೇಯರಾದ ಆಳುಗಳು ದೊರಕುತ್ತಲೇ ಹೋಗುತ್ತಾರೆ.

ಗಡ್ಡ ಮಂಡೆ ತೆಗೆಯುವ ಶಾಸ್ತ್ರವು ಸಹಜವಾಗಿಯೇ ಬಸವಣ್ಣನ ಕೆಲವು ವಚನಗಳನ್ನು ಜ್ಞಾಪಕಕ್ಕೆ ತರುತ್ತದೆ. ಗಂಡುದೊತ್ತಾಗುವವನು ಮಂಡೆಯನ್ನು ಬೋಳಿಸಿಕೊಳ್ಳುತ್ತಿದ್ದ ಸಂಗತಿ ಅಲ್ಲಿ ಉಕ್ತವಾಗಿದೆ.[107] ತೊತ್ತಾಗುವುದರ ದೊದಲ ಚಿಹ್ನೆ ಅವನು ತನ್ನ ಮಂಡೆಯನ್ನು ಬೋಳಿಸಿಕೊಳ್ಳುವುದು. ಬಸವಣ್ಣನಲ್ಲಿ ಬರುವ 'ತೊತ್ತು' 'ಮನೆಯ ಮಗ' ಎಂಬ ಮಾತುಗಳು ಸಮಾನಾರ್ಥಕವೆಂಬಂತೆ ತೋರುತ್ತವೆ. ತೊತ್ತಿನಲ್ಲಿ ಬಳಿದೊತ್ತು, ಬಳಗದೊತ್ತು, ವಂಶದೊತ್ತು ಎಂಬ ಭೇದಗಳನ್ನು ಹೇಳುತ್ತಾನೆ.[108] ತನ್ನ ಒಡೆಯನ ಒಡೆತನಕ್ಕೆ ಎಂದೂ ನಾಶವಿಲ್ಲ, ಆ ಕಾರಣ ತನ್ನ ತೊತ್ತುತನಕ್ಕೂ ನಾಶವಿಲ್ಲವೆಂದು ಹೇಳುವಲ್ಲಿ, ಒಡೆಯ ಮತ್ತು ತೊತ್ತುಗಳ ಸಂಬಂಧ ಶಾಶ್ವತವಾದುದು ಎಂಬುದು ಸೂಚಿತವಾಗುತ್ತದೆ. ತೊತ್ತು ಎಂಬುದು ಇಲ್ಲಿ ಗುಲಾಮ (Slave) ಎಂಬರ್ಥದಲ್ಲೇ ಬಳಕೆಯಾಗಿರುವುದು. 'ಮನೆಯ ಮಗ' ಎಂಬುದೂ ಕೂಡ ತೊತ್ತನ್ನೇ ಹೇಳುವಂತೆ ತೋರುತ್ತದೆ.

---

107. ಬಸವಣ್ಣನವರ ಷಟ್‌ಸ್ಥಲದ ವಚನಗಳು. 356 – "ಆನು ನಿಮ್ಮ ಶರಣರಿಗೆ ಮಂಡೆಯ ಬೋಳಿಸಿಕೊಂಡು ಗಂಡುಮೊತ್ತಾದೆನಯ್ಯಾ, ಕೂಡಲಸಂಗಮದೇವಾ ನಿಮ್ಮ ಶರಣರಿಗೆ"; ವಚನ 496 – "ಮಂಡೆಯ ಬೋಳಿಸಿಕೊಂಡು ಗಂಡುಮೊತ್ತುವೊಕ್ಕೆನಯ್ಯ."

108. ಅದೇ. ವಚನ 353 – "ಅಯ್ಯಾ ನಿಮ್ಮ ವಂಶಾವಳಿಯಲು ಒಬ್ಬ ತೊತ್ತಿನ ಮಗ ಹುಟ್ಟಿದಾತನ ತೊತ್ತಿನ ಮಗ ನಾನಯ್ಯಾ, ಬಳಿದೊತ್ತು ವಂಶಮೊತ್ತು ನಾನಯ್ಯಾ. ಕೂಡಲ ಸಂಗಮದೇವಾ ನಿಮ್ಮ ಒಡೆತನಕ್ಕೆ ಕೇಡಿಲ್ಲವಾಗಿ ನನ್ನ ತೊತ್ತುತನಕ್ಕೆ ಕೇಡಿಲ್ಲಾ."

**"ತನು ಮನ ಧನವ ನಿವೇದಿಸಿದವರ ಮನೆಯ ಮಗ ನಾನಯ್ಯಾ"**
**(ಬಸವಣ್ಣ. ವಚನ 315)**

**"ನಿಮ್ಮ ಶರಣರ ಮನೆಯ ಮಗ ನಾನಯ್ಯ" (ವಚನ 335)**

**"ಕಯ್ಯ ಬೋಹರಿಗೆ ಮಂಡೆಯ ಮೇಲೆ ಸಿಂಬಿ,**
**ಸಿಂಬಕನ ಮನೆಯ ಮಗ ನಾನಯ್ಯ" (ವಚನ (354)**

**"ನಿಮ್ಮ ಶರಣರ ಮನೆಯ ಮಗ ನಾನಯ್ಯ" (ವಚನ (357)**

**"ದೇವಾ, ಮಾವಾರ ಚನ್ನಯ್ಯನ ಮನೆಯ ಮಗ ನಾನಯ್ಯ"**
**(ವಚನ 716)**

**"ದೇವಾ, ನಿಮ್ಮ ಮನೆಯ ಮಗನೆಂದೆನಿಸಯ್ಯಾ" (ವಚನ 62)**[109]

ಬಸವಣ್ಣ ಭಕ್ತಿಯ ಪರಿಸರದಲ್ಲಿ 'ಮನೆಯ ಮಗ' ಪದವನ್ನು ಬಳಸಿದ್ದರೂ ಸಾಮಾಜಿಕವಾಗಿ, ಗೌಡರ ಮನೆಗಳಿಗೆ ಅಂಟಿಕೊಂಡಿರುವ ಹುಟ್ಟಾಳುವಿನಂತಹ ಒಬ್ಬ ವ್ಯಕ್ತಿಯನ್ನು ಅದು ಹೇಳುವಂತೆ ತೋರುತ್ತದೆ. (ಇಂಥವರನ್ನು ದಾವಣಗೆರೆ ಪ್ರದೇಶದಲ್ಲಿ 'ಆಳು ಮಗ', 'ಹೊಲೆಮಗ', 'ಮನೆಮಾದಿಗ' ಎನ್ನುತ್ತಾರೆ). ಹುಟ್ಟಾಳು ಮತ್ತು ಮನೆಮಗ ಇಬ್ಬರ ನಿಷ್ಠೆ ಪ್ರಶ್ನಾತೀತ, ಯಜಮಾನನೊಡನೆ ಅವನ ಸಂಬಂಧ ಶಾಶ್ವತ. ಒಡೆಯನನ್ನು ಕಣ್ಣು ಮುಚ್ಚಿ ವಿಧೇಯವಾಗಿ ಅನುಸರಿಸುವುದಷ್ಟೇ ಅವರ ಕೆಲಸ. ಅಂದಿನ ಸಮಾಜದಲ್ಲಿ 'ಮನೆಯ ಮಗ' ಎಂಬುದು ಹೊಲೆಯರ ಜೀತದಾಳನ್ನು ಸೂಚಿಸುವಂತೆ ತೋರುತ್ತದೆ.

"ಮನೆ ಮಗತ್ತಿನ್" ಎಂಬ ಪದವು ಎರಡು ಶಾಸನಗಳಲ್ಲಿ ದೊರಕುತ್ತದೆ.[110] ತಿರುಮಕೂಡಲು ನರಸೀಪುರ ತಾಲೂಕಿನ ದೊಡ್ಡ ಹುಂಡಿ ಶಾಸನದಲ್ಲಿನ 'ಮನೆ ಮಗತ್ತಿನ್' ಅಗರಯ್ಯ ತನ್ನ ಯಜಮಾನ ಸತ್ತಾಗ ಅವನ ಜೊತೆ ಆತ್ಮ ಬಲಿಯಾದ.

---

109. ಎಸ್.ಆರ್. ಗುಂಜಾಳ : ಬಸವಣ್ಣನವರ ಪದಪ್ರಯೋಗ ಕೋಶ. ಧಾರವಾಡ, 1973. ಪು. 794–8.

110. Ep. Carn. V (Mys. Ed.) T. Narasipura. , 10th Cent, ದೊಡ್ಡಹುಂಡಿ ಶಾಸನ – "ಸ್ವಸ್ತಿ ನೀತಿಮಾರ್ಗ ಕೊಂಗುಣಿವರ್ಮಧರ್ಮರಾಜಾಧಿರಾಜ ಶ್ರೀಮತ್ ಪೆರ್ಮಾನಡಿಗಳ್ ಸ್ವರ್ಗಮೇಱಿದ[ಂ] ಏಱಿದೊಡೆ ಪೆರ್ಮಾನಡಿಗಳ ಮನೆಮಗತ್ತಿನ್ ಅಗರಯ್ಯಂ ನೀತಿಮಾರ್ಗ ಪೆರ್ಮನಡಿಗೆ ಕಿೞ್ಗುಣೆ. ಯಾದಂ ಪೆರ್ಮನಡಿಗಳ ಶುಪುತ್ರ ಸತ್ಯವಾಖ್ಯ ಪೆರ್ಮ್ಮಾನಡಿಗಳ್ಗುಟ್ಟಿ[ಪಾ]ಡಿಯಂ[ಂ] ಕಲ್ನಾಡು [ಕೊ]ಟ್ಟದು..."; ತುಳುನಾಡಿನ ಶಾಸನಗಳು, ಸಂಪುಟ 1, ಸಂ. ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ, ಉಡುಪಿ, 1978– "ಸ್ವಸ್ತಿ ಶ್ರೀ ॥ ಸಿಂಗಪುಲಿ ಸಂಗ್ರಾಮ ಕೇಸರಿ ಅಂಗಜನವೆಸಕ್ಕೆ ತಿಂಗಳ ಕೊಡಪತಾಕೆ ಸ್ವೇತವಾಹನನ್ ಒದಯಪುರಮಾನ್ ಎಱಿದು ಪೊಗುವಲ್ಲಿ ಅಳುವರಸರಾ ಮನೆಮಗ–ತಿನ್ ಸಿಂಗಪುಲಿ ಎಱಿದು ಸ್ವರ್ಗಾಲಯಕ್ಕೇರಿದಾನ್, ಆತನ ತಂಗೆ ಸರ್ವಪೊಡಿ ನಿಱಿಸಿದಾ ಕಲ್ಲು" (15ನೇ ಶಾಸನ. ಕಾಲ 9ನೇ ಶ.).

ದಕ್ಷಿಣ ಕನ್ನಡ ಜಿಲ್ಲೆಯ ಉದಯಾವರದ ಶಾಸನದ 'ಮನೆ ಮಗತ್ತಿನ್' ಸಿಂಗಪುಲಿ ತನ್ನ ಯಜಮಾನನ ಪರವಾಗಿ ಹೋರಾಡಿ ಮಡಿದ. ಒಂದು ಆತ್ಮಬಲಿ, ಇನ್ನೊಂದು ವೀರಮರಣ. ನಾನು 'ಮನೆಮಗ' ಎಂಬುದು ಸಂಸ್ಕೃತದ 'ಕುಲಪುತ್ರ'ಕ್ಕೆ ಸಮಾನ ವೆಂದು ಭಾವಿಸಿ ಅದು ಒಡೆಯನಿಗೆ ಆತ್ಮಬಲಿ ಮಾಡಿಕೊಂಡ ವೇಳೆವಾಳಿ ವ್ಯಕ್ತಿ ಯನ್ನು ಹೇಳುತ್ತದೆಯೆಂದು ಹಿಂದೆ ಪ್ರತಿಪಾದಿಸಿದ್ದು, ಅದನ್ನು ಈಗ ಎಚ್ಚರಿಕೆಯಿಂದ ಮತ್ತೆ ಪರಿಶೀಲಿಸುವ ಅಗತ್ಯವಿದೆ. ಉದಯಾವರ ಶಾಸನದ 'ಮನೆ ಮಗ' (ಮನೆ ಮಗತ್ತಿನ್' 'ಮನೆಮಗನ್)[111] ಎಂಬುದು ಅದು ವೇಳೆವಾಳಿಯೇ ಸರಿ ಎಂದು ವಾದಿಸಲು ಪ್ರಬಲ ಅಡ್ಡಿ. 'ಮನೆವೆಗ್ಗಡೆ'[112] 'ಮನೆದೊತ್ತು'[113] ಮಾತುಗಳನ್ನು ನೋಡಿದರೆ, 'ಮನೆ'ಗೆ ತೀರ ಹತ್ತಿರಕ್ಕೆ ಸಂಬಂಧಿಸಿರುವ ವ್ಯಕ್ತಿ 'ಮನೆಮಗ' ಎಂಬುದು ಸ್ಪಷ್ಟ. ಅದು ಸತ್ತ ತನ್ನ ಒಡೆಯನೊಡನೆ ಆತ್ಮಬಲಿ ಮಾಡಿಕೊಳ್ಳುವ ವ್ಯಕ್ತಿಯನ್ನು ಸೂಚಿಸುತ್ತದೆಯೆಂಬ ವಾದವನ್ನು ಕೈಬಿಡಬಹುದು. 'ಪ್ರೇಮಾಲಯ ಸುತನ್' ಎಂಬ ಹಲ್ಮಿಡಿ ಶಾಸನದ ಉಕ್ತಿಯು 'ಮನೆಮಗ' ಎಂಬುದರ ಸಂಸ್ಕೃತಾನುವಾದವೆಂಬ ಡಾ. ಕಲ್ಬುರ್ಗಿಯವರ ವಾದವನ್ನು ಒಪ್ಪಿಕೊಂಡರೆ,[114] ಮತ್ತು ಪ್ರೇಮಾಲಯಸುತನಾದ ವಿಜಾಅರಸನು ಹೋರಾಡಿ ಗೆದ್ದು ಬಂದ ವ್ಯಕ್ತಿಯೆಂಬುದನ್ನು ಗುರುತಿಸಿದರೆ, ಮನೆಮಗ ಎಂಬುದು ವೇಳೆವಾಳಿಯನ್ನು ಹೇಳುತ್ತದೆ ಎಂಬ ವಾದಕ್ಕೆ ಇದೊಂದು ಪ್ರತಿಬಂಧಕ ಸಾಕ್ಷ್ಯವಾಗುತ್ತದೆ.

ಬಸವಣ್ಣನ ವಚನಗಳಲ್ಲಿ (ಹಿಂದೆ ನೋಡಿ), ದೇವರಿಗೆ 'ನಿಮ್ಮ ಮನೆಯ ಮಗನೆಂದೆನಿಸಯ್ಯಾ', 'ಸಿಂಬಕನ ಮನೆ ಮಗ ನಾನಯ್ಯಾ' ಎಂಬ ಮಾತುಗಳೂ ಕೂಡ ಅದು ವೇಳೆವಾಳಿಯಲ್ಲವೆಂಬುದನ್ನು ದೃಢಪಡಿಸುತ್ತವೆ. ಇಷ್ಟು ಮಾತುಗಳ ಸಾರಾಂಶವೆಂದರೆ, 'ಮನೆಮಗ' ಎಂಬುದು 'ಗುಲಾಮ' (Slave) ಎಂಬರ್ಥವನ್ನು ಹೇಳುತ್ತದೆ. (ಶಾಸನಗಳಲ್ಲಿ 'Slave' ಆಗಬಹುದು; ಅಥವಾ ಗುಲಾಮನಷ್ಟು

---

111. "–ತ್ತನೆ" ಪ್ರತ್ಯಯವು ಪುಲ್ಲಿಂಗವಾಚಕ ಪ್ರತ್ಯಯವಾಗಿ ಹಳೆಯ ತಮಿಳಲ್ಲಿ ಕಾಣಿಸಿ ಕ್ಕೊಳ್ಳುತ್ತದೆ. ಇದೇ ಹಳಗನ್ನಡದ '–ತ್ತಿನ್' ಅಥವಾ '–ತಿನ್' ಎಂಬಲ್ಲಿ ಅನುಮಾನ ವಿಲ್ಲ.

112. 'ಮನೆವೆಗ್ಗಡೆ' ಎಂಬುದು ಸಂಸ್ಕೃತದ 'ಅಂತಃಪುರಾಧ್ಯಕ್ಷ'ಕ್ಕೆ ಸಮಾನ. ರಾಜರಿಗೆ ಆತ್ಮೀಯನಾಗಿದ್ದು, ಅವರ ಅರಮನೆಯ ಒಳಗಿನ ಆಗುಹೋಗುಗಳನ್ನು ನೋಡಿ ಕೊಳ್ಳುವ ಅಧಿಕಾರಿ ಈತ.

113. ಬಸಪುರಾಣ, 55.33–"ನಿಮ್ಮ ಮನೆದೊತ್ತಿನ ಮಗಳು ಕೇಳೆಮ್ಮುವಂ ಕೀಳ್ಮಾಡಿದಳಿವಳ ಹಮ್ಮ ನೋಡಿದರೆ...". ಹಾವಿನಹಾಳ ಕಲ್ಲಯ್ಯನ ಮನೆಯ 'ದಾಸಿ' ಇವಳು.

114. ಎಂ.ಎಂ. ಕಲಬುರ್ಗಿ : 'ಹಲ್ಮಿಡಿ ಶಾಸನದ ಪ್ರೇಮಾಲಯಸುತನ್.' ಅಧ್ಯಯನ. 1980. ಪು. 362.

ವಿಧೇಯದ ವ್ಯಕ್ತಿ ಎಂಬರ್ಥ ಆಗಬಹುದು). ಹಳ್ಳಿಗಳಲ್ಲಿ 'ಆಳು' ಎಂಬುದು ಮನೆಯಲ್ಲೇ ಮನೆಯ ಭಾಗವಾಗಿ, ಜೀವನದುದ್ದಕ್ಕೂ ಆಳಾಗಿ ದುಡಿಯುವ ಜೀತದಾಳನ್ನು (bonded labourer) ಹೇಳುತ್ತದೆ. ಈ ಜೀತದಾಳುಗಳು ಈಗ ಕೆಳಗಿನ ಯಾವುದೇ ಜಾತಿಯವರಾಗಿರಬಹುದು. ಹೊಲೆಯನಿಗೆ 'ಹೊಲೆಮಗ', 'ಮನೆಮಾದಿಗ' ಎಂಬ ಮಾತೂ ಇರುವುದನ್ನು ನೋಡಿದರೆ, ಈಚಿನವರೆಗೆ ಮಲೆನಾಡಿನಲ್ಲಿ ಬಿಟ್ಟಿ ಕೆಲಸ ಮಾಡುತ್ತಿದ್ದ ಜೀತದಾಳುಗಳು ಬಹುತೇಕ ಹೊಲೆಯರೇ ಆಗಿದ್ದುದನ್ನು ಗಮನಿಸಿದರೆ, ಮಧ್ಯಯುಗದ 'ಮನೆಮಗ' ಅಥವಾ 'ತೊತ್ತು'ಗಳು ಅಸ್ಪೃಶ್ಯ ಜಾತಿಯವರಾಗಿದ್ದಿರಬೇಕೆಂದು ಊಹಿಸಲು ಸಾಧ್ಯವಾಗುತ್ತದೆ. ಶಾಸನಗಳಲ್ಲಿ ಬರುವ 'ಮನೆಮಗ' ವಿಶೇಷಣದ ವ್ಯಕ್ತಿಗಳು ಉನ್ನತಸ್ಥಾನದವರಾಗಿರುವುದರಿಂದ (ಉದಾ: ವಿಜಾಅರಸ), ಅವರು ತಮ್ಮ ರಾಜರ ಮನೆಯಲ್ಲೇ ಇದ್ದುಕೊಂಡು 'ಮನೆಮಕ್ಕಳ' ರೀತಿಯಲ್ಲಿ ನಡೆದುಕೊಳ್ಳುತ್ತಿದ್ದರು ಎಂದೂ ಅವರನ್ನು ಅಸ್ಪೃಶ್ಯರೆಂದು ಭಾವಿಸಲು ಎಳ್ಳಷ್ಟೂ ಅವಕಾಶವಿಲ್ಲವೆಂದೂ ಇಲ್ಲಿ ಹೇಳುವುದು ಅಗತ್ಯವಾಗಿದೆ. 'ಮನೆ ಮಗ' ಎಂಬುದು ದಾಸ ಅಥವಾ ತೊತ್ತನ್ನು ಹೇಳುತ್ತದೆ ಎಂಬಲ್ಲಿ ಅನುಮಾನವಿಲ್ಲ. ಒಂದು ವೇಳೆ ಅದು ಅಸ್ಪೃಶ್ಯಗುಲಾಮನನ್ನೇ ಹೇಳುವುದಿಲ್ಲ ಎಂದು ವಾದಿಸಿದರೂ, ಶಾಸನಗಳಲ್ಲಿ ಮತ್ತು ತತ್ವರತ್ನ ಪ್ರದೀಪಿಕೆಯಲ್ಲಿ ಬರುವ 'ತೊತ್ತು'ಗಳು ಮಾರಾಟದ ಸಾಮಗ್ರಿಗಳಾಗಿರುವುದರಿಂದ ಅವರು ನಿಶ್ಚಿತವಾಗಿಯೂ ಅಸ್ಪೃತ್ಯರಾಗಿದ್ದರು ಎಂದು ಅನುಮಾನಿಸಲು (infer) ಅವಕಾಶವಿದೆ. ಶೃಂಗೇರಿ ಮಠದ ದಾಖಲೆಗಳ ಪ್ರಕಾರ, ಮಲೆನಾಡಿನಲ್ಲಿ ಗುಲಾಮರನ್ನು ಒಡೆಯರು ಮಾರಾಟ ಮಾಡುತ್ತಿದ್ದರು, ಆ ಗುಲಾಮರು ಹೊಲೆಯರೇ ಆಗಿದ್ದರು. (ನೋಡಿ : ಎಂ. ಚಿದಾನಂದಮೂರ್ತಿ: 'ಹಿಂದಿನ ಕರ್ನಾಟಕದಲ್ಲಿ ಗುಲಾಮರು ಮತ್ತು ಗುಲಾಮರ ಮಾರಾಟ.' ಜನ–ಜನಪದ–ಜಾನಪದ, ಪು. 248.)

ನಂಜುಂಡನು ರಾಮನಾಥ ಚರಿತೆಯಲ್ಲಿ ಹೊಸಮಲೆಯನ್ನು ವರ್ಣಿಸುತ್ತ ಕಂಚುಗಾರ, ಕಲ್ಕುಟಿಗ, ಬಡಗಿ, ಸಂಚುಗಾರ , ಕಮ್ಮಾರ, ಅಂಚುಗಾರ, ಸಮ್ಮಗಾರ (=ಚಮ್ಮಾರ) ಕೇರಿಗಳನ್ನು ವರ್ಣಿಸುತ್ತ, 'ಬೆಸದಾಳುಗಳ' ಕೇರಿಯನ್ನು ಹೇಳುತ್ತಾನೆ.[115] 'ಬೆಸದಾಳು'ಗಳು ತೊತ್ತು ಅಥವಾ ದಾಸರು (Slaves) ಎಂಬಲ್ಲಿ ಅನುಮಾನ ಕಾಣಿಸದು. ಅಲ್ಲೇ ಬರುವ ("ಬೆಸಮಕ್ಕಳೊಗುವ ಮೈಬೆಮರಿದಾ ಬೀದಿ ಕೆಸರ್ವಡೆ–ದಿಹುದನವರತ)". ಬೆಸದಾಳು ಅಥವಾ ಬೆಸಮಕ್ಕಳ (= ಆಳುಮಕ್ಕಳ) ಬೆವರಿಂದ ಹೊಸಮಲೆ ನಗರದ ಬೀದಿಗಳು ಕೆಸರಾಗಿದ್ದುವು ಎಂಬ ಮಾತು ಗಮನಾರ್ಹ. ಆಳು ಮಕ್ಕಳ ಜೀವನದ ಗುರಿ ತಮ್ಮ ಯಜಮಾನರಿಗಾಗಿ ಶ್ರಮಿಸಿ ಬೆವರು ಸುರಿಸುವುದು ತಾನೇ.

115. ರಾಮನಾಥ ಚರಿತೆ–2. ಸಂ : ಎಚ್. ದೇವೀರಪ್ಪ. ಮೈಸೂರು, 1959. ಪು. 75.

## ಲಿಂಗಾಯತ ಆಂದೋಲನ : ಭಕ್ತಿಯ ಹಿನ್ನೆಲೆ

ಲಿಂಗಾಯತ ಸಾಹಿತ್ಯವನ್ನು (ವಚನ, ಕಾವ್ಯಗಳೂ ಸೇರಿದಂತೆ) ಅಸ್ಪೃಶ್ಯರ ಜೀವನದ ಬಗ್ಗೆ ಅರಿಯಲು ಈ ಪುಸ್ತಕದಲ್ಲಿ ಇಲ್ಲಿಯವರೆಗೆ ಬಳಸಿಕೊಳ್ಳಲಾಗಿದೆಯೇ ಹೊರತು ಅಸ್ಪೃಶ್ಯರ ಬಗ್ಗೆ ಲಿಂಗಾಯತರು ತಾಳಿದ್ದ ನಿಲುವು ಏನು, ಆ ನಿಲುವಿನಿಂದ ಆದ ಸಾಮಾಜಿಕ (ಆರ್ಥಿಕ?) ಬದಲಾವಣೆ ಏನು ಎಂಬುದರ ಬಗ್ಗೆ ನಾನು ಯಾವುದೇ ಮಾತನ್ನು ಇಲ್ಲಿಯವರೆಗೆ ಆಡಿಲ್ಲ. ಇದಕ್ಕೆ ಕಾರಣ, ಅದು ವಿಸ್ತಾರವಾದ ಪ್ರತ್ಯೇಕ ಚರ್ಚೆಗೆ ಅರ್ಹವಾದ ವಿಷಯವಾಗಿದೆ ಎಂಬುದೇ.

ಈಗಾಗಲೇ, ಕರ್ನಾಟಕದ ಸಮಾಜೋಧಾರ್ಮಿಕ ಇತಿಹಾಸದಲ್ಲಿ ಮತ್ತು ಸಾಹಿತ್ಯ ಚರಿತ್ರೆಯಲ್ಲಿ ಲಿಂಗಾಯತ ಚಳವಳಿ, ವಚನ ಚಳವಳಿ ಎಂದು ಪ್ರಸಿದ್ಧ ವಾಗಿರುವ ಘಟನೆ ಬಹುವಾದ ಚರ್ಚೆಗೆ ಈಡಾಗಿರುವ ಪ್ರಸಿದ್ಧ ವಿಷಯವೇ ಆಗಿದೆ. ಆ ಚಳವಳಿಯನ್ನು ಕುರಿತು ವಿಚಾರ ಮಾಡುವವರೆಲ್ಲ ಅಸ್ಪೃಶ್ಯರ ಬಗ್ಗೆ ಅಂದಿನ ಲಿಂಗಾಯತ ಚಳವಳಿಯ ಧೋರಣೆಯೇನಿತ್ತೆಂಬುದರ ಬಗ್ಗೆ ಮಾತನಾಡಿದ್ದಾರೆ ಯಾದರೂ ವರ್ಣ ಜಾತಿಗಳ ಬಗ್ಗೆ ಅವರು ತಾಳಿದ್ದ ನಿಲುವು ಏನು, ಇದರಿಂದ ಆದ ಪರಿಣಾಮವೇನು ಎಂಬುದನ್ನು ಸಮಗ್ರ ವಾಙ್ಮಯವನ್ನು ಗಮನದಲ್ಲಿಟ್ಟುಕೊಂಡು ಅಖಿಲಭಾರತೀಯ ಹಿನ್ನೆಲೆಯಲ್ಲಿ ವಿಮರ್ಶಿಸುವ ಪ್ರಯತ್ನಗಳು ಹಲವು ಇಲ್ಲ. ಈ ಉಪನ್ಯಾಸದಲ್ಲಿ ಮತ್ತೊಮ್ಮೆ ಆ ಸಮಸ್ಯೆಯನ್ನು ಆಧುನಿಕ ಸಮಾಜವಿಜ್ಞಾನದ ಬೆಳಕಿನಲ್ಲಿ ಪರಿಶೀಲಿಸುವುದು ಆಗತ್ಯವೆಂದು ಭಾವಿಸಿದ್ದೇನೆ.

ವಚನಕಾರರ ಚಳವಳಿ ತನಗೆ ತಾನೇ ಸ್ವಯಂ ಸ್ಫೂರ್ತವಾಗಿ, ಧಿಡೀರನೆ ಎಂದೋ ಒಂದು ದಿನ ಇದ್ದಕ್ಕಿದ್ದಂತೆ ಕಾಣಿಸಿಕೊಂಡಿದ್ದಲ್ಲ. ಅದು ಅಂದಿನ ಅಥವಾ ಅದಕ್ಕೆ ಸ್ವಲ್ಪ ಹಿಂದಿನ ಕರ್ನಾಟಕದ ರಾಜಕೀಯ ಹಿನ್ನೆಲೆ, ಮಧ್ಯಯುಗದಲ್ಲಿ ಅಖಿಲ ಭಾರತ ವ್ಯಾಪ್ತಿಯಾಗಿ ಹರಡಿದ ಭಕ್ತಿ ಚಳವಳಿ, ಹನ್ನೊಂದನೆಯ ಶತಮಾನದ ಉತ್ತರಾರ್ಧ ಮತ್ತು ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ ಕಾಣಿಸಿಕೊಂಡ ಧೀರ ಸಾಮಾಜಿಕ ನಾಯಕರು ಇವೆಲ್ಲ ಆ ಚಳವಳಿಯ ಹಿನ್ನೆಲೆಯಾಗಿ ಕಾರಣವಾಗಿ ಪ್ರಚೋದನೆಯಾಗಿ, ಪೋಷಕವಾಗಿ ಕೆಲಸ ಮಾಡಿವೆ.

ವಚನವಾಙ್ಮಯ ಕೇವಲ ಭಕ್ತಿ ಸಾಹಿತ್ಯವೆಂದು ವಚನಕಾರರನ್ನು ಬರಿಯ ಭಕ್ತರೆಂದು ಭಾವಿಸುವುದು ಅವರಿಗೆ ಸರಿಯಾದ ನ್ಯಾಯವನ್ನೊದಗಿಸಿದಂತಾಗುವು ದಿಲ್ಲ. ಅವರು ಸಾಮಾಜಿಕ ಚಿಂತಕರೂ ಹೌದು. ಅವರ ಬರಹ ಸಾಮಾಜಿಕ ಚಿಂತನೆಯೂ ಹೌದು, ಅಂದಿನ ಕಾಲದ ಸಾಮಾಜಿಕ ದಾಖಲೆಗಳೂ ಹೌದು. ಅವರಿಗೆ ಸ್ಪಷ್ಟವಾದ ಧಾರ್ಮಿಕ ದರ್ಶನದ ಚೌಕಟ್ಟು ಇತ್ತೇ, ನನಗೆ ತಿಳಿಯದು, (ಬಹುಶಃ ಇತ್ತು). ಆದರೆ ಅವರ ಸಾಮಾಜಿಕ ದರ್ಶನ (Social Philosophy)

ಮಾತ್ರ ಸ್ಪಷ್ಟ ರೂಪು ರೇಷೆಗಳನ್ನುಳ್ಳದ್ದು. ಅವರ ಸಾಮಾಜಿಕ ದರ್ಶನದಲ್ಲಿ ಅವರು ಬಯಸಿದ ಸಮಾಜದ ಕಲ್ಪನೆ ಎಲ್ಲ ವಿವರಗಳೊಂದಿಗೆ ರೂಪುಗೊಂಡಿತ್ತು. ಆ ದೃಷ್ಟಿಯಿಂದ ಅವರು ಸಮಾಜ ದಾರ್ಶನಿಕರೂ ಹೌದು. ಭಾರತೀಯ ಭಕ್ತಿ ಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಸಾಮಾಜಿಕ ಚಿಂತನೆಯೂ ಸೇರಿದೆಯೆಂಬುದು ನಿಜವಾದರೂ ವಚನವಾಙ್ಮಯದಲ್ಲಿ ಕಾಣಿಸಿಕೊಳ್ಳುವಷ್ಟು ಪ್ರಮುಖವಾಗಿ ಮತ್ತು ಪ್ರಬುದ್ಧವಾಗಿ ಅನ್ಯತ್ರ ಕಾಣಿಸಿಕೊಂಡಿಲ್ಲವೆಂಬುದು ನಿಸ್ಸಂದೇಹ. ವಚನಕಾರರು ಸಮಾಜದಾರ್ಶನಿಕರಾಗಲು ಸೂಚನೆ ಧೈರ್ಯಗಳನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಕೊಟ್ಟುದು ಮಧ್ಯ ಯುಗದ ಭಕ್ತಿ ವಾತಾವರಣವಾದ್ದರಿಂದ ಅದರ ಸಂಕ್ಷಿಪ್ತ ಹಿನ್ನೆಲೆ, ಪರಿಚಯ ಲಕ್ಷಣ ಗಳನ್ನು ತಿಳಿಯುವುದು ಇಲ್ಲಿ ಅಗತ್ಯವಾಗಿದೆ.

ಸುಮಾರು ಕ್ರಿ.ಶ. ಎಂಟನೇ ಶತಮಾನದಿಂದ ಮುಂದಿನ ಭಾರತೀಯ ಧಾರ್ಮಿಕ ಇತಿಹಾಸ ಮುಖ್ಯವಾಗಿ ಭಕ್ತಿಯುಗದ್ದೇ ಆಗಿದೆ. ಅದಕ್ಕಿಂತ ಹಿಂದಿನ ಇತಿಹಾಸ ಮುಖ್ಯವಾಗಿ ದರ್ಶನ ಪ್ರಧಾನವಾದುದು. ಶಾಂಡಿಲ್ಯ ಮತ್ತು ನಾರದರಿಂದ ಪ್ರಣೀತವಾದ ಭಕ್ತಿಯ ಆಚರಣೆ ಒಂದು ಪ್ರವಾಹವಾಗಿ ಹರಿದುದು ಭಾರತೀಯ ಇತಿಹಾಸದ ಮಧ್ಯಯುಗದಲ್ಲಿ. ಮನುಷ್ಯ ತನ್ನಲ್ಲಿರುವ ಅಪಾರ ಪ್ರೇಮವನ್ನು ಚಿಲುಮೆ ಯಂತೆ ಭಗವಂತನೆಡೆಗೆ ಚಿಮ್ಮಿಸುವುದು ಭಕ್ತಿಯ ಲಕ್ಷಣ. ಅರ್ಥಾರ್ಥಿಯ ತಾಮಸ ಭಕ್ತಿಗಿಂತ ಜಿಜ್ಞಾಸುವಿನ ರಾಜಸಭಕ್ತಿಗಿಂತ ಆರ್ತನ ಸಾತ್ವಿಕ ಭಕ್ತಿಯೇ ಉತ್ಕೃಷ್ಟವೆನ್ನು ತ್ತಾನೆ, ನಾರದ. ಭಕ್ತಿಯು ಜ್ಞಾನ ಯೋಗಗಳ ಕೊನೆ ಮಾತ್ರವೇ ಅಲ್ಲ, ಅವುಗಳ ಸಿದ್ಧಿ ಗಂತವ್ಯ ಅದು. ಭಗವಂತನನ್ನು ಭಗವಂತನಿಗಾಗಿ ತೀವ್ರವಾಗಿ ಬಯಸುವುದು, ಸ್ತೋತ್ರ ಧ್ಯಾನ ಹಾಡುಗಳ ಮೂಲಕ ಅವನನ್ನು ಪಡೆಯಲು ಬಯಸುವುದು, ಅವನ ಇಚ್ಛೆಗೆ ತನ್ನನ್ನು ತಾನು ಪೂರ್ತಿ ಒಪ್ಪಿಸಿಕೊಳ್ಳುವುದು ಭಕ್ತಿಯ ಪ್ರಮುಖ ಲಕ್ಷಣ. ಈ ಗುರಿಯ ಮುಂದೆ ಜ್ಞಾನ, ಜಾತಿ, ಕುಲ, ಐಶ್ವರ್ಯ ಎಲ್ಲವೂ ಯಃಕಶ್ಚಿತ್ತವೆನ್ನುತ್ತಾನೆ, ನಾರದ.[116] ಭಕ್ತಿಯ ಸೂಚಿಯಾದ 'ಅನುಭಾವ'ವು ಕ್ಷಣಕ್ಷಣಕ್ಕೆ ಹೆಚ್ಚುತ್ತಾ ಹೋಗ ಬೇಕು. ಆ ಅನುಭವ ಆನಂದರೂಪವಾದುದು. ಇದರ ಮುಂದೆ ಮನುಷ್ಯ ನಿರ್ಮಿತವಾದ ಮೇಲು ಕೀಳು ಎಂಬ ವ್ಯವಸ್ಥೆ ತೀರಾ ಕ್ಷುಲ್ಲಕವಾಗಿ ತೋರುತ್ತದೆ.

ಉಪನಿಷತ್ತಿನ ಅನುಭಾವಿ ಎಷ್ಟೇ ದೊಡ್ಡ ಚಿಂತಕನಾದರೂ "ಸಾಮಾನ್ಯರ ಜೊತೆ ಮಿಶ್ರವಾಗಿ ಅವರ ಆತ್ಮವಿಕಾಸವನ್ನು ಬೆಳಸುವತ್ತ ಮುಂದೆ ಬರಲಿಲ್ಲ. ಮಧ್ಯ ಯುಗದ ಅನುಭಾವಿಯ ಮುಖ್ಯ ಕರ್ತವ್ಯ ಪಾಪಿಗಳ, ಹೊಲೆಯರ, ಹೆಂಗಸರ, ಆಧ್ಯಾತ್ಮದಿಂದ ದೂರ ಉಳಿದ ಜನರ ಜೊತೆ, ಕೊನೆಗೆ ಆಧ್ಯಾತ್ಮದ ಬಗ್ಗೆ ತಪ್ಪು ಕಲ್ಪನೆ ಗಳಿದ್ದ ಜನಗಳ ಜೊತೆ ಕೂಡ, ಕೊನೆಗೆ ಪರಮಸತ್ಯವನ್ನು ಕಾಣಬಯಸುವ ಎಲ್ಲರ

---

116. ನೋಡಿ – R.D. Ranade : Pathway to God in Marathi Literature. Bombay. 1961. pp. 10-11.

ಜೊತೆ ಮಿಶ್ರವಾಗುವುದೇ ಆಗಿತ್ತು. ಉಪನಿಷತ್ತಿನ ಅನುಭಾವದಿಂದ ಮಧ್ಯಯುಗದ ಅನುಭಾವಕ್ಕೆ ಬಂದರೆ, ಆಧ್ಯಾತ್ಮಿಕ ಜೀವನವನ್ನು ಗುಪ್ತ ಏಕಾಂತದಿಂದ ಸಂತೆ ಬಯಲಿಗೆ ತಂದು ಇರಿಸಿದ ಅನುಭವವಾಗುತ್ತದೆ."[117]

ಭಕ್ತಿ ಮಾರ್ಗವು ಐಂದ್ರಿಯ ಭೋಗ ಜೀವನವನ್ನು ನಿರಾಕರಿಸಿ ಆದರ್ಶ ಜೀವನದ ಪರಿಕಲ್ಪನೆಯನ್ನು ಎತ್ತಿ ಹಿಡಿಯುತ್ತದೆ. ರಿಚುಯಲ್ಲುಗಳನ್ನೂ ಬೌದ್ಧಿಕ ಜ್ಞಾನ ವನ್ನೂ ಕೈಬಿಟ್ಟು ಮಾನವ ಪ್ರೇಮವನ್ನು ವೈಭವೀಕರಿಸುತ್ತದೆ. ಜ್ಞಾನವನ್ನು ಪರಮಾತ್ಮ ವಿಷಯಕವಾದ ಜ್ಞಾನವೆನ್ನುತ್ತದೆ. ಘಟಕಗಳ ವಿಶ್ಲೇಷಣೆ, ವಿಮರ್ಶೆ ಎನ್ನಿಸಿಕೊಳ್ಳುವ ದರ್ಶನದ ಮಹತ್ವವನ್ನು ಕೆಳಗಿಳಿಸಿ ಸತ್ಯಗಳಿಗೆ ಸತ್ಯವಾದ ದೈವದ ಹುಡುಕಾಟವೇ ಆದರ್ಶ ದರ್ಶನವೆನ್ನುತ್ತದೆ ("Philosphy as the analysis and criticism of categories is subordinated to the ideal of philosophy as the search for God, the reality of realities"). ಸಾಮಾಜಿಕ ನೀತಿಯ ದೃಷ್ಟಿಯಿಂದ ಭಕ್ತಿ ಪಂಥವು ನಿಜವಾಗಿಯೂ ಕ್ರಾಂತಿಕಾರಿ. ಎಲ್ಲ ಜೀವಿಗಳ ಬಗ್ಗೆ ಅಪಾರ ಪ್ರೇಮ ದಯೆಗಳು ಭಕ್ತಿಯ ತಿರುಳು. ಸಾಮಾಜಿಕ ಅಸಮಾನತೆಯನ್ನು ಸಂಪೂರ್ಣವಾಗಿ ಅಲ್ಲಗಳೆದದ್ದು ಎಲ್ಲ ಭಕ್ತಿ ಚಳವಳಿಗಳ ಸಮಾನ ಲಕ್ಷಣ.[118]

ಈ ದೃಷ್ಟಿಯಿಂದ ಮಧ್ಯಕಾಲೀನ ಹಿಂದೂ ಧರ್ಮದ ಭಕ್ತಿ ಪಂಥವು ಅಂದಿನ ಜನಜೀವನವನ್ನು ರೂಪಿಸುವುದರಲ್ಲಿ ಬಹು ಪ್ರಧಾನ ಪಾತ್ರವನ್ನು ವಹಿಸಿತು. ಅದಕ್ಕಿಂತ ಹಿಂದಿನ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಹಿಂದೂ ಸಮಾಜಕ್ಕೆ ನಿಯಮಗಳನ್ನು ತೊಡಿಸುವ ಯತ್ನ ಕಂಡುಬಂದರೆ ಭಕ್ತಿಸಾಹಿತ್ಯ ಅದಕ್ಕೆ ವಿರುದ್ಧವಾದ ಕ್ರಿಯೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಇನ್ನೂ ಸ್ಪಷ್ಟಪಡಿಸುವುದಾದರೆ "ಭಕ್ತಿ ಚಳವಳಿಯ ಕೇಂದ್ರ ಲಕ್ಷಣವೆಂದರೆ ಅದರ ಮುಕ್ತವಾತಾವರಣ, ಜಾತಿ ಭೇದವಿಲ್ಲದೆ ಎಲ್ಲರನ್ನೂ

---

117. "The Upanishadic mystic did not come forward with the deliberate purpose of mixing with men in order to ameliorate their spiritual condition. The business of the mystic, with pariahs, with women, with people who cared not for the spiritual life, with people who had even mistaken notion about it, in fact, everybody who wanted, be it even so little, to appropriate the Real. In a word, we may say that as we pass from the Upanishadic mysticism to the mysticism of the Middle Age, we see the spiritual life brought from the hidden cloister to the market-place." ಅದೇ, p. 1.

118. "Barring a few exceptions here and there, the entire tenor of the mysticism of Middle Age is for the practical upliftment of humanity..." (ಅದೇ, p. 2).

ಅದು ತಟ್ಟಿದ್ದು."[119] ಭಕ್ತಿ ಪಂಥಗಳ ಉದಯದ ಜೊತೆ ದೇವಸ್ಥಾನ ಸಂಸ್ಥೆಗೆ ಹೆಚ್ಚಿನ ಪ್ರಾಮುಖ್ಯ ಬಂದಿತು. ರಾಜರೂ ಅಧಿಕಾರಿಗಳೂ ಕೊಟ್ಟ ಉದಾರವಾದ ದತ್ತಿಗಳಿಂದ ಪುಷ್ಟವಾದ ದೇವಾಲಯಗಳು ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ಹೆಚ್ಚು ಕ್ರಿಯಾಶೀಲಗಳಾದವು. ಬ್ರಾಹ್ಮಣರ ಅಗ್ರಹಾರಗಳೂ ಅದಕ್ಕೆ ಮುನ್ನಿನ ಏಕಾಂತದ ತಪೋವನಗಳ ಜಾಗದಲ್ಲಿ ದೇವಾಲಯಗಳೂ ಬಂದುವು. ಇದರಿಂದ ಹೆಚ್ಚು ಹೆಚ್ಚು ಜನ ದೇವಾಲಯಗಳ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲೂ ಸಾಧ್ಯವಾಯಿತು. ಯಾತ್ರಾರ್ಥಿಗಳ ಸಂಚಾರ ಹೆಚ್ಚಿ ಅವರ ಆಗಮನ ನಿರ್ಗಮನಗಳು ದೇವಾಲಯ ಗಳನ್ನು ಚಟುವಟಿಕೆಯಿಂದಿಟ್ಟುವು. ಶೂದ್ರರಿಗೆ ಹೆಚ್ಚಿನ ಪ್ರಾಮುಖ್ಯ ಲಭ್ಯವಾಯಿತು. ಅವನೂ ಧಾರ್ಮಿಕ ಚಟುವಟಿಕೆಗಳಲ್ಲಿ ಪಾಲ್ಗೊಂಡ. ಭಕ್ತಿಪಂಥಗಳ ಜೊತೆ ದೇಶೀಯ ಭಾಷೆಗಳೂ ಮೈಕೊಡವಿ ಮೇಲೆದ್ದುದು ಗಮನಾರ್ಹ. ಸ್ಮೃತಿ ಗ್ರಂಥಗಳು ಸಂಸ್ಕೃತದಲ್ಲಿದ್ದರೆ ಉದಾರ ಮನೋಭಾವದ ಸಂತಭಕ್ತರ ಭಾವನೆಗಳು ದೇಶೀಯ ಭಾಷೆಯಲ್ಲಿ ಹರಿದವು. ಭಾರತದ ಉದ್ದಗಲಕ್ಕೆ, ಅದರಲ್ಲೂ ದಕ್ಷಿಣ ಭಾರತದ ತುಂಬ ವ್ಯಾಪಿಸಿದ ಭಕ್ತಿ ಚಳವಳಿಯ ಪ್ರವಾಹದ ಎರಡು ಮೂರು ಹೊನಲುಗಳನ್ನು ಇಲ್ಲಿ ಪರಿಚಯಮಾಡಿಕೊಳ್ಳಬಹುದು.

## ತಮಿಳುನಾಡು ಭಕ್ತಿ ಚಳವಳಿ

ತಮಿಳುನಾಡಿನಲ್ಲಿ ಸರಿಸಮಾರು ಏಕಕಾಲದಲ್ಲಿ ಎರಡು ಭಕ್ತಿ ಚಳವಳಿಗಳು ಉದಯವಾದವು–ಅವು ವಿಷ್ಣು ಶಿವರನ್ನು ಕೇಂದ್ರವಾಗುಳ್ಳ ಶ್ರೀವೈಷ್ಣವ ಮತ್ತು ಶೈವ ಭಕ್ತಿ ಚಳವಳಿಗಳು. ತಮಿಳು ಶ್ರೀವೈಷ್ಣವರಿಗೆ ಹೆಚ್ಚು ಪ್ರಮುಖ ಆಧಾರಗಳಾದ ಪಾಂಚರಾತ್ರಾಗಮಗಳು ವೈಖಾನಸಾಗಮಗಳಿಗಿಂತ ಹೆಚ್ಚು ಉದಾರ. ಪಾಂಚರಾತ್ರ ರಿಚುಯಲ್ಲಿನ ಪ್ರಧಾನ ಕೈಪಿಡಿಯಂತಿರುವ "ಪರಮಸಂಹಿತಾ" ಕೃತಿಯು ದ್ವಿಜರಿಗೆ ಮಾತ್ರವೇ ಅಲ್ಲ, ಸತ್ಕುಲ ಪ್ರಸೂತನೂ ಸಚ್ಚಾರಿತ್ರ್ಯವಂತನೂ ಆದ ಶೂದ್ರನಿಗೂ ಶ್ರೀವೈಷ್ಣವ ದೀಕ್ಷೆಯನ್ನು ನೀಡಬಹುದೆನ್ನುತ್ತದೆ. ಅವನಿಗೆ ದೀಕ್ಷೆಯನ್ನು ನೀಡಿದ ಹನ್ನೆರಡು ವರ್ಷಗಳ ಬಳಿಕ ಅವನನ್ನು ಪರೀಕ್ಷಿಸಿ, ಬಳಿಕ ಅವನನ್ನು ಎಲ್ಲ ಬಗೆಯ ಶ್ರೀವೈಷ್ಣವ ಧರ್ಮಾನುಷ್ಠಾನವಿಧಿಗಳಿಗೆ ಅಧಿಕಾರವನ್ನು ನೀಡಬಹುದೆನ್ನುತ್ತದೆ. ಶ್ರೀವೈಷ್ಣವ ಭಕ್ತಿ ಸಾಹಿತ್ಯ "ನಾಲಾಯಿರ ಪ್ರಬಂಧ"(=ನಾಲ್ಕು ಸಾವಿರ ಪ್ರಬಂಧ) ವೆಂಬುದಾಗಿ ಪ್ರಸಿದ್ಧವಾಗಿದೆ. ಇದನ್ನು ರಚಿಸಿದ ಹನ್ನೆರಡು ಆಳ್ವಾರರಲ್ಲಿ ಪೊಯ್ಗೈ ಭೂತತ್ತರ್, ಪೇಯರ್, ತಿರುಮುಳಿಚ್ಚೈ ಪ್ರಾಚೀನರು; ನಮ್ಮಾಳ್ವಾರ್, ಮಧುರಕವಿ,

---

119. "The central character of the Bhakti Movement, in textual terms, is its openness, its universal appeal without regard to Caste" – Burton Stein : 'Social Mobility in the Caste System in India.' Ed: James Silverberg. Hague. 1968. p. 80.

ಕುಲಶೇಖರರ್, ಪೆರಿ ಆಳ್ವಾರ್, ಆಂಡಾಳ್ ಮಧ್ಯಕಾಲದವರು; ಸ್ವಲ್ಪ ಈಚಿನವರು ತೊಂಡಿರಪ್ಪೊಡಿ, ತಿರುಪ್ಪಾಣಿ ಮತು ತಿರುಮಂಗೈ. ಇವರಲ್ಲಿ ಎಲ್ಲ ಜಾತಿಯವರೂ ಸೇರಿದ್ದಾರೆ. ಉದಾಹರಣೆಗೆ ಪೆರಿ ಆಳ್ವಾರ್ ಬ್ರಾಹ್ಮಣ, ನಮ್ಮಾಳ್ವಾರ್ ವೆಳ್ಳಾಳ ಶೂದ್ರ, ತಿರುಪ್ಪಾಣಿ ಅಸ್ಪೃಶ್ಯ. ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ ಕರ್ನಾಟಕಕ್ಕೆ ಬಂದ ಶ್ರೀವೈಷ್ಣವ ದಾರ್ಶನಿಕ ಅನುಭಾವಿ ಶ್ರೀ ರಾಮಾನುಜರು ಮಾನವ ಪ್ರೇಮಿಯಾಗಿದ್ದು, ದಿಲ್ಲಿಯಿಂದ ಶ್ರೀರಾಮಪ್ರಿಯ ವಿಗ್ರಹವನ್ನು ತರಲು ತಮಗೆ ಸಹಾಯ ಮಾಡಿದ ಅಸ್ಪೃಶ್ಯರಿಗೆ ಮೇಲ್ಕೋಟೆಯ ದೇವಾಲಯದ ಪ್ರಾಕಾರಕ್ಕೆ ವರ್ಷದಲ್ಲಿ ಮೂರು ದಿನ ಪ್ರವೇಶವನ್ನು ದೊರಕಿಸಿಕೊಟ್ಟರೆಂದು ಪ್ರತೀತಿ ಇದೆ.

ತಮಿಳುನಾಡಿನ ಶೈವ ಭಕ್ತಿಪಂಥದಲ್ಲಿ ಕಾಣಿಸಿಕೊಳ್ಳುವ ಅರವತ್ತಮೂರು ನಾಯನ್ಮಾರರಲ್ಲಿ ರಾಜರು, ಬ್ರಾಹ್ಮಣರು, ಅಸ್ಪೃಶ್ಯರು, ವರ್ತಕರು, ರೈತರು, ಕುರುಬರು, ಕುಂಬಾರರು, ನೇಕಾರರು, ಬೇಡರು, ಬೆಸ್ತರು ಇದ್ದಾರೆ. ತಿರುಮೂಲರ್ ಹೇಳುತ್ತಾನೆ–'ಎಲ್ಲ ಮನುಜ ಜೀವಿಗಳಲ್ಲಿ ಪ್ರೀತಿ ಇಡದವನು ದೇವರಲ್ಲೂ ಪ್ರೀತಿ ಇಡದವನು.' ಪ್ರತಿಯೊಬ್ಬ ಮನುಷ್ಯನೂ ಅವನ ಪ್ರಕಾರ 'ದೇವರ ಓಡಾಡುವ ದೇವಾಲಯ.' ನಂಬಿ ಆಂಡಾರ್ ನಂಬಿ ಎಂಬಾತ ತಮಿಳು ಶೈವ ವಾಙ್ಮಯವನ್ನು ಹನ್ನೆರಡು ತಿರುಮುರೈಗಳಲ್ಲಿ ಜೋಡಿಸಿದ. ಇವುಗಳಲ್ಲಿ ಏಳನೆಯದು ಸಂಬಂಧರ್, ಅಪ್ಪರ್ ಮತ್ತು ಸುಂದರರ್ ಅವರ 'ತೇವಾರ'ಗಳು, ಮಾಣಿಕ್ಯವಾಚಕರ ತಿರುವಾಚಕವು ಸೇರಿದೆ. ಶೈವ ನಾಯನ್ಮಾರರ ಕೃತಿಗಳಲ್ಲಿ ಭಕ್ತಿಯ ನಿರ್ಭರತೆ, ಮಾನವ ಪ್ರೇಮಗಳು ಉಕ್ಕಿ ಹರಿದಿವೆ. ತಮಿಳು ಶೈವಭಕ್ತರಲ್ಲಿ ನಂದನಾರ್ ಎಂಬ ಭಕ್ತ ಅಸ್ಪೃಶ್ಯ. ತಿಲಕವತಿಯರ್ ಮುಂತಾದ ಸ್ತ್ರೀಯರೂ ಅಲ್ಲಿ ಕಾಣಿಸುತ್ತಾರೆ. "ಈ ಎಲ್ಲ ಸಂತಕವಿಗಳಿಗೆ ಧರ್ಮ ಎಂದರೆ ಬೌದ್ಧಿಕ ಪರಿಕಲ್ಪನೆಗಳ ಸ್ವೀಕರಣೆ ಅಲ್ಲ, ಅಥವಾ ಅರ್ಥಹೀನ ಆಚರಣೆಗಳನ್ನು ನಡೆಸುವುದೂ ಅಲ್ಲ; ಶ್ರದ್ಧೆ, ಸಮರ್ಪಣೆ, ಶುದ್ಧ ದೈವಭಕ್ತಿ ಇವುಗಳ ಮೂಲಕ ಪರವಸ್ತುವಿನ ಅನುಭವ ಆಗಿತ್ತು."[120]

## ನಾಥಪಂಥ

ಲಿಂಗಾಯತ ಚಳವಳಿಗಿಂತ ಹಿಂದೆ ವ್ಯಾಪಕವಾಗಿ ಹಬ್ಬಿದ್ದ ನಾಥ ಸಂಪ್ರದಾಯವು ದೋಕ್ಷವು ಎಲ್ಲ ಲಿಂಗ, ಜಾತಿಗಳಿಗೆ ಎಂದು ಹೇಳಿದ್ದಲ್ಲದೆ ಅದರ ಗುರುಗಳಾದ ನಾಥಸಿದ್ಧರು ಸಾಮಾನ್ಯರ ಭಾಷೆಯಲ್ಲಿ ಜನತೆಗೆ ಬೋಧಿಸಿದರು.

---

120. "To these saintly poets religion was not the acceptance of academic abstractions nor the celebration of empty ceremonies. It was the experience of Reality through *Bhakti* : Faith, humble submission, absolute devotion, love for God" – K.R. Srinivasa Iyengar: 'Early Tamil Literature.' Indian Inheritance. I. Ed: K.M. Munshi and N. Chandrasekhara Iyer. Bombay. p. 149.

ಅಂದಿನ ಸಾಂಪ್ರದಾಯಕ ಹಿಂದೂ ಧರ್ಮದ ಶ್ರೇಣೀಕೃತ ವ್ಯವಸ್ಥೆಯನ್ನು ಅವರು ಪ್ರತಿಭಟಿಸಿದ್ದರು. ಲಿಂಗಾಯತ ಶರಣರ ಮೇಲೆ ನಾಥ ಸಂಪ್ರದಾಯದ ಪ್ರಭಾವ ವಿರುವುದನ್ನು ಈಗಾಗಲೇ ಗುರುತಿಸಿದ್ದಾರೆ.

## ಲಿಂಗಾಯತ ಚಳವಳಿ

ಲಿಂಗಯತ ಚಳವಳಿ ಒಂದು ಭಕ್ತಿ ಚಳವಳಿಯಾಗಿ ಅಖಿಲಭಾರತ ಭಕ್ತಿ ಚಳುವಳಿಯ ಎಲ್ಲ ಲಕ್ಷಣಗಳನ್ನೂ ಮೈಗೂಡಿಸಿಕೊಂಡಿರುವಂತೆಯೇ ಕೆಲವು ವೈಲಕ್ಷಣ್ಯಗಳನ್ನು ಹೊಂದಿದೆ. ಅದು ಏನು ಎಂಬುದನ್ನು ನೋಡೋಣ. ಆದರೆ ಜಾತಿ ಭೇದದ ಬಗ್ಗೆ ಅವರ ನಿಲುವು ರೂಪಿತವಾಗಲು ಮಧ್ಯಯುಗದ ಭಕ್ತಿ ಚಳವಳಿ ಕಾರಣ ವೆಂಬುದನ್ನು ನಾವು ಮರೆಯುವಂತಿಲ್ಲ.

ಲಿಂಗಾಯತ ಚಳವಳಿಯ ರಾಜಕೀಯ ಹಿನ್ನೆಲೆಯನ್ನು ಕುರಿತು ಸಂಕ್ಷಿಪ್ತ ವಾಗಿಯಾದರೂ ವಿಮರ್ಶಿಸುವುದು ಅಗತ್ಯವಾಗಿ ತೋರುತ್ತದೆ. ವಾಸ್ತವವಾಗಿ ಈ ಚಳವಳಿಯ ಬೇರುಗಳು ಬಸವನಿಗಿಂತ ಹಿಂದಕ್ಕೆ, ಕೊನೆಯ ಪಕ್ಷ ಅರವತ್ತು ವರ್ಷ ಗಳಷ್ಟಾದರೂ ಹಿಂದಕ್ಕೆ ಹೋಗುತ್ತವೆ. ಅದು ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ಕಾಲ (1086–1127); ಕರ್ನಾಟಕವು ತನ್ನ ರಾಜಕೀಯ ಆರ್ಥಿಕ ಸಾಂಸ್ಕೃತಿಕ ಕ್ಷೇತ್ರ ಗಳಲ್ಲಿ ಪ್ರಗತಿಯ ತುದಿಯನ್ನು ಮುಟ್ಟಿತ್ತು. ಆ ವೈಭವದಲ್ಲಿಯೇ ಮುಂದೆ ಕಾಣಿಸಿ ಕೊಂಡ ಪ್ರತಿಭಟನೆಯ ಬೀಜಗಳು ಹುದುಗಿದ್ದುವು. ಆ ಹಿಂದೆ ಕಾಣಿಸದಷ್ಟು ಅಗ್ರಹಾರಗಳ ನಿರ್ಮಾಣ ಅವನ ಕಾಲದಲ್ಲಿ ಎದ್ದು ಕಾಣುವ ಸಂಗತಿ. ಬ್ರಾಹ್ಮಣರಿಗೆ ಉದಾರವಾಗಿ ದತ್ತಿಗಳು, ಅವರ ಕೈಗೆ ಅಧಿಕಾರ ಸೂತ್ರಗಳು ಹೋದುದು, ಮಧುಸೂದನ ಅನಂತಪಾಲರಂತಹ ಪ್ರಬಲ ದಂಡನಾಯಕರು ಬ್ರಾಹ್ಮಣರಾಗಿದ್ದುದು ಶಾಸನಗಳಿಂದ ತಿಳಿದು ಬರುವ ವಿಷಯಗಳು. ಜಾತಿಗಳಲ್ಲಿ ಯಾವುದೇ ಒಂದು ವರ್ಗಕ್ಕೆ ಸಲ್ಲುವ ಹೆಚ್ಚಿನ ಸೌಲಭ್ಯಗಳು ಇನ್ನುಳಿದ ವರ್ಗಗಳ ಶೋಷಣೆಯನ್ನು ಉಂಟುಮಾಡುತ್ತವೆ ಎಂಬುದನ್ನು ಇಲ್ಲಿ ಹೇಳಬೇಕಾಗಿಲ್ಲ. ಆರ್ಥಿಕ ಸವಲತ್ತುಗಳು, ಮಿತಿಮೀರಿದ ಅಧಿಕಾರ ಇವು ಬ್ರಾಹ್ಮಣರ ಕೈಗೆ ಹೋದುದಕ್ಕೂ ವಿಕ್ರಮಾದಿತ್ಯನಂತಹ ಪ್ರಬಲ ಚಕ್ರವರ್ತಿಯ ವಿರುದ್ಧ ಅವನ ಕಾಲದಲ್ಲೇ ದುರ್ಬಲವಾಗಿಯಾದರೂ ಸಾಂಕೇತಿಕ ಪ್ರತಿಭಟನೆಗಳು ನಡೆದಿರುವುದಕ್ಕೂ[121] ಸಂಬಂಧವಿದೆಯೇ ವಿಚಾರ ಮಾಡಬೇಕು.

ಈ ಪ್ರತಿಭಟನೆಯ ವಿಷಯ ಹೆಚ್ಚು ವಿಶ್ವಾಸಾರ್ಹ ಐತಿಹಾಸಿಕ ದಾಖಲೆಗಳಾದ ಶಾಸನಗಳಲ್ಲಿ ಕಾಣಿಸಿಕೊಳ್ಳದೆ ವಿಕ್ರಮಾದಿತ್ಯನಿಗಿಂತ ನೂರು ವರ್ಷ ಈಚಿನ ಹರಿಹರನ ಕಾವ್ಯಗಳ ಕಥೆಗಳಲ್ಲಿ ದಾಖಲಾಗಿದೆಯೆಂಬ ಕಾರಣಕ್ಕಾಗಿ ಪ್ರತಿಭಟನೆಯ ಐತಿಹಾಸಿಕತೆ ಯನ್ನೇ ಶಂಕಿಸುವುದು ವಿವೇಕವಲ್ಲ.

---

121. ಮುಂದೆ ನೋಡಿ.

ವಚನಕಾರರ ಚಳವಳಿಯನ್ನು 'ಕ್ರಾಂತಿ'ಯೆಂದು (Revolution) ಕರೆಯಲಿ, ಸುಧಾರಣೆಯೆಂದು (Reformation) ಕರೆಯಲಿ ಅದು ಸದ್ಯಕ್ಕೆ ಮುಖ್ಯವಲ್ಲ. ಕ್ರಾಂತಿ ಸಾಮಾನ್ಯವಾಗಿ ರಾಜಕೀಯ ಕ್ಷೇತ್ರಕ್ಕೆ ಅನ್ವಯಿಸಿದಂತೆ, ಒಂದು ಆಳುವ ವ್ಯವಸ್ಥೆಯಲ್ಲಿ ನಡೆಯುವ ಮೂಲಭೂತ ಬದಲಾವಣೆಗೆ ಸಂಬಂಧಿಸಿದಂತೆಯೂ ಆ ಪದ ಬಳಕೆಯಾಗುತ್ತದೆ; ಸಾಮಾಜಿಕ ಆರ್ಥಿಕ ಸಾಂಸ್ಕೃತಿಕ ಕೇಂದ್ರಗಳಲ್ಲೂ ಆಗುವ ಮೂಲಭೂತ ಬದಲಾವಣೆಗೆ ಕ್ರಾಂತಿ ಎಂದು ಹೆಸರಾಗಬಹುದು. ಕ್ರಾಂತಿಗಳಿಗೆ ಕಾರಣ ಇರುವ ವ್ಯವಸ್ಥೆಯ ಬಗ್ಗೆ ತೀವ್ರ ಅತೃಪ್ತಿ. ಬಡತನ, ಅನ್ಯಾಯ, ಶೋಷಣೆ ಗಳು, ಅಸಮರ್ಥ ರಾಜರು ಇವು ಕ್ರಾಂತಿಗೆ ಉದ್ದೀಪನಗಳಾಗಬಹುದೇ ಹೊರತು ಹೋರಾಟ ಮಾಡುವ ಬುದ್ಧಿಯನ್ನು ಮೂಡಿಸುವುದಿಲ್ಲ. ಅದನ್ನು ಬಳಸಿಕೊಂಡು ಒಂದು ನಿರ್ದಿಷ್ಟ ಗುರಿಯ ಕೆಳಗೆ ಜನತೆಯನ್ನು ಹೋರಾಟಕ್ಕೆ ಸಿದ್ಧಪಡಿಸುವ ಪ್ರಬಲ ನಾಯಕರು ಬೇಕಾಗುತ್ತದೆ.[122] ಸುಧಾರಣೆ ಮುಖ್ಯವಾಗಿ ಧಾರ್ಮಿಕ ಕ್ಷೇತ್ರಕ್ಕೆ ಅನ್ವಯವಾಗುತ್ತದೆ. ಪಾಶ್ಚಾತ್ಯರಲ್ಲಿ ಅದು ಕ್ರಿ.ಶ. 1517 ರಲ್ಲಿ ಮಾರ್ಟಿನ್ ಲೂಥರನು ರೋಮನ್ ಕ್ಯಾಥೊಲಿಕ್ ಚರ್ಚ್ ಸಂಸ್ಥೆಯ ಕೆಲವು ಆಚರಣೆಗಳ ವಿರುದ್ಧ ಪ್ರತಿಭಟಿಸಿದ್ದರಿಂದ ಬಳಿಕ ಪ್ರಾಟೆಸ್ಟೆಂಟ್ ಶಾಖೆಯ ಉದಯ, ಅದರಿಂದ ಉಂಟಾದ ಧಾರ್ಮಿಕ, ಸಾಮಾಜಿಕ, ರಾಜಕೀಯ ಬದಲಾವಣೆಗಳನ್ನು ಹೇಳುತ್ತದೆ.[123] ಕ್ರಾಂತಿಯ ಅನಿವಾರ್ಯ ಅಂಗವಾದ ಪ್ರತಿಭಟನೆಯಲ್ಲಿ ರಕ್ತಪಾತವೂ ನಿಸ್ಸಹಾಯಕರ ಮುಗ್ಧರ ಕೊಲೆಯೂ ಆಗಬಹುದು. ಲಿಂಗಾಯತ ಚಳವಳಿಯು ಬಹುಭಾಗದಲ್ಲಿ ಸುಧಾರಣೆ ಎನ್ನಿಸಿಕೊಳ್ಳುತ್ತಿದ್ದರೂ ಅದರಲ್ಲಿ ಕ್ರಾಂತಿಯ ಬೀಜಗಳೂ ಹುದುಗಿವೆಯೆಂಬುದನ್ನು ಗುರುತಿಸಬಹುದು. ಆ ಚಳವಳಿಯನ್ನು ಯಾವ ಹೆಸರಿನಿಂದ ಕರೆಯಬೇಕೆನ್ನುವುದು ಮುಖ್ಯವಲ್ಲ. ವಾಸ್ತವವಾಗಿ ಅದು ಏನಾಗಿತ್ತು ಎಂಬುದು ಮುಖ್ಯ.

ಲಿಂಗಾಯತ ಚಳವಳಿ ಬಸವನಿಂದ (ಕ್ರಿ.ಶ. 1160) ಆರಂಭವಾದಂತೆ ಮಾತಾಡುವುದು ರೂಢಿಯಾಗಿದೆ. ಅವನ ಕಾಲದಲ್ಲಿ ಅದು ಗಣ್ಯಪ್ರಮಾಣವನ್ನು ಪಡೆಯಿತೆಂಬುದು ನಿಜವಾದರೂ ಅದರ ಬೇರುಗಳು ಅವನಿಗಿಂತ ಅರ್ಧ ಶತಮಾನದಷ್ಟಾದರೂ ಹಿಂದೆ ಹೋಗುತ್ತವೆಯೆಂಬುದನ್ನು ಈಗಾಗಲೇ ನಾನು ತೋರಿಸಿಕೊಟ್ಟಿದ್ದೇನೆ.[124] ಹರಿಹರನ ಕಾವ್ಯಗಳಲ್ಲಿ ನಿರೂಪಿತವಾಗಿರುವ ಬಸವಪೂರ್ವ ಧಾರ್ಮಿಕ ನಾಯಕರ ಕತೆಗಳು ಅವರಾಗಲೇ ಬಸವಣ್ಣನವರ ಕಾರ್ಯವನ್ನು ಆರಂಭಿಸಿದ್ದ ರೆಂಬುದನ್ನು ಸ್ಪಷ್ಟಪಡಿಸುತ್ತವೆ. ಕೊಂಡಗುಳಿ ಕೇಶಿರಾಜ, ತೆಲುಗು ಜೊಮ್ಮಣ್ಣರು

122. The World Book Encyclopaedia, XVI. (1976). 'Revolution' ಲೇಖನ ನೋಡಿ (p. 251).

123. ಅದೇ, 'Revolution' ಲೇಖನ ನೋಡಿ.

124. ಎಂ. ಚಿದಾನಂದ ಮೂರ್ತಿ : ವಚನ ಸಾಹಿತ್ಯ. ಬೆಂಗಳೂರು, 1975. ಪು. 21–33.

ವಿಕ್ರಮಾದಿತ್ಯನ ಕಾಲದಲ್ಲಿದ್ದ ವ್ಯಕ್ತಿಗಳು. ಇಬ್ಬರೂ ಶಿವಭಕ್ತರಾಗಿ ತಮ್ಮ ನಿಷ್ಠೆಯನ್ನು ಶಿವನಿಗೆ ಒಪ್ಪಿಸಿದ್ದರೇ ಹೊರತು ಮನುಷ್ಯನಾದ ವಿಕ್ರಮಾದಿತ್ಯನಿಗಲ್ಲ. ಮಂತ್ರಿ ಕೇಶಿರಾಜ ನಂತೂ ವಿಕ್ರಮಾದಿತ್ಯನಿಗೆ ತುಂಬಿದ ಸಭೆಯಲ್ಲಿ ವಂದಿಸಲೊಲ್ಲದೆ ತನ್ನ ಮಂತ್ರಿಪದವಿಯನ್ನು ತ್ಯಜಿಸಿ, ಕಲ್ಯಾಣ ಪಟ್ಟಣದ ಹೊರಗಿನ ವಂಶವರ್ಧನನೆಂಬ ಮೇದರವನ–ಅಸ್ಪೃಶ್ಯ ಶಿವಭಕ್ತನ–ಮನೆಗೆ ಬಂದು ಅಲ್ಲಿ ಕೆಲಕಾಲ ನೆಲಸುತ್ತಾನೆ. ಶಿವಭಕ್ತಿಯು ಪ್ರಭುತ್ವದ ಬಗ್ಗೆ ಪ್ರತಿಭಟನೆಯಲ್ಲಿಯೂ ಕೀಳು ಜಾತಿಯ ಬಗ್ಗೆ ಪ್ರೇಮದಲ್ಲಿಯೂ ಪರ್ಯವಸಾನಗೊಂಡಿದ್ದು ಗಮನಾರ್ಹವಾಗಿದೆ. ಕೆಳವರ್ಗದ ಜಾತಿಗೆ ಸೇರಿದ್ದ ಬೇಟೆಗಾರನಾಗಿದ್ದ ಜೊಮ್ಮಣ್ಣನೂ ವಿಕ್ರಮಾದಿತ್ಯನನ್ನು ಧಿಕ್ಕರಿಸಿ, ಶಿವಸರ್ವೋತ್ತಮತ್ವವನ್ನು ಸ್ಥಾಪಿಸಲು ವೈಷ್ಣವನೊಬ್ಬನನ್ನು ಕೊಂದನೆಂದು ಕತೆಯಿದೆ. ಅವನು ಮಾಂಸಾಹಾರಿಯಾಗಿದ್ದು ಅವನ ಮನೆಗೆ ಕೊಂಡಗುಳಿ ಕೇಶಿರಾಜ ಹೋಗಿ ಅಸಹ್ಯಪಟ್ಟುಕೊಂಡು ಹಿಂದೆ ಬಂದುದರಿಂದ ಶಿವನಿಗೆ ಕೇಶಿರಾಜನ ಬಗ್ಗೆಯೇ ಅಸಮಾಧಾನ ಉಂಟಾಯಿತೆಂದೂ ಕತೆಯಿದೆ. ಇವರ ಕಾಲದವನೇ ಆಗಿರಬಹುದಾದ–ಸು.ಕ್ರಿ.ಶ. 1120–ಕೆಂಭಾವಿ ಭೋಗಣ್ಣನೆಂಬ ಶಿವಭಕ್ತ ತನ್ನ ಮನೆಗೆ ಹೊಲೆಯನನ್ನು ಬರಮಾಡಿಕೊಂಡು ಬ್ರಾಹ್ಮಣ ಜನರ ಮತ್ತು ರಾಜನ ಕೋಪಕ್ಕೆ ಪಾತ್ರನಾದ. ರಾಜ–ಪ್ರಜೆ, ಮೇಲ್ಜಾತಿ–ಕೀಳ್ಜಾತಿ, ಬ್ರಾಹ್ಮಣ–ಹೊಲೆಯ, ಸಸ್ಯಾಹಾರ–ಮಾಂಸಾಹಾರ, ಮಡಿ–ಮೈಲಿಗೆಗಳ ದ್ವಂದ್ವವನ್ನು ಭಕ್ತಿಯ ನೆಲೆಯಲ್ಲಿ, ನೆಪದಲ್ಲಿ ವಿರೋಧಿಸಿದ ಧ್ವನಿಗಳನ್ನು ಈ ಕತೆಗಳು ಎತ್ತಿ ತೋರುತ್ತವೆ. ಲಿಂಗಾಯತ ಚಳವಳಿಯ ಬೇರುಗಳಂತಿರುವ ಮೇಲಿನ ಮೂವರು ವ್ಯಕ್ತಿಗಳ ಕತೆಗಳಲ್ಲೂ ಅಸ್ಪೃಶ್ಯ ವ್ಯಕ್ತಿಗಳು ಸುಳಿಯುವುದನ್ನು ಗಮನಿಸಬೇಕು. ಅಸ್ಪೃಶ್ಯರ ಪರವಾಗಿ ನಡೆದ ಆ ಮೊದಲ ಹೋರಾಟದ ಪ್ರಯತ್ನವೇ ಮುಂದಿನ ಲಿಂಗಾಯತ ಚಳವಳಿಗೆ ಪ್ರಚೋದನೆ ನೀಡಿದ್ದು ಎಂದು ಹೇಳಿದರೆ ಆಕರ್ಷಕ ಅತಿಶಯೋಕ್ತಿಯೆನ್ನಿಸುತ್ತದೆಯಾದರೂ ಅದು ಒಂದು ವಾಸ್ತವ; ತೀವ್ರ ಪ್ರತಿಭಟನೆ ಆ ಮೊದಲ ಹೋರಾಟದ ಭಾಗವಾಗಿತ್ತೆಂಬುದು ಮಾತ್ರ ನಿರಾಕರಿಸಲಾಗದ ವಾಸ್ತವ.

ಕೊಂಡಗುಳಿ ಕೇಶಿರಾಜ, ತೆಲುಗು ಜೊಮ್ಮಣ್ಣ, ಕೆಂಭಾವಿ ಭೋಗಣ್ಣ ಮೊದಲ ಪ್ರತಿಭಟನಕಾರರು. ಇವರಿಗೆ ಧೈರ್ಯ ತಂದುದು ಮಧ್ಯಕಾಲೀನ ಭಕ್ತಿ ಚಳವಳಿ; ನೇರವಾಗಿ ಪ್ರಚೋದನೆ ನೀಡಿದ್ದು ಸಾಮಾಜಿಕ ಅನ್ಯಾಯಗಳು–ತಮ್ಮ ಕಾಲದಲ್ಲಿ ಮೇಲುವರ್ಗದವರಿಗೆ ಎಲ್ಲ ಸವಲತ್ತುಗಳೂ ದೊರಕಿದ್ದು, ಕೆಳವರ್ಗದವರನ್ನು ಮೂಲೆಗೊತ್ತರಿಸಿದ್ದು.

ಈ ಚಳವಳಿ ಆರಂಭವಾದ ಕೆಲವು ದಶಕಗಳ ನಂತರ ಒಬ್ಬ ನಿಜವಾದ ಮಹಾನಾಯಕ ಬಸವಣ್ಣ ಕಾಣಿಸಿಕೊಂಡ. ಆಲಿವರ್ ಕಾಕ್ಸ್ ಒಂದು ಮಾತು ಹೇಳುತ್ತಾನೆ : ನೀಗ್ರೋಗಳನ್ನು ಒಗ್ಗೂಡಿಸಿ ಅವರನ್ನು ಬಿಳಿಯರ ಹಿಡಿತದಿಂದ ಬಿಡುಗಡೆ ಮಾಡಿಸಬಲ್ಲ ನಾಯಕ ಅನಿವಾರ್ಯವಾಗಿ ಬಿಳಿಯನೇ ಆಗಬೇಕಾಗುತ್ತದೆ.

ಆ ಬಿಳಿಯ ತನ್ನನ್ನು ತಾನು ಕರಿಯರ ಜೊತೆ ಏಕೀಕರಿಸಿಕೊಳ್ಳುವುದರಿಂದ ತಮಗಿಂತ ಶ್ರೇಷ್ಠನಾದ ಆ ಬಿಳಿಯನ ತ್ಯಾಗವನ್ನು ಕರಿಯರು ಮೆಚ್ಚುತ್ತಾರೆ. ತಮ್ಮ ನಾಯಕನನ್ನಾಗಿ ಒಪ್ಪಿಕೊಳ್ಳಲು ಅವರು ಹಿಂಜರಿಯರು. ಉಳಿದ ಬಿಳಿಯರೂ ತಮ್ಮವನೇ ಒಬ್ಬನು ಕರಿಯರ ನಾಯಕನಾಗಿರುವಾಗ ಕರಿಯರ ಬೇಡಿಕೆ, ಧ್ಯೇಯ ಉದ್ದೇಶಗಳನ್ನು (cause) ಸಹಾನುಭೂತಿಯಿಂದ ಪರಿಶೀಲಿಸಲು ಸಿದ್ಧರಾಗುತ್ತಾರೆ.[125] ಸಾಂಪ್ರದಾಯಕ ಹಿಂದೂ ಧರ್ಮದ ಅಥವಾ ಬ್ರಾಹ್ಮಣ್ಯದ ವಿರೋಧವಾಗಿ ನಡೆದ ಭಕ್ತಿ ಹೆಸರಿನ ಸಾಮಾಜಿಕ ಚಳವಳಿಯೊಂದರ ನಾಯಕನೊಬ್ಬ ಬ್ರಾಹ್ಮಣ ಜಾತಿಯಿಂದಲೇ ಮೂಡಿ ಬಂದಿದ್ದು ಆಕಸ್ಮಿಕವಲ್ಲ, ಅನಿವಾರ್ಯವೂ ಹೌದು. ಕಾಲ, ನಾಯಕ ಎರಡೂ ಕೂಡಿಬಂದು ಭಾರತೀಯ ಸಾಮಾಜಿಕ ಇತಿಹಾಸದಲ್ಲಿ ಒಂದು ಸ್ಮರಣೆಯ ಘಟನೆ ನಡೆಯದು ಗಮನಾರ್ಹ. (ಪು. 198 ನೋಡಿ)

## ವಚನಕಾರರ ದೃಷ್ಟಿಯಲ್ಲಿ ವರ್ಣ, ಜಾತಿ

ವರ್ಣ, ಜಾತಿ ಪದಗಳ ಅರ್ಥಗಳು ವಚನಕಾರರಿಗೆ ತಿಳಿದಿದ್ದುದು ಮಾತ್ರ ವಲ್ಲದೆ ಅವುಗಳ ಬಗ್ಗೆ ಅವರಿಗೆ ಸ್ಪಷ್ಟ ಕಲ್ಪನೆಯೂ ಇದ್ದಿತು. 'ಚತುರ್ವರ್ಣ' ಎಂಬ ಮಾತು ಸಿದ್ಧರಾಮನಲ್ಲಿ ಬರುತ್ತದೆ. ವೀರಶೈವನು ಶೂದ್ರನಾದರೂ ('ಚತುರ್ವರ್ಣಿ') ಚತುರ್ವರ್ಣಗಳನ್ನು ಮೀರಿದವನು, ಚತುರ್ವರ್ಣಗಳ ಆಚೆ ಇರುವವನು ಅಥವಾ ಚತುರ್ವರ್ಣಗಳನ್ನು ಅಥವಾ ಚತುರ್ವರ್ಣಗಳು ಪ್ರತಿಪಾದಿಸುವ ಅನುಶ್ರೇಣಿಯನ್ನು (hierarchy) ಮನ್ನಿಸದವನು ಎನ್ನುತ್ತಾನೆ.[126] ಎಂದರೆ ಚತುರ್ವರ್ಣಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಯಾರೇ ಆಗಲಿ ಯಾವನು ಅವುಗಳ ಮೇಲು ಕೀಳನ್ನು ಗುರುತಿಸುವುದಿಲ್ಲವೋ ಅವನೇ ವೀರಶೈವ. ಒಕ್ಕಲಿಗ ಮುದ್ದಣ್ಣನಿಗೆ ಬ್ರಾಹ್ಮಣ ವೇದವನ್ನೋದುವ, ಕ್ಷತ್ರಿಯ ಯುದ್ಧಮಾಡುವ, ವೈಶ್ಯ ವ್ಯಾಪಾರಮಾಡುವ, ಶೂದ್ರ ಉಳುಮೆಮಾಡುವ ವೃತ್ತಿಯವರೆಂಬ ಸಾಂಪ್ರದಾಯಕ ಸಂಗತಿ ತಿಳಿದಿದೆ. ತಾನು ಶೂದ್ರನಾದರೂ ತನ್ನ ಮಿತಿಗಳನ್ನು ಲಕ್ಷ್ಯಕ್ಕೆ ತಾರದೆ ತನ್ನನ್ನು ಒಪ್ಪಿಕೊಳ್ಳಬೇಕೆಂದು ತನ್ನ ಆರಾಧ್ಯ ದೈವವನ್ನು ಬೇಡಿಕೊಂಡಿದ್ದಾನೆ.[127] ವರ್ಣ ವ್ಯವಸ್ಥೆಯ ಅರಿವು

---

125. ನೋಡಿ, Oliver C. Cox: Caste, Class and Race. New york. 1970. pp. 582-83.

126. ಶ್ರೀ ಸಿದ್ಧರಾಮೇಶ್ವರ ವಚನಗಳು. ಸಂ: ಆರ್.ಸಿ. ಹಿರೇಮಠ, ಧಾರವಾಡ. 1968. ವಚನ, 450 – "ಚತುರ್ವರ್ಣಿಯಾದಡೇನು, ಚತುರ್ವರ್ಣಾತೀತನೆ ವೀರಶೈವ ನೋಡಾ, ಚತುರ್ವೇದಿಯಾದಡೇನು ಚರಮ ದೇಹವಳಿಯವನೆ ಚಾಂಡಾಲ ನೋಡಾ."

127. ಸಕಲ ಪುರಾತನರ ವಚನಗಳು, III ಪು. 48–"ವೇದಶಾಸ್ತ್ರವನೋದುವುದಕ್ಕೆ ಹಾರುವ ನಲ್ಲ, ಇಱಿದು ಮೆಱೆವುದಕ್ಕೆ ಕ್ಷತ್ರಿಯನಲ್ಲ, ವ್ಯವಹರಿಸುವುದಕ್ಕೆ ವೈಶ್ಯನಲ್ಲ, ಉಳುವ ಒಕ್ಕಲಮಗನ ತಪ್ಪ ನೋಡದೆ ಒಪ್ಪುಗೊಳ್ಳಯ್ಯ ಕಾಮ ಭೀಮ ಜೀವಧನದೊಡೆಯ ನೀನೆ ಬಲ್ಲೆ."

ಸಾಂಪ್ರದಾಯಕವಾಗಿ ಬಂದದ್ದು, ಅದನ್ನು ವಚನಕಾರರು ತಮ್ಮ ವಚನಗಳಲ್ಲಿ ಉಲ್ಲೇಖಿಸಿದರು.

ಅಂದಿನ ವಾಸ್ತವತೆಯೆಂದರೆ ಜಾತಿಗಳು. ಅಂಬಿಗರ ಚೌಡಯ್ಯ ಮತ್ತು ಸೊಡ್ಡಳ ಬಾಚರಸರು ಹದಿನೆಂಟು ಜಾತಿಗಳ ಹೆಸರು ಹೇಳಿ, ಅವು ಪ್ರತಿಯೊಬ್ಬ ಮನುಷ್ಯನಲ್ಲೂ ಉಂಟು ಎಂದು ಹೇಳುವುದರ ಮೂಲಕ ಜಾತಿಗಳು ಸಮಾಜ ಪುರುಷನ ಬೇರೆ ಬೇರೆ ಅಂಗಗಳೆಂಬುದನ್ನು ಧ್ವನಿಸಿರುವ ಅಂಶವನ್ನು ಹಿಂದೆಯೇ ನೋಡಿದ್ದೇವೆ. ಜಾತಿಗಳ ಉತ್ಪತ್ತಿ ಅಥವಾ ವಿಭಜನೆ ಬೇರೆ ಬೇರೆ ಉದ್ಯೋಗಗಳಿಂದ ಎಂಬುದನ್ನು ಬಸವಣ್ಣ ಗುರುತಿಸಿದ್ದಾನೆ.[128] ಮೇಲೆ ಹೇಳಿದ ಹದಿನೆಂಟು ಜಾತಿಗಳಲ್ಲಿ ಒಂದೊಂದು ಜಾತಿಗೂ ಬೇರೆ ಬೇರೆ 'ಕಾಯಕ' (ಉದ್ಯೋಗ) ವಿರುವುದನ್ನು ಕನ್ನಡಿ ಕಾಯಕದ ಅಮ್ಮಿದೇವ ಹೇಳಿದ್ದಾನೆ.[129] ಜಾತಿಯಲ್ಲಿ ಪ್ರಧಾನವಾದುದು ಹುಟ್ಟು ಎಂಬುದನ್ನು ಉರಿಲಿಂಗ ಪೆದ್ದಿ ಗುರುತಿಸಿದ್ದಾನೆ. ಬ್ರಾಹ್ಮಣನ ಮಗ ಬ್ರಾಹ್ಮಣ, ಕ್ಷತ್ರಿಯನ ಮಗ ಕ್ಷತ್ರಿಯ, ವೈಶ್ಯನ ಮಗ ವೈಶ್ಯ, ಶೂದ್ರನ ಮಗ ಶೂದ್ರ.[130] ಅದೇ ತರ್ಕವನ್ನು ಮುಂದುವರಿಸಿದರೆ, ಕಮ್ಮಾರನ ಮಗ ಕಮ್ಮಾರ, ಮಡಿವಾಳನ ಮಗ ಮಡಿವಾಳ ಇತ್ಯಾದಿ. ಜಾತಿ ವ್ಯವಸ್ಥೆಯ ಅಡಿಗಲ್ಲುಗಳಾದ ಉದ್ಯೋಗ ಮತ್ತು ಜನ್ಮಗಳೆರಡರ ವಿಷಯವು ವಚನಕಾರರಿಗೆ ತಿಳಿದಿತ್ತೆಂಬುದು ಸ್ಪಷ್ಟವಾಗುತ್ತದೆ.

ಪ್ರಾಚೀನ ಕಾಲದಲ್ಲಿ ವರ್ಣಗಳ ಮಿಶ್ರಣವು ವರ್ಣಸಂಕರವೆನ್ನಿಸಿಕೊಂಡಂತೆ, ಮಧ್ಯಯುಗದಲ್ಲಿದ್ದ ಜಾತಿಗಳ ಮಿಶ್ರಣವು 'ಜಾತಿ ಸಂಕರ'ವೆನ್ನಿಸಿಕೊಳ್ಳಬೇಕು. ಬಸವಣ್ಣನಲ್ಲಿ 'ಜಾತಿ ಸಂಕರ'ವೆಂಬ ಮಾತು ವಾಸ್ತವವಾಗಿ ಬಂದಿದೆ.[131] ಬಸವಣ್ಣನಿಗೆ ಶರಣರ ಜಾತಿಸಂಕರವು ಪ್ರಿಯವಾದುದು ಮತ್ತು ಬಹು ಅಪೇಕ್ಷಣೀಯವಾದುದು. ಜಾತಿಗಳಲ್ಲಿ ವಿಪ್ರ ಮೇಲಿನವನು, ಶ್ವಪಚ ಅಥವಾ ಅಂತ್ಯಜ ಕಡೆಯವನು ಎಂಬು

---

128. "**... ಕಾಸಿ ಕಮ್ಮಾಱನಾದ ಬೀಸಿ ಮಡಿವಾಳನಾದ**
**ಹಾಸನಿಕ್ಕಿ ಸಾಲಿಗನಾದ ವೇದವನೋದಿ ಹಾರುವನಾದ...**"
– ಬಸವಣ್ಣನವರ ಷಟ್ಸ್ಥಳದ ವಚನಗಳು, ವಚನ 589.

129. ಸರ್ವಪುರಾತನರ ವಚನಗಳು. III ಪು. 62, 64 – "ಆವ ಜಾತಿ ಗೋತ್ರದಲ್ಲಿ ಬಂದರೂ ತಮ್ಮ ತಮ್ಮ ಕಾಯಕಕ್ಕೆ ಭಕ್ತಿ ಸೂತಕವಲ್ಲದಿರಬೇಕು"; "ಹದಿನೆಂಟು ಕಾಯಕ."

130. ಉರಿಲಿಂಗ ಪೆದ್ದಿಗಳ ವಚನಗಳು, ಸಂಖ್ಯೆ 249.

131. ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ. 717 – "ಆವ ಕುಲವಾದರೇನು? ಶಿವಲಿಂಗವಿದ್ದವನೆ ಕುಲಜನು. ಕುಲವನಱಿಸುವರೆ ಶರಣರಲ್ಲಿ ಜಾತಿ ಸಂಕರವಾದ ಬಳಿಕ?..."

ದನ್ನು ವಚನಕಾರರು ಹೇಳುವಾಗ[132] ತಮ್ಮ ಕಾಲದ ಒಟ್ಟು ಜನಾಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದಾರೆಂದು ಅರ್ಥ ಮಾಡಿಕೊಳ್ಳಬೇಕು ಮತ್ತು ಅದು ವಾಸ್ತವವೂ ಆಗಿತ್ತು. ಜಾತಿಗಳ ಕೊನೆಯಲ್ಲಿದ್ದ ಅಂತ್ಯಜರನ್ನು ಜನ ಅಪಮಾನಕಾರಕ ದುಸ್ಥಿತಿ ಯಲ್ಲಿ ಇಟ್ಟಿರುವುದನ್ನು ಎತ್ತಿ ತೋರಿಸಿದ್ದಾರೆ. ಅವರನ್ನು ಜಾತಿಗಳ ಕೊನೆಯಲ್ಲಿಟ್ಟಿರು ವುದರ ಸಂಕೇತವೆಂಬಂತೆ ಅವರು ಊರ ಹೊರಗೆ ಇರಬೇಕೆಂಬ ಕಟ್ಟಳೆಯನ್ನು ಹಲವರು ವಿರೋಧಿಸಿದ್ದಾರೆ. ಜಾತಿ ವಾಚಕವಾದ 'ಹೊಲೆಯ' ಎಂಬುದೇ ಅವಹೇಳನದ ಮಾತಾಗಿ ಪರಿಣಮಿಸಿದ್ದಿತು. 'ಹೊಲೆಯ' ಎಂಬುದನ್ನು ನಿಂದಾ ವಾಚಕವಾಗಿ ಬಳಸುವುದಾದರೆ, ಆಗ 'ಹೊಱಕೇರಿ'ಯವರು ಮಾತ್ರ ಹೊಲೆಯ ರಾಗುವುದಿಲ್ಲ, ದುಷ್ಟ ಕಾರ್ಯಗಳನ್ನು ಮಾಡುವ ಯಾರೇ ಆಗಲಿ (ತಾಯಿಗೆ ಬೈದವ, ನಡೆವ ದಾರಿಗೆ ಮುಳ್ಳು ಹಚ್ಚಿದವ, ಬ್ರಾಹ್ಮಣನನ್ನು ಹಸುವನ್ನು ಕೊಂದವ) ಹೊಲೆಯ ರಾಗುತ್ತಾರೆ. ಹಾವಿನಹಾಳ ಕಲ್ಲಯ್ಯ ಶ್ವಪಚ, ಮಚ್ಚಿಗ ಎಂಬ ಅಸ್ಪೃಶ್ಯ ಜಾತಿಗಳಲ್ಲದೆ 'ಬೋಯ' (=ಅಂಬಿಗ) ಎಂಬ ಬಹುಶಃ ಅಸ್ಪೃಶ್ಯ ಜಾತಿಯವರನ್ನು ಹೆಸರಿಸಿದ್ದಾನೆ. ವಿಪ್ರಜನರಂತೆ "ಅಗಸ ಕಮ್ಮಾಱ ನಾವಿದ ಕುಲಜ"ರೂ ದ್ವಿಜರೇ, "ಸ್ವಪಚ ಮಚ್ಚಿಗ ಬೋಯ ಕುಲಜ"ರೂ ದ್ವಿಜರೇ ಎನ್ನುತ್ತಾನೆ ಹಾವಿನಹಾಳ ಕಲ್ಲಯ್ಯ.[133] 'ಅನಾಮಿಕ' ನಿಗೆ ರಾಜನ ಹೆಸರನ್ನು ಒಂದು ವೇಳೆ ಇಟ್ಟರೂ ಅವನು ಹೆಸರನ್ನು ಹೊತ್ತಿರಬಹುದೇ ಹೊರತು 'ಪಟ್ಟ'ಕ್ಕೆ ಅರ್ಹನಾಗುವುದಿಲ್ಲ ಎನ್ನುತ್ತಾನೆ ಚನ್ನಬಸವಣ್ಣ.[134] ಚಾಂಡಾಲನು ಜ್ಞಾನಿಯಾದರೂ ಅವನ ಜ್ಞಾನಕ್ಕೆ ಗೌರವವೇ ಹೊರತು, ಅವನ ದೇಹ ಗೌರವಾರ್ಹ ವಾಗಲಾರದು, ಎಂದರೆ ಬಹಿರಂಗವಾಗಿ ಅವನಿಗೆ ಬಾಗಿ ಗೌರವಿಸಲು ಸಾಧ್ಯವಿಲ್ಲ ವೆನ್ನುತ್ತಾನೆ ಅದೇ ವಚನಕಾರ. ಒಂದು ಜಾತಿಗೆ ಅದರ ವೃತ್ತಿ ಅನಿವಾರ್ಯ, ಅದರಿಂದ ಅದು ಬೇರೆಯಾಗಲು ಸಾಧ್ಯವಿಲ್ಲವೆಂದು ಚನ್ನಬಸಣ್ಣನ ಅಭಿಪ್ರಾಯವಿರುವಂತಿದೆ.

---

132. ಅದೇ, ವಚನ 710–"ವಿಪ್ರ ಮೊದಲು ಅಂತ್ಯಜ ಕಡೆಯಾಗಿ"; ಸಕಲ ಪುರಾತನರ ವಚನ ಗಳು II. ಪು. 274–"ಬ್ರಾಹ್ಮಣ ಮೊದಲಾಗಿ ಶ್ವಪಚ ಕಡೆಯಾಗಿ..." (ಹಾವಿನ ಹಾಳ ಕಲ್ಲಯ್ಯ); "ಒಡೆಯನ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ, ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ" – ಜೇಡರ ದಾಸಿಮಯ್ಯನ ವಚನಗಳು, ವಚನ 3.

133. ಸಕಲ ಪುರಾತನರ ವಚನಗಳು. II ಪು. 732–"ವ್ಯಾಸ ಬೋಯಿತಿಯ ಮಗ" ಎಂಬ ಬಸವಣ್ಣನ ಮಾತು ನೋಡಿ (ಬಸವಣ್ಣನವರ ಷಟ್ಸ್ಥಲದ ವಚನ 588). ಇಲ್ಲಿ ಬೋಯಿತಿ ಮತ್ಸ್ಯಗಂಧಿಯಾದರೆ, 'ಬೋಯ' ಎಂಬುದು ಅಂಬಿಗರ ಜಾತಿಯನ್ನು ಹೇಳುತ್ತದೆ.

134. "ಅರಸಿನ ಹೆಸರಿಟ್ಟ ಅನಾಮಿಕನಂತೆ ನಾಮಕ್ಕರುಹರಲ್ಲದೆ ಪಟ್ಟಕ್ಕರುಹರಪ್ಪರೆ?" – ಚನ್ನಬಸಣ್ಣನವರ ವಚನಗಳು, ವಚನ 64; "ಚಾಂಡಾಲಂಗೆ ಜ್ಞಾನವಂಕುರಿಸಿದರೆ ಆತನ ಅಂತರಂಗದ ವೃತ್ತಿಗೆ ಪೂಜ್ಯತೆಯಿಲ್ಲದೆ ಬಹಿರಂಗದ ತನುವಿಗೆ ಪೂಜ್ಯತೆ ಯಾಗದು" – ಅದೇ, ವಚನ 97.

"ಜಾತಿ ಸಂಕರ" ಎಂಬ ಮಾತನ್ನು ಬಸವಣ್ಣ ಬಳಸಿರುವುದನ್ನು ಆಗಲೇ ನೋಡಿದ್ದೇವೆ. ಅಯಾ ಜಾತಿಯವರು ಆಯಾ ಜಾತಿಯಲ್ಲೇ ಮದುವೆಯಾಗಿ ಮಕ್ಕಳನ್ನು ಪಡೆಯುವುದು ವರ್ಣಪದ್ಧತಿ ಮಾನ್ಯವಾದುದು. ಬೇರೆ ಬೇರೆ ಜಾತಿಗಳವರ ವಿವಾಹ ಜಾತಿಸಂಕರವೆನ್ನಿಸಿಕೊಳ್ಳುತ್ತದೆ. ಈ ಜಾತಿಸಂಕರವು ಬಸವನ ಸಮಕಾಲೀನರಲ್ಲಿ ನಡೆಯಿತು. ಅದಕ್ಕೆ ಬಸವಣ್ಣ ಪ್ರೋತ್ಸಾಹವನ್ನೂ ನೀಡಿದ. ಬಸವನ ಪ್ರಕಾರ, ಈ ಜಾತಿ ಸಂಕರದ ಪರಿಣಾಮವಾಗಿಯೇ ಹಲವರು ಋಷಿಗಳೇ ಜನ್ಮ ತಾಳಿದ್ದಾರೆ. ಉದಾಹರಣೆಗೆ ವ್ಯಾಸ ಬೋಯಿತಿಯ ಮಗ. ಹಾವಿನಹಾಳ ಕಲ್ಲಯ್ಯನು ಬ್ರಾಹ್ಮಣ ಹೆಣ್ಣು ಶ್ವಪಚರ ಗಂಡಿನ ಸಂಪರ್ಕದಿಂದ, ಬ್ರಾಹ್ಮಣ ಗಂಡು ಶ್ವಪಚರ ಹೆಣ್ಣಿನ ಸಂಪರ್ಕದಿಂದ ಹುಟ್ಟಿದ ಸಂತಾನವನ್ನು ಒಂದು ಕಡೆ ಉಲ್ಲೇಖಿಸಿದ್ದಾನೆ.[135]

ಜಾತಿಗಳಲ್ಲೆಲ್ಲ ದೊದಲಿಂದ ತನ್ನ ಶುದ್ಧಿಯನ್ನು ಉಳಿಸಿಕೊಂಡಿರುವುದು ಬ್ರಾಹ್ಮಣಜಾತಿ ಮಾತ್ರ. ಇದಕ್ಕೆ ಕಾರಣ, ಬ್ರಾಹ್ಮಣ್ಯದಿಂದ ಹೊರಬರಬಹುದೇ ಹೊರತು ಬ್ರಾಹ್ಮಣ್ಯಕ್ಕೇ ಅನ್ಯರಿಗೆ ಪ್ರವೇಶವಿಲ್ಲ. ಇದು ಅಂದಿಗೂ ನಿಜವೆಂಬುದಕ್ಕೆ ಸಾನಂದ ಚರಿತೆಯಲ್ಲಿ ಸೂಚನೆಯಿದೆ.[136] ಕೆಳಜಾತಿಯವನನ್ನು ಏನು ಮಾಡಿದರೂ ಮೇಲು ಜಾತಿಯವನನ್ನಾಗಿ ಮಾಡಲು ಸಾಧ್ಯವಿಲ್ಲವಾದರೂ 'ಬಡಗಿ' ಮಾಚಲದೇವಿಯನ್ನು ಕುಲಜೆಯನ್ನಾಗಿ ಪರಿವರ್ತಿಸಲು ಬ್ರಾಹ್ಮಣರು ಯತ್ನಿಸಿದುದನ್ನು ಆ ಸಂದರ್ಭದಲ್ಲಿ ಅವರು ಬಲಿಯಾಗಿ ಕೊಟ್ಟ ಪಶುವನ್ನು ಹಂಚಿಕೊಂಡು ತಿಂದುದನ್ನು ವಚನಕಾರರು ಉಲ್ಲೇಖಿಸಿದ್ದಾರೆ.[137] ಮಾಚಲದೇವಿಯ ಕತೆಯ ಮೂಲವೇನೋ ತಿಳಿಯದು. ಬ್ರಾಹ್ಮಣರು ಶೂದ್ರನನ್ನು ಬ್ರಾಹ್ಮಣನನ್ನಾಗಿ ಮಾಡಲು ಶೂದ್ರನನ್ನು ಚಿನ್ನದ ಎತ್ತಿನಲ್ಲಿ ಹೊಗಿಸಿ ಹೊರಬರುವಂತೆ ಮಾಡುತ್ತಿದ್ದುದನ್ನು ಬಸವಣ್ಣ ಉಲ್ಲೇಖಿಸಿದ್ದಾನೆ.[138] (ಮಾಚಲದೇವಿಯನ್ನು ಕುಲಜೆಯನ್ನಾಗಿ ಮಾಡುವಾಗಲೂ 'ಹೊನ್ನ ಕಪಿಲೆಯ ರಾವಣಶಾಖದ ಉಚ್ಚಿಷ್ಟದ ಹಾಲಿನಿಂದ ಕೂಳ'ನ್ನು ಅಡಿಗೆಮಾಡಿ ಬ್ರಾಹ್ಮಣರು

135. ಸಕಲ ಪುರಾತನರ ವಚನಗಳು, II, ಪು. 725.

136. ಸಾನಂದಚರಿತೆ. ಸಂ:ಎಸ್. ಬಸಪ್ಪ. ಮೈಸೂರು, 1975. ಪು. 61 – "ವಿಭೂತಿಯಂ ತಳಿದೊಡೆ ಭಕ್ತನಂ ಮಾಡಬಹುದು, ಬ್ರಾಹ್ಮಣನಂ ಮಾಡಬಹುದೆಯೆಂದು ಗಳಪುವ ರಿಗೆ ಪ್ರತ್ಯಯವಂ ತೋಱುವ ಪ್ರಕರಣಂ." ವಿಭೂತಿಯಿಂದ ಅಬ್ರಾಹ್ಮಣನನ್ನು ಬ್ರಾಹ್ಮಣ ನನ್ನಾಗಿ, ಬ್ರಹ್ಮರ್ಷಿಯಾಗಿ ಮಾಡಲು ಸಾಧ್ಯವೆಂದು ಕುಮಾರ ಪದ್ಮರಸನ ಅಭಿಪ್ರಾಯ.

137. ಉರಿಲಿಂಗಪೆದ್ದಿಗಳ ವಚನಗಳು. ವಚನ 207; ಬಸವಣ್ಣನವರ ಷಟ್ಸ್ಥಲದ ವಚನ ಗಳು, ವಚನ 582.

138. "ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ ನಂದಿಮುಖವಲ್ಲದೆ ಮಾಡಲಾಗದು, ವಿಭೂತಿಯಲ್ಲದೆ ಮತ್ತೇನೂ ಮಾಡಲಾಗದು, 'ಭರ್ಗೋದೇವ' ಎಂಬ ಮಂತ್ರವಲ್ಲದೆ ಮತ್ತೇನೂ ಮಾಡಲಾಗದು" – ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ 612.

ಉಂಡುದನ್ನು ಬಸವಣ್ಣ ಉಲ್ಲೇಖಿಸಿದ್ದಾನೆ). ಈ ಸಾಮಾಜಿಕ ಮೇಲ್ಚಲನೆ (social mobility) ಅಂದಿನ ದಿನಗಳಲ್ಲಿದ್ದುದೋ ಪೌರಾಣಿಕ ಕತೆಗಳಲ್ಲಿದ್ದುದೋ ಹೇಳುವುದು ಕಷ್ಟ. ಶೂದ್ರನನ್ನು ಕ್ಷತ್ರಿಯನನ್ನಾಗಿ ಮಾಡಿದ್ದಕ್ಕೆ ಐತಿಹಾಸಿಕ ನಿದರ್ಶನಗಳಿವೆ (ಉದಾ: ಶಿವಾಜಿ). ಶೂದ್ರನನ್ನು ಬ್ರಾಹ್ಮಣನನ್ನಾಗಿ ಮಾಡಿದ್ದಕ್ಕೆ ನಿದರ್ಶನಗಳು ಇಲ್ಲ.

## ಜಾತಿಗಳ ಸಮಾನತೆ

ವಚನಕಾರರು ಜಾತಿಗಳ ಸ್ವರೂಪವನ್ನು ಬಲ್ಲವರಾಗಿದ್ದುದರಿಂದ ಅವು ಹೋಗಬೇಕು ಎಂಬ ಅಸಾಧ್ಯ ಆದರ್ಶವನ್ನು ಎತ್ತಿ ಹಿಡಿಯುವುದಕ್ಕಿಂತ ಅವುಗಳ ಮಧ್ಯದ ಅಸಮಾನತೆ ಹೋಗಬೇಕೆಂದು ಬಯಸಿದರು. ಸಮಾನತೆಯನ್ನು ಪ್ರತಿಪಾದಿಸುವ ಒಂದು ಮಾರ್ಗ ಅವರಿಗೆ ಕಾಣಿಸಿದ್ದು ಜಾತಿಗಳಲ್ಲಿ ಉತ್ತಮವೆಂದು ಭಾವಿತವಾಗಿದ್ದ ಬ್ರಾಹ್ಮಣ್ಯದ ಪ್ರಾಶಸ್ತ್ಯದ ಅಪಮೌಲ್ಯೀಕರಣ. ಅದರ ಜೊತೆಗೆ, ಜಾತಿ ಶ್ರೇಣಿಯ ಇನ್ನೊಂದು ತುದಿಯಲ್ಲಿದ್ದ ಅಸ್ಪೃಶ್ಯನು ಬ್ರಾಹ್ಮಣನಿಗಿಂತ ಕೀಳಲ್ಲ ಎಂದು ಸ್ಪಷೋಕ್ತಿಗಳಲ್ಲಿ ಸಾರಿದರು. ಇಲ್ಲಿ ಬ್ರಾಹ್ಮಣ ದ್ವೇಷ ಕಾಣುತ್ತದೆಯೆನ್ನುವುದಕ್ಕಿಂತ ಅವರ ಜನ್ಮಲಬ್ಧ ಶ್ರೇಷ್ಠತೆಯ ನಿರಾಕರಣೆಯ ಮೂಲಕ ಕೆಳಗಿನ ಜಾತಿಯವರಲ್ಲಿ ಆತ್ಮವಿಶ್ವಾಸವನ್ನು ಮೂಡಿಸುವ ಪ್ರಯತ್ನವಿದೆಯೆಂದು ಭಾವಿಸುವುದು ಹೆಚ್ಚು ಉಚಿತ. ಒಂದು ವ್ಯವಸ್ಥೆಯನ್ನು ಭಂಗಗೊಳಿಸಲು ಇರುವ ನೇರ ಸುಲಭ ಮಾರ್ಗವೆಂದರೆ ಅದರ ಸಂಕೇತವನ್ನು ಭಂಗಗೊಳಿಸುವುದು. ಬ್ರಾಹ್ಮಣ ಅಂದಿನ ಜಾತಿ ವ್ಯವಸ್ಥೆಯ ಸಂಕೇತವಾಗಿದ್ದ. ಅಂತಹ ಭಂಗಕ್ಕೆ ಅನುಸರಿಸಿದ ತಂತ್ರಗಳು ಹೀಗಿವೆ.

### 1. ವರ್ಣಗಳಿಗೆಲ್ಲಾ ಬ್ರಾಹ್ಮಣನೇ ಗುರು ಎಂಬ ಪ್ರಸಿದ್ಧೋಕ್ತಿಯ ನಿರಾಕರಣೆ

ಬಸವಣ್ಣನ ಪ್ರಕಾರ ವರ್ಣಗಳಿಗೆ ಗುರುಗಳು ಶಿವಭಕ್ತರೇ ಹೊರತು ಬ್ರಾಹ್ಮಣರಲ್ಲ; ಬ್ರಾಹ್ಮಣನೇ ಗುರು ಎಂಬುದು ಸುಳ್ಳು.[139] ಸೊಡ್ಡಳ ಬಾಚರಸನ ಪ್ರಕಾರ ವರ್ಣಗಳಿಗೆ ಬ್ರಾಹ್ಮಣನೇ ಗುರು ಎಂಬ ಮಾತು ನಿಜ. ಬ್ರಾಹ್ಮಣ ಎಂದರೆ ಶಿವ; ಬ್ರಹ್ಮ, ವಿಷ್ಣು, ಮಹೇಶ್ವರ, ಇಂದ್ರ ಇವರು ನಾಲ್ಕು ಜಾತಿಗಳಿಗೆ ಸಲ್ಲುತ್ತಾರೆ. ಇವರಿಗೆಲ್ಲ ಶಿವನೇ ಅಧಿಕ ಎಂಬುದು ನಿಜ.[140] ಬ್ರಾಹ್ಮಣ ಎಂದರೆ ಬ್ರಾಹ್ಮಣ ಜಾತಿಯಲ್ಲವಾದ್ದರಿಂದ, ಎಲ್ಲರಿಗಿಂತ ಬ್ರಾಹ್ಮಣ ಜಾತಿಯವನೇ ಮಿಗಿಲು ಎಂಬುದು ಸುಳ್ಳು. ವೇದ

---

139. "ವರ್ಣಾನಾಂ ಬ್ರಾಹ್ಮಣೋ ಗುರುಃ ಎಂಬುದು ಹುಸಿ, ವರ್ಣಾನಾಂ ಗುರು ನಮ್ಮ ಕೂಡಲ ಸಂಗನ ಶರಣರು"–ಬಸವಣ್ಣನವರ ಷಟ್‌ಸ್ಥಳದ ವಚನಗಳು, ವಚನ 599.

140. ಸಕಲಪುರಾತನರ ವಚನಗಳು, II, ಪು. 690–"ಬ್ರಾಹ್ಮಣನೆ ಅಧಿಕವೆಂದೆಂಬಿರಿ ಭೋ. ಆ ಮಾತದು ಮಿಥ್ಯ. ಬ್ರಾಹ್ಮಣನಾರೆಂದಱಿಯಿರಿ. ಬ್ರಾಹ್ಮಣನೆ ಶಿವನು. ವರ್ಣಾನಾಂ ಬ್ರಾಹ್ಮಣೋ ದೈವವೆಂಬುದು ನಿಶ್ಚಯ. ಆ ವರ್ಣಭಾವವೆಂದಡೆ ಬ್ರಹ್ಮ ವಿಷ್ಣು ಮಹೇಶ್ವರ ಇಂದ್ರ ಈ ನಾಲ್ವರು ಜಾತಿವರ್ಗಕ್ಕೆ ಸಲುವರು. ಇಂತೀ ವರ್ಣಾಂಗಳೆಲ್ಲಕ್ಕೆ ಶಿವನೇ ಗುರು... ಆತ್ಮಂಗೆ ಆವ ಕುಲವುಂಟು ಹೇಳಿರೋ..."

ಶಾಸ್ತ್ರ ಪುರಾಣ ಆಗಮಗಳನ್ನು ಕರಗತಮಾಡಿಕೊಂಡಿರುವ ಬ್ರಾಹ್ಮಣರು ಶ್ರೇಷ್ಠರೆಂಬ ಮಾತನ್ನು ಆಡಬೇಡಿ ಎನ್ನುತ್ತಾನೆ ಉರಿಲಿಂಗ ಪೆದ್ದಿ. ಅಸ್ಪೃಶ್ಯನಾದ ದೊಂಬನು ಗಳೆಯಾಟ, ಮಿಣಿಯಾಟ ಇತ್ಯಾದಿ ವಿದ್ಯೆಗಳನ್ನು ಉದರ ಪೋಷಣೆಗಾಗಿ ಕಲಿತಂತೆ ಬ್ರಾಹ್ಮಣರೂ ವೇದ ಕಲಿತಿದ್ದಾರೆ. ಗುಣ, ಜ್ಞಾನ, ಧರ್ಮ, ಆಚಾರ, ಶೀಲಗಳನ್ನು ಸಾಧಿಸಿದವನೇ ಎಲ್ಲರಿಗಿಂತ ಶ್ರೇಷ್ಠ, ಹುಟ್ಟಿನಿಂದ ಬ್ರಾಹ್ಮಣನಾಗಿರುವಾತ ಅಲ್ಲ.[141] ಶಿವನ ಮುಖದಿಂದ ಬ್ರಾಹ್ಮಣ ಹುಟ್ಟಿದನೆಂಬ ಮಾತನ್ನು ಉರಿಲಿಂಗ ಪೆದ್ದಿ ಒಪ್ಪಿದರೂ, ಅವನು ಕ್ಷತ್ರಿಯನನ್ನು ಆಶ್ರಯಿಸುವುದಾಗಲಿ ಹಸುಕೊಂದು ತಿನ್ನುವುದಾಗಲಿ ಅವನಿಗೆ ತಕ್ಕುದಲ್ಲವೆನ್ನುತ್ತಾನೆ. ಅವರ ಸಂಗ ಕೂಡದು ("ಆಗದು ಅವದಿರ ಸಂಗ". ವಚನ, 207).

## 2. ಬ್ರಾಹ್ಮಣನೂ ಅಸ್ಪೃಶ್ಯನೂ ಒಂದೇ

ಜೇಡರ ದಾಸಿಮಯ್ಯನ ಪ್ರಕಾರ ಜನಿವಾರ ಧರಿಸಿದ ಬ್ರಾಹ್ಮಣನೂ ಸಂಬಳಿಗೋಲು ಹಿಡಿದ ಅಸ್ಪೃಶ್ಯನೂ ಒಂದೇ, ಆತ್ಮದ ದೃಷ್ಟಿಯಿಂದ. ಜನಿವಾರವಾಗಲಿ ಸಂಬಳಿಗೋಲಾಗಲಿ ಆಯಾ ಜಾತಿಯ ಚಿಹ್ನೆಯಾಗಿ ಸಮಾಜ ಕಲ್ಪಿಸಿದ್ದು. ಒಂದು ವೇಳೆ ಅದು ದೈವ ನಿರ್ಮಾಣವೆಂದು ಭಾವಿಸಿದರೂ, ಅದು ಮನುಷ್ಯರಾದ ನಾವು ಬಿಡಿಸಿಕೊಳ್ಳಲೆಂದು ದೈವ ಇಟ್ಟ 'ತೊಡಕು', ಆ ತೊಡಕನ್ನು ವಿವೇಕಿಗಳು ಬಿಡಿಸಿಕೊಳ್ಳುತ್ತಾರೆ.[142] ಉರಿಲಿಂಗ ಪೆದ್ದಿಯ ಪ್ರಕಾರ ಬ್ರಾಹ್ಮಣರೂ ಹೊಲೆಯರೂ ಮಲಸೋದರರು, ಜಮದಗ್ನಿ ಋಷಿಗೆ ರೇಣುಕೆ ಮತ್ತು ಮಾತಂಗಿಯಲ್ಲಿ ಹುಟ್ಟಿದವರು. ಬ್ರಾಹ್ಮಣರು ಉತ್ತಮರೆಂದು ಅವರಲ್ಲಿ ಉಪದೇಶ ಪಡೆಯುವವನೇ 'ಅಜ್ಞಾನಿ ಹೊಲೆಯ.'[143] ಜಾತಿ ಹೊಲೆಯನು ಹೊಲೆಯರ ಜಾತಿಯಲ್ಲಿ ಹುಟ್ಟಿದವನು.

---

141. "ವೇದ ಶಾಸ್ತ್ರ ಪುರಾಣಾಗಮಗ್ರಂಥಗಳ ನೋಡಿದರೆಲ್ಲರೇನು ಹಿರಿಯರೆಂಬೆನೆ? ಅಲ್ಲಲ್ಲ ನಿಲ್ಲು ಮಾಣು. ಅವರೇ ಹಿರಿಯರಾದಡೆ ನಟ್ಟುವ ಗಳೆಯಾಟ ಮಿಣಿಯಾಟ ಅದೃಶ್ಯಕರಣ ಅಗ್ನಿಸ್ತಂಭ ಆಕರ್ಷಣ ಚೌಷಷ್ಟಿ ಕಲಾವಿದ್ಯೆಯ ಸಾಧಿಸಿದ ದೊಂಬನೇನು ಕಿಱಿಯನೆ? ಇದು ಹಿರಿಯ ಕಿಱುದಿನ ಪರಿಯಲ್ಲ. ಹಿರಿದು ಕಿಱುದಿನ ಪರಿ ಬೇಱೆ ಕಾಣಿರಣ್ಣಾ. ಇವು ಉದರ ಪೋಷವಿದ್ಯೆ ಎನಿಸುವವು. ಅವರನೆಂತು ಸರಿ ಎಂಬೆನಯ್ಯ ಲಿಂಗವಂತರಿಗೆ. ಇದು ಕಾರಣ ಗುಣ ಜ್ಞಾನ ಧರ್ಮ ಆಚಾರ ಶೀಲ ಸಾಧಿಸಿದಾತನೆ ಹಿರಿಯ ಕಾಣಾ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ" – ಉರಿಲಿಂಗ ಪೆದ್ದಿಗಳ ವಚನಗಳು, ವಚನ 287.

142. ಜೇಡರ ದಾಸಿಮಯ್ಯನ ವಚನಗಳು, ವಚನ 3 – "ಮಡದಿಯ ಪ್ರಾಣಕ್ಕೆ ದೊಲೆ ಮುಡಿಯಿದ್ದಿತ್ತೆ. ಒಡೆಯನ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ. ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ. ನೀ ತೊಡಕಿಕ್ಕಿದ ತೊಡಕನೀ ಲೋಕದ ಜಡರೆತ್ತ ಬಲ್ಲರೈ ರಾಮನಾಥ."

143. ಉರಿಲಿಂಗ ಪೆದ್ದಿಗಳ ವಚನಗಳು, ವಚನ 240.

'ಅಜ್ಞಾನಿ ಹೊಲೆಯ' ಯಾವ ಜಾತಿಯಲ್ಲಾದರೂ ಹುಟ್ಟಬಹುದು. ಬಸವನ ಪ್ರಕಾರ ಬ್ರಾಹ್ಮಣರೂ ಮಾತಂಗಿಯ ಮಕ್ಕಳೇ, ಅವರು ಹೊಲೆಯರ ಬಸುರಲ್ಲಿ ಹುಟ್ಟಿ ಗೋಮಾಂಸ ತಿನ್ನುತ್ತಾರೆ ಎಂದು ಒಂದು ಕಡೆ ಹೇಳಿದರೆ, ಇನ್ನೊಂದು ಕಡೆ ಸ್ಪಷ್ಟವಾಗಿ ಅವರು ಮಾತಂಗಿಯ ಮಕ್ಕಳೆನ್ನುತ್ತಾನೆ. ಎಲ್ಲರಂತೆ 'ಹೊಲೆ'ಯಲ್ಲಿ ಹುಟ್ಟಿದ ಬ್ರಾಹ್ಮಣನು, ಸತ್ತದ್ದನ್ನು ಎಳೆದು ಹಾಕುವ ಹೊಲೆಯನನ್ನು ಹೊಲೆಯನೆಂದು ಕಡೆಗಣಿಸುವುದು ಬಸವಣ್ಣನಿಗೆ ಹಾಸ್ಯಾಸ್ಪದವಾಗಿ ಕಾಣಿಸಿದೆ. ವಿಪ್ರರು ಬದುಕಿದ ದನವನ್ನು ತಾವೇ ಕೊಲ್ಲುತ್ತಾರೆ. ಅವರು ತಾವು ಕಲಿತಂತೆ ನಡೆಯರು, ಶಾಸ್ತ್ರ ವೇದಗಳೊಂದೂ ಅವರಿಗೆ ಅರ್ಥವಾಗಿಲ್ಲ.[144] ಹಾವಿನಹಾಳ ಕಲ್ಲಯ್ಯನ ಪ್ರಕಾರ, ಬ್ರಾಹ್ಮಣ ದೊದಲಾಗಿ ಶ್ವಪಚ ಕೊನೆಯಾಗಿ ಎಲ್ಲರೂ ಒಂದೇ ಬಗೆಯಾಗಿ ಹುಟ್ಟಿದವರು (ಕಿವಿಯಲ್ಲಿ ಹುಟ್ಟಿದವರು ಯಾರೂ ಇಲ್ಲ ಎಂಬ ಬಸವಣ್ಣನ ಮಾತು ಜ್ಞಾಪಿಸಿಕೊಳ್ಳಬಹುದು). ಅವರಿಗೆಲ್ಲ ಆಹಾರ, ನಿದ್ರೆ, ಭಯ, ಮೈಥುನ, ಪುಣ್ಯ ಪಾಪ, ಸ್ವರ್ಗ ನರಕ ಒಂದೇ. ಜ್ಞಾನವೇ ಸತ್ಕುಲ, ಅಜ್ಞಾನವೇ ದುಷ್ಕುಲ.[145] ಅದೇ ವಚನಕಾರನ ಪ್ರಕಾರ ಗೋಮಾಂಸವನ್ನು ಬ್ರಾಹ್ಮಣನಿಂದ ಉಳಿದವರು ತಿನಕಲಿತರು.[146] ಬೊಂತಾದೇವಿ ಎಂಬಾಕೆ ಹೇಳುವಂತೆ ಊರ ಒಳಗಣ ಬಯಲು, ಊರ ಹೊರಗಣ ಬಯಲು ಎಂದಾಗಲಿ, ಬ್ರಾಹ್ಮಣ ಬಯಲು ಹೊಲೆಯ ಬಯಲೆಂದಾಗಲಿ ಇಲ್ಲ; ಇರುವ ಬಯಲು ಒಂದೇ.[147] ಬ್ರಾಹ್ಮಣ, ಹೊಲೆಯ ಎಂಬ ಕೇರಿಗಳು ನಾವು ಮಾಡಿಕೊಂಡಿರುವ 'ಭಿತ್ತಿ', ಕೃತಕ ಏರ್ಪಾಟು. ಹಾವಿನಹಾಳ ಕಲ್ಲಯ್ಯನ ಪ್ರಶ್ನೆ

---

144. "ಏನಯ್ಯಾ ವಿಪ್ರರು ನುಡಿದಂತೆ ನಡೆಯರು, ಇದೆಂತಯ್ಯಾ! ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ, ಕೂಡಲಸಂಗಮದೇವಾ, ಹೊಲೆಯರ ಬಸುಱಲ್ಲಿ ವಿಪ್ರರು ಹುಟ್ಟಿ ಗೋಮಾಂಸವ ತಿಂಬುವರೆಂಬುದಕ್ಕೆ ಇದೆ ದೃಷ್ಟ" (ಬಸವಣ್ಣನವರ ಷಟ್ಸ್ಥಲದ ವಚನಗಳು. ವಚನ 574); "ಹೊಲೆಯೊಳಗೆ ಹುಟ್ಟಿ ಕುಲವನಱಸುವ ಎಲವೋ ಮಾತಂಗಿಯ ಮಗ ನೀನು. ಸತ್ತುದನೆಳೆವನೆತ್ತಣ ಹೊಲೆಯ? ಹೊತ್ತು ತಂದು ನೀವು ಕೊಲುವಿರಿ. ಶಾಸ್ತ್ರವೆಂಬುದು ಹೋತಿಂಗೆ ಮಾರಿ, ವೇದವೆಂಬುದು ನಿಮಗೆ ತಿಳಿಯದು..." (ಅದೇ. ವಚನ 575).

145. ಸಕಲ ಪುರಾತನರ ವಚನಗಳು, 2. ಪು. 724 – "ಬ್ರಾಹ್ಮಣ ಮೊದಲಾಗಿ ಶ್ವಪಚ ಕಡೆಯಾಗಿ ಎಲ್ಲರಿಗೂ ಜನನವೊಂದೆ, ಆಹಾರ ನಿದ್ರೆ ಭಯ ಮೈಥುನ ಒಂದೆ. ಪುಣ್ಯ ಪಾಪವೊಂದೆ ಸ್ವರ್ಗ ನರಕ ಒಂದೆ. ಬೇಱೆಂಬ ಭಂಗಿತರು ನೀವು ಕೇಳಿರೆ. ಅಱಿವೇ ಸತ್ಕುಲ. ಮಱವೇ ದುಷ್ಕುಲ..."

146. ಅದೇ, ಪು. 731.

147. ಶಿವಶರಣೆಯರ ವಚನಗಳು, ಪು. 337 – "ಊರ ಒಳಗಣ ಊರ ಹೊರಗಣ ಬಯಲುಂಟೆ? ಎಲ್ಲಿ ನೋಡಿದಡೆ ಬಯಲೊಂದೆ. ಭಕ್ತಿಯಿಂದ ಒಳ ಹೊಱಗೆಂಬ ನಾಮವೈಸೆ. ಎಲ್ಲಿ ನೋಡಿದಡೆ ಕರೆದಡೆ ಓ ಎಂಬಾತನೆ ಬಿಡಾಡಿ."

ಇದು–ಹೊಲ ದೊಡ್ಡದೋ ಬೀಜ ದೊಡ್ಡದೋ? ಬೀಜ ಮುಖ್ಯವೆಂದಾದರೆ ಬ್ರಾಹ್ಮಣನ ಹೆಂಡತಿ ಜಾರೆಯಾಗಿ ಶ್ವಪಚನಿಂದ ಮಗುವನ್ನು ಪಡೆದರೆ ಆ ಮಗು ಉಪನಯನ, ಬ್ರಹ್ಮಚರ್ಯ, ವೇದಾಧ್ಯಯನ, ಅಗ್ನಿಹೋತ್ರ, ಯಜನ, ಯಾಜನಕ್ಕೆ ಅರ್ಹನಾಗುತ್ತದೆ. ಆದರೆ ವಾಸ್ತವವಾಗಿ ಅರ್ಹನಾಗಬಾರದು. ಕ್ಷೇತ್ರ ಮುಖ್ಯವೆಂದು ದಾದರೆ ಒಬ್ಬ ಬ್ರಾಹ್ಮಣ ಚಂಡಾಲ ಸತಿಯನ್ನು ಕೂಡಿ ಅವಳಲ್ಲಿ ಮಗು ಹುಟ್ಟಿದರೆ ಆ ಮಗುವಿಗೆ ಮೇಲಿನ ಬ್ರಾಹ್ಮಣ್ಯದ ಎಲ್ಲ ಸಂಸ್ಕಾರಗಳು ದೊರಕುವುದಿಲ್ಲ; ನ್ಯಾಯವಾಗಿ ದೊರಕಬೇಕು. ಈ ಎಲ್ಲ ತೊಡಕುಗಳು ಜಾತಿಯಿಂದ ಉದ್ಭವವಾಗಿವೆ. ನಿಜವಾದ ಶಿವಭಕ್ತನಿಗೆ ಇಂತಹ ಜಾತಿ ತೊಡಕಿಲ್ಲ. ಎಲ್ಲ ಜಾತಿಯ ಜನರೂ ಗುರು ಕರುಣವನ್ನು ಹೊಂದಿ ಶುದ್ಧರಾಗುತ್ತಾರೆ, ಅವರು ಮಾತ್ರ ಎಲ್ಲ ಬಗೆಯ ಸಂಸ್ಕಾರಗಳಿಗೆ ಅರ್ಹರು.[148]

## 3. ಭಕ್ತನಾದ ಹೊಲೆಯ ಬ್ರಾಹ್ಮಣನಿಗಿಂತ ಶ್ರೇಷ್ಠ

ಸಂಗಮೇಶ್ವರ ಅಪ್ಪಣ್ಣನ ಅಭಿಪ್ರಾಯದಲ್ಲಿ ಬ್ರಾಹ್ಮಣರು ವೇದಗಳನ್ನು ಬಲ್ಲವ ರಾದರೂ ಭಕ್ತಿಪಥ ಅವರಿಗೆ ತಿಳಿಯದು. ಹಾಲಿನೊಳಗಣ ಸೌಟಿನಂತೆ: ಸೌಟಿಗೆ ಹಾಲಿನ ರುಚಿ ಗೊತ್ತಾಗದು. ಅವರು ಓದಿದ ವೇದಗಳ ಸಾರವನ್ನು (ವೇದಗಳನ್ನು ಓದದ) ಮಾದಾರ ಚನ್ನಯ್ಯ, ಮಡಿವಾಳ ಮಾಚಯ್ಯ, ಡೋಹರ ಕಕ್ಕಯ್ಯಗಳು ಬಲ್ಲರು. "ಶ್ವಪಚನಾದಡೇನು ಶಿವಭಕ್ತನೆ ಕುಲಜನೆಂಬುದು."[149] ಸಕಲೇಶ ಮಾದರಸನು (ವಚನ. 16) ಶಿವಭಕ್ತರು ತಮ್ಮ ಏಕಾಂತದ ಪೂಜಾ ಸಮಯದಲ್ಲಿ ತೆರೆಯನ್ನು ಕಟ್ಟಬೇಕೆಂದೂ ಪಾಪಿ, ಕೋಪಿ, ಶಿವಾಚಾರ ಭ್ರಷ್ಟ, ಅಧಿಕಾರ ನಡಸುವಾತ (ಆಳಿಗೊಂಬವನು), ವೈದಿಕವಿಪ್ರ, ಕೆಟ್ಟ ದೃಷ್ಟಿಯವನು, ಅನಾಚಾರಿ, ಮೂರ್ಖ, ಗುರು ನಿಂದಕ ಇವರ ಕಣ್ಣಿಗೆ ಅವನ ಪೂಜೆ ಬೀಳಬಾರದೆಂದು ಹೇಳು ವಲ್ಲಿ, ಬ್ರಾಹ್ಮಣನನ್ನು ಯಾವ ಮಟ್ಟದಲ್ಲಿ ಇಡುತ್ತಾನೆಂಬುದನ್ನು ಗಮನಿಸಬೇಕು. ಆ ದೂರವಿಡಬೇಕಾದ ಜನರ ಪಟ್ಟಿಯಲ್ಲಿ ಅಸ್ಪೃಶ್ಯರ ಹೆಸರಿಲ್ಲದಿರುವುದನ್ನೂ ಗುರುತಿಸ ಬೇಕು.

ಅಸ್ಪೃಶ್ಯ ಜಾತಿಯ ಕಾಳವ್ವೆ ಪ್ರಕಾರ, ಹಾಲು ಕೊಡುವ ಹಸುವನ್ನು ತಿನ್ನುವ ಬ್ರಾಹ್ಮಣನಿಗಿಂತ ಸತ್ತ ಹಸು ತಿನ್ನುವ ಹೊಲೆಯ ಮಾದಿಗರು ಹೇಗೆ ಕೀಳಾಗುತ್ತಾರೆ? ಬ್ರಾಹ್ಮಣ ತಿಂದುದು ನಾಯಿ ನೆಕ್ಕಿ ಹೋಯಿತು, ಹುಲ್ಲಿಗೆ ಗೊಬ್ಬರವಾಯ್ತು. ಮಾದಿಗರು ಉಂಡುದು ಹುಲ್ಲಿಗೂ ಶೋಭಿತವಾಯಿತು, ಬ್ರಾಹ್ಮಣನಿಗೂ ಶೋಭಿತ ವಾಯಿತು. ಏಕೆಂದರೆ ಬ್ರಾಹ್ಮಣರು ಅವರು ಮಾಡಿದ ಸಗ್ಗಳೆಯಲ್ಲಿನ (=ಚರ್ಮದ

---

148. ಸಕಲ ಪುರಾತನರ ವಚನಗಳು, II, ಪು. 725.

149. ಸಕಲ ಪುರಾತನರ ವಚನಗಳು, III, ಪು. 229, 300.

ಚೀಲ) ನೀರು ತುಪ್ಪ ಶುದ್ಧವೆಂದು ಕುಡಿಯುತ್ತಾರೆ.[150] ಬೇರೆ ಬೇರೆ ಯುಗಗಳಲ್ಲಿ ಉದ್ದಕ್ಕೂ ಮಾಂಸ ತಿನ್ನುತ್ತ ಬಂದಿರುವ ಒಂಟಿ ಬ್ರಾಹ್ಮಣನನ್ನು ಕಂಡು ಶರಣಾರ್ಥಿ ಎಂದರೆ ಮುಂದೆ ಚಿರಕಾಲ ಹಂದಿಯ ಹೊಟ್ಟೆಯಲ್ಲಿ ಹುಟ್ಟುತ್ತಿರಬೇಕಾಗುತ್ತದೆ ಎನ್ನುತ್ತಾಳೆ ಆಕೆ.[151] ವೀರಶಂಕರ ದಾಸಯ್ಯ ಎಂಬಾತ ಏಳೂವರೆ ಪುಟಗಳ ಸುದೀರ್ಘ ವಚನದಲ್ಲಿ[152] ಅದೇ ಭಾವವನ್ನು ವ್ಯಕ್ತಪಡಿಸಿದ್ದಾನೆ. ಬ್ರಾಹ್ಮಣರ ಪ್ರಕಾರ ಹುಟ್ಟಿದ ಯಾವುದೇ ಮಗು ಹೊಲೆಯ, ತಾಯಿ ಹೊಲತಿ: ದೊದಲ ಹನ್ನೆರಡು ದಿನ ತಾಯಿ ಮಗುವಿಗೆ ಶುದ್ಧಿಮಾಡುತ್ತಾರೆ. ಮುಂಜಿ ಮಾಡುವ ಮುನ್ನ ಎಲ್ಲರೂ ಕೀಳು, ಬಳಿಕ ಮೇಲು ಎನ್ನುತ್ತಾರೆ. "ಅಪವಿತ್ರ ಕಾಯಕ್ಕೆ ಕುಲವಿಲ್ಲ". ದೇಹಕ್ಕೆ ಕುಲವಿದ್ದರೆ ಕೀಳು ಜಾತಿಯ ದೇಹದಲ್ಲಿ ರಕ್ತ, ಮೇಲು ಜಾತಿಯ ದೇಹದಲ್ಲಿ ಹಾಲು ಇರಬೇಕು.[153] ಆದರೆ ಎಲ್ಲರ ದೇಹವೂ ಒಂದೇ. ಮಟ್ಟಿಯನ್ನು ಧರಿಸಿ ವಿಷ್ಣುವನ್ನು ಪೂಜಿಸಿ ಮುಡುಹನ್ನು ಸುಡಿಸಿಕೊಳ್ಳುವುದರಿಂದ ಬ್ರಾಹ್ಮಣರೇ ಡೋಹರ ಮುಂತಾದ ಹೀನಜಾತಿಗಳು; ಅವರಿಗಿಂತ "ಏಳು ಬೆಲೆ ಹೊರಗಾದ ಹೊಲೆಯನೆ ಉತ್ತಮ ಕುಲಜ."[153.1] "ಶಿವಭಕ್ತರೆ ಕುಲಜರು".

## 4. ಭಗವಂತನೇ ಹೊಲೆಯರ ಶ್ರೇಷ್ಠತೆಯನ್ನು ತೋರಿದ್ದಾನೆ

ಶಿವನೇ ಮಾದಾರ ಚನ್ನಯ್ಯನ ಮನೆಯಲ್ಲಿ ಉಣ್ಣುವ ಮೂಲಕ ಹೊಲೆಯರ ಶ್ರೇಷ್ಠತೆಯನ್ನು ತೋರಿದ್ದಾನೆ. ಹಾವಿನಹಾಳ ಕಲ್ಲಯ್ಯ[154]ನ ಪ್ರಕಾರ "ಬಲ್ಲಿದ

---

150. ಶಿವಶರಣೆಯರ ವಚನಗಳು, ಪು. 391.

151. ಅದೇ.

152. ಸಕಲ ಪುರಾತನರ ವಚನಗಳು, III, ಪು. 272.

153. ಬಸವಣ್ಣ ಹೊಲೆಯ ಶಿವನಾಗಿಮಯ್ಯನ ದೇಹದಲ್ಲಿ ಹಾಲು, ಬ್ರಾಹ್ಮಣನ ದೇಹದಲ್ಲಿ ರಕ್ತ ಕೀವು ಇದೆಯೆಂದು ತೋರಿಸುವುದರ ಮೂಲಕ ಶಿವನಾಗಿಮಯ್ಯನ ಶ್ರೇಷ್ಠತೆಯನ್ನು ಸ್ಥಾಪಿಸಿದನೆಂಬ ಪವಾಡವನ್ನು ಹರಿಹರ ರೂಪಿಸಿದ್ದಾನೆ. ಹರಿಹರನದು ಕಲ್ಪಿತ ಪವಾಡ; ಆದರೆ ವೀರ ಶಂಕರದಾಸಿಮಯ್ಯನದು ವಾಸ್ತವ ದೃಷ್ಟಿ.

153.1 ಸಮಯಪರೀಕ್ಷೆಯ (11.103) ಮಾತನ್ನು ನೋಡಿದರೆ, ಇದರ ಪಾಠ "ಏಳು ಬೇಲಿ ಹೊರಗಾದ ಹೊಲೆಯನೆ" ಎಂದಿರಬೇಕು. ಈ ಬಗ್ಗೆ ಹಿಂದೆ ಆಗಲೆ ಪ್ರಸ್ತಾಪ ಬಂದಿದೆ.

154. "ಹಾ ಹಾ ವೇದವೆ ತತ್ವವಾದಡೆ ಮಾದಾರನ ಮನೆಯಲುಂಡವನೊಬ್ಬ ...ಅಕ್ಕುಲವೆಂಮೊಡೆ ಹೊಕ್ಕ ಕಕ್ಕಯ್ಯಗಳ ಮನೆಯ. ಅಕ್ಕಟಾ ನಿಮ್ಮ ತರ್ಕ ಮುಕ್ಕಾಯಿತು. ಲೋಕವಜೆಯಲಿ, ಕಲ್ಲಲಿಟ್ಟು ಕಾಲಲೊದೆದರೆ ಅಲ್ಲಿ ಮೂರುತಿ ನುಡಿಯಿತ್ತಲ್ಲಯ್ಯ, ಬಲ್ಲಡಿದನು ದ್ವಿಜರು ನೀವೆಲ್ಲರು ಹೇಳಿರೆ. ಲಿಂಗಾಚಾರಿಗಳು ನಿಸ್ಸೀಮರಯ್ಯಾ" (ಸಕಲ ಪುರಾತನರ ವಚನಗಳು, II, ಪು. 731).

ನಡೆದುದೇ ಬಟ್ಟೆ", ಶ್ರೇಷ್ಠರು ನಡೆದುದೇ ದಾರಿ, ವೇದ ಅಲ್ಲ. ಮಾದಾರ ಚನ್ನಯ್ಯನ ಭಕ್ತಿಮಾರ್ಗವೇ ಮಾರ್ಗ.

## 5. 'ಬ್ರಾಹ್ಮಣ' ಮಾತಿಗೆ ಬೇರೊಂದು ಅರ್ಥ

ಉರಿಲಿಂಗ ಪೆದ್ದಿಯ ವ್ಯಾಖ್ಯಾನದ ಪ್ರಕಾರ, ಬ್ರಾಹ್ಮಣ ಶಬ್ದವು ಜಾತಿವಾಚಕ ವಲ್ಲ. ಅವನ ವಾದವನ್ನು ಹೀಗೆ ಸಂಗ್ರಹಿಸಬಹುದು.[155]

ಬ್ರಾಹ್ಮಣನ ಮಗ ಬ್ರಾಹ್ಮಣ, ಕ್ಷತ್ರಿಯನ ಮಗ ಕ್ಷತ್ರಿಯ, ವೈಶ್ಯನ ಮಗ ವೈಶ್ಯ, ಶೂದ್ರನ ಮಗ ಶೂದ್ರ.

ಶ್ರುತಿಯು "ಮಹಾಬ್ರಾಹ್ಮಣಂ ಈಶಾನಂ", "ವಿರೂಪಾಕ್ಷಂ ದ್ವಿಜೋತ್ತಮಂ" ಇಂತಹ ಮಾತುಗಳ ಮೂಲಕ ಶಿವನೇ ಮಹಾಬ್ರಾಹ್ಮಣ ಎನ್ನುತ್ತದೆ.

ಶಿವರಹಸ್ಯವು "ಗುರುರ್ದೇವೋ ಮಹಾದೇವೋ" ಎನ್ನುತ್ತದೆ. ಎಂದರೆ ಗುರುವೇ ಶಿವ.

ಗುರುವಿನ ಕರಕಮಲದಲ್ಲಿ ಹುಟ್ಟಿದ ಶಿಷ್ಯ ಅವನಿಗೆ ಮಗನಾಗಬೇಕು. ಆದ್ದರಿಂದ, ಆ ಶಿಷ್ಯ ಯಾವ ಜಾತಿಯವನಾದರೂ ಬ್ರಾಹ್ಮಣನೇ.

ಮೇಲಿನ ತರ್ಕವನ್ನು ಹೀಗೆ ವಿವರಿಸಬಹುದು. ಶಿಷ್ಯನು ಗುರುವಿನ ಕರಸಂಜಾತನಾದ್ದರಿಂದ ಅವನಿಗೆ ಮಗನಾಗಬೇಕು. ಆ ಕಾರಣ ಗುರುವಿನ ಜಾತಿಯೇ ಶಿಷ್ಯನ ಜಾತಿ. ಗುರುವು ಶಿವನೇ ಸರಿ. ಶಿವನ ಜಾತಿಯೇ ಗುರುವಿನ ಜಾತಿ. ಶಿವನನ್ನು ಮಹಾಬ್ರಾಹ್ಮಣ ಎಂದು ವೇದ ಕರೆದಿದೆ, ಆ ಕಾರಣ ಶಿವನು ಬ್ರಾಹ್ಮಣ, ಎಂದರೆ ಶಿಷ್ಯನೂ ಬ್ರಾಹ್ಮಣನೇ. ಲಿಂಗವಂತ ಶಿವಭಕ್ತರೆಲ್ಲರೂ, ಅವರು ಯಾವ ಜಾತಿಗೆ ಸೇರಿದ್ದರೂ, ಬ್ರಾಹ್ಮಣರೆನ್ನಿಸಿಕೊಳ್ಳುತ್ತಾರೆ. ಅವರೆಲ್ಲ ಎಲ್ಲ ದೃಷ್ಟಿಯಿಂದಲೂ ಸಮಾನರು. ಹಾವಿನಹಾಳ ಕಲ್ಲಯ್ಯನ ಪ್ರಕಾರ ಶ್ವಪಚ, ಮಚ್ಚಿಗ, ಬೋಯ, ಅಗಸ, ಕಮ್ಮಾರ, ನಾವಿದರೂ ಲಿಂಗಭಕ್ತರಾದ ಕಾರಣ ಅವರು 'ದ್ವಿಜರು' ಮತ್ತು ಕುಲಜರು.[156]

## 6. ಭಕ್ತ ಹೊಲೆಯರು ಉಳಿದವರಿಗೆ ಸಮಾನ ಅಥವಾ ಇನ್ನೂ ಶ್ರೇಷ್ಠ

ಬಸವಣ್ಣನ ವಾದ ಹೀಗಿದೆ[157] : ಚಕ್ರವರ್ತಿ ಬಂದು ಹೊಲೆಗೇರಿಯಲ್ಲಿ ಬಂದು ಬೀಡುಬಿಟ್ಟರೆ ಅದು ಹೊಲೆಗೇರಿ ಎಂದು ಅನ್ನಿಸಿಕೊಳ್ಳುವುದಿಲ್ಲ (ಅದು ಶುದ್ಧ

155. ಉರಿಲಿಂಗಪೆದ್ದಿಗಳ ವಚನಗಳು, ವಚನ 249.

156. ಸಕಲ ಪುರಾತನರ ವಚನಗಳು, II, ಪು. 732.

157. **'ಬಂಮು ಬಲ್ಲಹ ಬಿಡಲು ಹೊಲಗೇರಿ ಎಂಬ ಹೆಸರೊಳವೆ?**
**ಅಯ್ಯಾ ಲಿಂಗವಿದ್ದವರ ಮನೆ ಕೈಲಾಸವೆಂದು ನಂಬಬೇಕು...'**
–ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ 607.

ವಾಗುತ್ತದೆ, ಆ ಕ್ಷಣಕ್ಕೆ ರಾಜಧಾನಿಯೆನ್ನಿಸಿಕೊಳ್ಳುತ್ತದೆ.) ಅಂತೆಯೇ ಲಿಂಗವನ್ನು ಧರಿಸಿದ ಯಾವನೇ ಆಗಲಿ ಅವನು ಪವಿತ್ರನಾಗುತ್ತಾನೆ, ಆತನ ಮನೆ 'ವಾರಣಾಸಿ' ಆಗುತ್ತದೆ. ಜಾಬಾಲ ಶ್ರುತಿಯೇ ಹೇಳುತ್ತದೆ–ಶಿವನನ್ನು ಒಮ್ಮೆ ನೆನೆದರೆ ಸಾಕು, ಹೊಲೆಯ ಹೊಲೆಯನಾಗಿರುವುದಿಲ್ಲ. ಅಂತಹ ವ್ಯಕ್ತಿಯೊಡನೆ ಇರುವುದು, ಜೊತೆ ಉಣ್ಣುವುದು ಶ್ರೇಯಸ್ಕರ.[158] ವೇದಗಳನ್ನು ಓದಲು ಶೂದ್ರನು ಅನರ್ಹನಾದರೆ, ಭಸ್ಮವನ್ನು ಧರಿಸದ ವಿಪ್ರನು ಶಿವಪೂಜೆ ಮಾಡಲು ಅನರ್ಹ.[159] ಶಿವಭಕ್ತಿಯ ಆಚಾರ ವನ್ನು ನಡೆಸುವ ವ್ಯಕ್ತಿ 'ಆವ ಜಾತಿಯಲ್ಲಾದರೂ' ಇರಲಿ, ಅಂತಹ ವ್ಯಕ್ತಿ ಬಿಟ್ಟ ಬಟ್ಟೆ ಯನ್ನು ಧರಿಸುವೆ, ಆತನ ಪಾದರಕ್ಷೆಯನ್ನು ತಲೆ ಮೇಲೆ ಹೊತ್ತು ಬದುಕುವೆ, ಆತನ ದಾಸನ ದಾಸನಾಗುತ್ತೇನೆ ಎನ್ನುತ್ತಾನೆ ಅಲ್ಲಮ.[160] 'ಕುಲಸೂತಕ' ಬಿಡದವನು, ಅಲ್ಲಮನ ಪ್ರಕಾರ, ಭಕ್ತನಲ್ಲ.[161] ಭಕ್ತರ ಕುಲವನ್ನು ಹಿಡಿದು ಹಂಗಿಸುವಾತನು ಭಕ್ತ ನಲ್ಲ, ಕಾಳವ್ವೆ ಪ್ರಕಾರ.[162] ಶಿವಭಕ್ತ ಶ್ವಪಚನು ಮುನಿಶ್ರೇಷ್ಠ; ದ್ವಿಜರಿಂದ ಅಧಿಕ. ಶಿವ ಭಕ್ತಿ ಹೀನನಾದ ದ್ವಿಜನು ಶ್ವಪಚಾಧಮನು ("ಶ್ವಪಚೋಪಿ ಮುನಿಶ್ರೇಷ್ಠಃ, ಶಿವಭಕ್ತ್ಯಾ ದ್ವಿಜಾಧಿಕಃ, ಶಿವಭಕ್ತಿವಿಹೀನಸ್ತು ದ್ವಿಜೋಪಿ ಶ್ವಪಚಾಧಮಃ").[163] ಶಿವಭಕ್ತರಾದ ವಿಪ್ರ, ಅಂತ್ಯಜ ಎಲ್ಲರೂ ಸಮಾನರು ಎನ್ನುತ್ತಾನೆ ಬಸವ.[164] ಶಿವನನ್ನು ನಂಬದವನೇ ಹೊಲೆಯ ("ನಿಮ್ಮ ನಂಬದವ ಹೊಲೆಯ"). ಶಿವನನ್ನು ನಂಬಿ ಹೊಲೆಯನೋ ಮಾದಿಗನೋ ಭಕ್ತನಾದರೆ ಆತನ ಮನೆಯ ನಾಯಿಗೆ ಪಂಚಮಹಾವಾದ್ಯದ ಸನ್ಮಾನವನ್ನು ಮಾಡುತ್ತೇನೆ, 'ಉಘೇ ಚಾಂಗು ಭಲರೆ' ಎಂದು ನಾನೇ ಜಯಘೋಷ ಮಾಡುತ್ತೇನೆ ಎನ್ನುತ್ತಾನೆ,[165] ಬಸವ. ಸಿದ್ಧರಾಮ ಹೇಳುತ್ತಾನೆ–"ಕುಲದಲ್ಲಿ ಶೂದ್ರ

---

158. ಸಾನಂದ ಚರಿತ್ರೆ, ಪು. 183.

159. ಅದೇ, ಪು. 206.

160. ಅಲ್ಲಮನ ವಚನ ಚಂದ್ರಿಕೆ. ಸಂ: ಎಲ್. ಬಸವರಾಜು. ಮೈಸೂರು, 1960. ಪು. 162.

161. "ಕುಲಸೂತಕ ಉಳ್ಳನ್ನಕ್ಕ ಭಕ್ತನಲ್ಲ." ಅದೇ, ಪು. 153.

162. ಶಿವಶರಣೆಯರ ವಚನಗಳು, ಪು. 388 – "ತೂಬರದ ಕೊಳ್ಳಿಯಂತೆ ಉರಿವಾತ ಭಕ್ತನೆ, ಹುಸಿದು ತಂದು ಮಾಡುವಾತ ಭಕ್ತನೆ, ಭಕ್ತರ ಕುಲವನೆತ್ತಿ ನಿಂದಿಸುವಾತ ಭಕ್ತನೆ."

163. ಸಾನಂದ ಚರಿತ್ರೆ, ಪು. 158.

164. "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ, ಹಾರುವ ದೊದಲು ಶ್ವಪಚ ಕಡೆಯಾಗಿ ಭವಿಯಾದವರನೊಂದೇ ಎಂಬೆ" – ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ 710.

165. ಅದೇ, ವಚನ 595 – "ಹೊಲೆಯ ಮಾದಿಗ ಭಕ್ತನಾದರೆ ಆತನ ಮನೆಯ ಸೊಣಗಂಗೆ ಪಂಚಮಹಾವಾದ್ಯದಲ್ಲಿ ಸನ್ಮಾನವ ಮಾಡೆನೆ? ನೆಲವನುಗ್ಘಡಿಪೆ ಉಘೇ ಚಾಂಗು

ನಾದಡೇನು, ಮನದಲ್ಲಿ ಮಹಾದೇವ ನೆಲೆಗೊಂಡವನೆ ವೀರಶೈವ ನೋಡಾ."[166] ಕುಲದ ಬಗ್ಗೆ ಅದೇ ವಚನಕಾರ ಕೆಲವು ಸ್ಪಷ್ಟೋಕ್ತಿಗಳನ್ನು ಹೇಳಿದ್ದಾನೆ. ಕಕ್ಕಯ್ಯ, ಚನ್ನಯ್ಯರ ಕುಲಗಳನ್ನು ನೋಡಬೇಡಿ. "ಅವರ ನಡೆ ನೋಳ್ಪಡೆ ನಡೆಯುವವರು ತ್ರಿಲೋಕದಲ್ಲಿಲ್ಲ."[167] ಮಧುವಯ್ಯ ಬ್ರಾಹ್ಮಣ, ಹರಳಯ್ಯ ಚಂಡಾಲನಾದರೂ ಅವರ ಕುಲಗಳು ಅವರ ಸ್ನೇಹಕ್ಕೆ ಅಡ್ಡಿ ಬರಲಿಲ್ಲವೆಂದು ಸಿದ್ಧರಾಮ ಸೂಚಿಸಿದ್ದಾನೆ. ದುರ್ವಾಸ ಮಚ್ಚಿಗ, ಊರ್ವಶಿ ದೇವಾಂಗನೆ, ಪರಾಶರ ಚಂಡಾಲ, ಕುಸುಮಗಂಧಿ (ಮತ್ಸ್ಯಗಂಧಿ)ಯು ಕಬ್ಬಿಲಗಿತ್ತಿ–ಆದರೂ ಅವರು ವಂದ್ಯರು.[168] ಬೇಡನಾದ ವಾಲ್ಮೀಕಿಯ "ಶ್ಲೇಷ್ಮಪ್ರಸಾದವೆಲ್ಲ ಸಂಸ್ಕೃತಮಯವಾಯಿತು ಮರ್ತ್ಯಕ್ಕೆ."[169] ಕುಲದ ಬಗ್ಗೆ ಹೋರಾಡುವುದು ಹಾಸ್ಯಾಸ್ಪದ.

## 7. ದುಷ್ಟನೇ ಹೊಲೆಯ, ಅಕುಲಜ; ಶಿಷ್ಟನೇ ಸತ್ಕುಲ ಪ್ರಸೂತ

ಬಸವನ ಪ್ರಕಾರ ಕೊಲ್ಲುವವನೇ ಮಾದಿಗ, ಹೊಲಸು ತಿನ್ನುವವನೇ ಹೊಲೆಯ. ಅವನು ಯಾವ ಜಾತಿಯವನೇ ಆಗಿರಲಿ, "ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಕೂಡಲ ಸಂಗನ ಶರಣರೇ ಕುಲಜರು."[170] ಸಿದ್ಧರಾಮನ ಪ್ರಕಾರ ಮದ್ಯಪಾನ, ಮಾಂಸಭಕ್ಷಣ, ಪರಸ್ತ್ರೀಸಂಗ, ಪರಧನಾಪಹರಣ ಮಾಡುವವನೇ ಭವಿ, ಬರಿಯ ಇಷ್ಟಲಿಂಗವಿಲ್ಲದವನಲ್ಲ. ವ್ಯಕ್ತಿ ಒಮ್ಮೊಮ್ಮೆ ಬಹಿರಂಗದಲ್ಲಿ ಇಷ್ಟಲಿಂಗವಿಲ್ಲ ದವನಿರಬಹುದು. ಅಂತರಂಗದಲ್ಲಿ ಲಿಂಗಲೋಲುಪ್ತನಾಗಿರಬಹುದು. ನಿಜವಾದ ಮಾನವೀಯತೆ ಮತ್ತು ಭಕ್ತಿಗಳೇ ವ್ಯಕ್ತಿಯನ್ನು ಯೋಗ್ಯನನ್ನಾಗಿ ಮಾಡುವುದು.[171]

---

ಭಲರೆ ಎಂದು. ಕುಲದಲಧಿಕ ಹಾರುವಂಗೆ ಸಿದ್ಧಿಯೈಸಲೆ. ನಿಮ್ಮ ಶರಣರ ಮಹಿಮೆ ಘನಕ್ಕೆ ಘನ, ಎಲೆ ಕೂಡಲ ಸಂಗಮದೇವಾ, ನಿಮ್ಮ ನಂಬದವ ಹೊಲೆಯ." ತಮಿಳುನಾಡಿನ ಶಿವಭಕ್ತ ಚೇರಮ ದೊರೆಯು ಒಮ್ಮೆ ಸೌಳು ಮಣ್ಣು ಹೊತ್ತು ಮೈ ಬೆಳ್ಳಗಾದ ಅಗಸ ತಾನು ಅಗಸನೆಂದೇ ಹೇಳಿಕೊಂಡರೂ, ವಿಭೂತಿ ಧರಿಸಿದ ಶಿವಭಕ್ತನೆಂದು ಅವನಿಗೆ ನಮಸ್ಕರಿಸಿದನೆಂದು ಕತೆಯಿದೆ. (–ಎಸ್. ವಿದ್ಯಾಶಂಕರ : ಚೇರಮನ ಕಥೆಯ ತೌಲನಿಕ ಅಧ್ಯಯನ. ಬೆಂಗಳೂರು. 1982, ಪು. 9).

166. ಶ್ರೀ ಸಿದ್ಧರಾಮೇಶ್ವರ ವಚನಗಳು, ವಚನ 517.

167. ಅದೇ, ವಚನ 518.

168. ಅದೇ ವಚನ 519.

169. ಅದೇ, ವಚನ 521. ಸಂಸ್ಕೃತ ರಾಮಾಯಣದ ಕರ್ತೃ ಒಬ್ಬ 'ಬೇಡ.'

170. ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ 590 – "ಕೊಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ, ಕುಲವೇನೋ ಅವಂದಿರ ಕುಲವೇನೋ, ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು."

171. ಶ್ರೀ ಸಿದ್ಧರಾಮೇಶ್ವರ ವಚನಗಳು, ವಚನ 82.

ಮಾದಾರ ಚನ್ನಯ್ಯ ಹೇಳುತ್ತಾನೆ–ಇರುವ ಕುಲಗಳು ಎರಡೇ : ನೀಚಕುಲ, ಶ್ರೇಷ್ಠ ಕುಲ. ಉತ್ತಮಗುಣದವರು ಶ್ರೇಷ್ಠಕುಲದವರು, ಅಧಮಗುಣದವರು ನೀಚಕುಲದವರು. ಬ್ರಹ್ಮವನ್ನರಿತವನು ಬ್ರಾಹ್ಮಣ, ಸರ್ವ ಜೀವಿಗಳನ್ನು ಕೊಲ್ಲುವವನು ಸಮಗಾರ.[172] ಅದೇ ವಚನಕಾರ[173] ಹೇಳುವ "ಆಚಾರವೇ ಕುಲ, ಅನಾಚಾರವೆ ಹೊಲೆ" ಎಂಬ ಮಾತೂ ಇಲ್ಲಿ ಉಲ್ಲೇಖಾರ್ಹ.

## 8. ಮನುಷ್ಯರೆಲ್ಲಾ ಒಂದೇ, ಭೇದಕ್ಕೆ ಅವಕಾಶವಿಲ್ಲ

ಹೊಲೆಗೇರಿ, ಶಿವಾಲಯಗಳೆರಡೂ ಇರುವುದು ನೆಲದ ಮೆಲೆಯೇ. ಮಲ ತೊಳೆಯಲಿಕ್ಕೂ ಪೂಜೆಗೂ ಬಳಸುವುದು ಒಂದೇ ನೀರನ್ನು. ಹೀಗಿರುವಾಗ ತನ್ನನ್ನು ತಾನು ತಿಳಿದವನಿಗೆ ಹಲವು ಕುಲಗಳಿಲ್ಲ, ಇರುವುದು ಒಂದೇ ಕುಲ ಎನ್ನುತ್ತಾನೆ ಬಸವಣ್ಣ[173.1] ("ಕುಲವೊಂದೇ ತನ್ನ ತಾನರಿದವಂಗೆ... ನಿಲವೊಂದೇ ಕೂಡಲ ಸಂಗಮ ದೇವಾ ನಿಮ್ಮನರಿದವಂಗೆ"). ಹುಟ್ಟುವ ಎಲ್ಲ ಶಿಶುಗಳು ಹೊಲೆಯನ್ನು ಕಾಣಲೇಬೇಕು. ಎಲ್ಲರಿಗೂ ಆಶೆ ರೋಷ ವಿಷಯ ಇತ್ಯಾದಿಗಳು ಸಮಾನ. ಲೋಹ ವನ್ನು ಕಾಸಿ ಕಮ್ಮಾರನಾದ, ಅಂತೆಯೇ ವೇದವನ್ನೋದಿ ಬ್ರಾಹ್ಮಣನಾದ. ಕಿವಿಯಲ್ಲಿ ಜನಿಸಿದವರು ಯಾರೂ ಇಲ್ಲ.[174] ಹೀಗಿರುವಾಗ ಮನುಷ್ಯರೆಲ್ಲಾ ಒಂದು ಎಂದು ಭಾವಿಸುವುದೇ ಸರಿಯೆನ್ನುತ್ತಾನೆ ಬಸವಣ್ಣ. ಅವರಲ್ಲಿ ತನ್ನನ್ನು, ಎಂದರೆ ತನ್ನ ಮತ್ತು ಸಮಾಜದ ಸಂಬಂಧಗಳನ್ನು, ತನ್ನ ಮತ್ತು ದೈವದ ಸಂಬಂಧಗಳನ್ನು ಅರಿತು ಉನ್ನತ ಗುರಿಯತ್ತ ಶ್ರಮಿಸುವವನು ಶ್ರೇಷ್ಠ. ಕುಲದಿಂದ ಕನಿಷ್ಠ ಶ್ರೇಷ್ಠರೆಂದು ಅಳೆಯುವುದು ಮೂರ್ಖತನ.

ಬ್ರಾಹ್ಮಣನ ಶ್ರೇಷ್ಠತ್ವ, ಅಸ್ಪೃಶ್ಯನ ಕನಿಷ್ಠತ್ವಗಳೆರಡನ್ನೂ ಉದ್ದಕ್ಕೂ ನಿರಾಕರಿಸುತ್ತ ಬಂದಿರುವುದರ ಉದ್ದೇಶಗಳು ಸ್ಪಷ್ಟವಾಗಿವೆ.

---

172. "ಇಂತೀ ಜಾತಿ ಗೋತ್ರದೊಳಗಾದ ನೀಚ ಶ್ರೇಷ್ಠವೆಂಬ ಎರಡು ಕುಲವಲ್ಲದೆ ಹೊಲೆ ಹದಿನೆಂಟು ಜಾತಿಯೆಂಬ ಕುಲವಿಲ್ಲ. ಬ್ರಹ್ಮವನರಿದಲ್ಲಿ ಬ್ರಾಹ್ಮಣ, ಸರ್ವಜೀವಹತ ಕರ್ಮಕ್ಕೊಳಗಾಗಿದ್ದಲ್ಲಿ ಸಮಗಾರ" (ಸಕಲಪುರಾತನರ ವಚನಗಳು. III, ಪು. 744).

173. ಅದೇ.

173.1 ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ 878.

174. "ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ... ಆಶೆಯಾಮಿಷ ರೋಷ ಹರುಷ ವಿಷಯಾದಿಗಳೆಲ್ಲಾ ಒಂದೆ... ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ. ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ? ಇದು ಕೂಡಲಸಂಗಮದೇವಾ ಅಂಗಸ್ಥಲವನರಿದವನೆ ಕುಲಜನು." ಅದೇ, ವಚನ 589.

## ಮತಾಂತರ

ಹಿಂದೂ ಧರ್ಮದ ಕಕ್ಷೆಯಲ್ಲಿ ಮತಾಂತರಕ್ಕೆ ಅವಕಾಶಗಳು ಕಡಮೆ ಯಾದರೂ ಹನ್ನೆರಡನೆಯ ಶತಮಾನದ ಲಿಂಗಾಯತ ಚಳವಳಿ ಅದಕ್ಕೆ ಅಪವಾದ ವಾಗಿ ತೋರುತ್ತದೆ. ಈ ಅಧ್ಯಾಯದಲ್ಲಿ, ಬೇರೆ ಬೇರೆ ಜಾತಿಗಳವರು ವಿಭೂತಿ ಧರಿಸಿ ಲಿಂಗಧಾರಣೆ ಮಾಡಿಕೊಂಡು ವೀರಶೈವ ಮತಕ್ಕೆ ಸೇರಿಕೊಂಡದ್ದನ್ನು ಉಲ್ಲೇಖಿಸಿ ದರೂ ಅಸ್ಪೃಶ್ಯರು ಲಿಂಗವಂತರಾದುದು, ಅದರಿಂದ ಉಂಟಾದ ಸಾಮಾಜಿಕ ಪರಿಣಾಮಗಳನ್ನು ಮುಖ್ಯವಾಗಿ ಚರ್ಚಿಸಲಾಗಿದೆ.

"ಭಕ್ತರ ಮಾಡು", "ಶಿವದೀಕ್ಷೆಯ ಕೊಡು" "ಅನುಗ್ರಹವ ಮಾಡು" ಇವು ಮತಾಂತರಗೊಳಿಸುವುದನ್ನೂ "ಪುನರ್ಜಾತನಾಗು", "ಶಿವಲಾಂಛನವ ತಾಳು", "ಲಿಂಗಭಕ್ತನಾಗು", "ಅಂಗದ ಮೇಲೆ ಲಿಂಗ ಸಾಹಿತ್ಯವಾಗು" "ಭಕ್ತನಾಗು" ಇವು ಮತಾಂತರಗೊಳ್ಳುವುದನ್ನೂ ಹೇಳಲು ಬಳಕೆಯಾಗಿರುವ ಪದಗಳು.

ಎಲ್ಲ ಜಾತಿಯ ಜನರೂ ಶಿವಭಕ್ತರಾದುದನ್ನು ಮಾಚಿದೇವ ಸೂಚಿಸುತ್ತಾನೆ. ಶಿವಭಕ್ತರಾದವರು ಗುರುವಿಗೆ ಕಾಣಿಕೆಯನ್ನು ಒಪ್ಪಿಸುತ್ತಿದ್ದುದನ್ನೂ ಮತಾಂತರ ಗೊಳಿಸುವುದನ್ನು ಲಾಭಕರ ಉದ್ಯಮವಾಗಿ ಕೆಲವರಾದರೂ ಗುರುಗಳು ಪರಿಗಣಿಸಿದು ದನ್ನೂ ಒಂದು ವಚನದಲ್ಲಿ ಹೇಳಿದ್ದಾನೆ.[175] ಎಲ್ಲ ಜಾತಿಗೆ ಸೇರಿದ ಬಹುಸಂಖ್ಯೆಯ ಜನ ಬಸವಣ್ಣನಿಂದಾಗಿ ಭಕ್ತರಾದ ಸಂಗತಿಯನ್ನು ಸಿದ್ಧರಾಮ ಹೇಳಿದ್ದಾನೆ.[176] ಅವರಲ್ಲಿ ಅಸ್ಪೃಶ್ಯರೂ ಸೇರಿದ್ದರು. ಬಸವಣ್ಣ ("ಶ್ವಪಚೋಪಿಯಾದರೇನು ಶಿವಭಕ್ತನೇ ಕುಲಜನು"[177] "ಹೊಲೆಯ ಮಾದಿಗ ಭಕ್ತನಾದರೆ..."),[178] ಚನ್ನಬಸವಣ್ಣ ("ಶ್ವಪಚ ನಾದಡೆಯೂ ಲಿಂಗಭಕ್ತನೆ ಕುಲಜನೆಂಬುದು")[179] ಇವರ ಮಾತುಗಳು ಅದಕ್ಕೆ ಸ್ಪಷ್ಟ ಸಾಕ್ಷಿಗಳು. ಡೋಹರ ಕಕ್ಕಯ್ಯನು ಪ್ರಭುದೇವರಿಂದ ತನಗೆ ಇಷ್ಟಲಿಂಗ ದೊರೆತುದನ್ನು

---

175. "ಹಣವಿನಾಶೆಗೆ ಹದಿನೆಂಟು ಜಾತಿಯ ತಂದು ಭಕ್ತರ ಮಾಡುವಿರಯ್ಯ"– ಮಡಿವಾಳಯ್ಯನ ವಚನಗಳು, ವಚನ 7 (ಪುಟ 114 ನೋಡಿ).

176. ಶ್ರೀ ಸಿದ್ಧರಾಮೇಶ್ವರ ವಚನಗಳು, ವಚನ 1321 – "ಭವಿಯ ಭಕ್ತನ ಮಾಳ್ಪುದು ಯೋಗ್ಯವೊ ಅಯೋಗ್ಯವೊ?... ಇಲ್ಲಿ ಪರಮಗುರು ಸಂಗನಬಸವಯ್ಯ ಸರ್ವ ಜಾತಿಯ ಲಿಂಗದ ರಾಶಿ ಮಾಡಿದ ಸಿದ್ಧಾಂತ."

177. ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ 588.

178. ಅದೇ, ವಚನ 595. ಇವನ್ನೂ ನೋಡಿ–"ಮಾದರ ಶಿವಭಕ್ತನಾದರೆ" (ವಚನ 136); "ಹೊಲೆಯ ಹೊಲಬಿಗನಾದರೆ..." (ವಚನ 135).

179. ಚನ್ನಬಸವಣ್ಣನವರ ವಚನಗಳು, ವಚನ 129. ಇದನ್ನೂ ನೋಡಿ – "ಗುರುಕಾರುಣ್ಯ ಕಟಾಕ್ಷದಲ್ಲಿ ಉತ್ಪತ್ಯವಾದ ಅಜಾತಂಗೆ ಜಾತಿಸೂಚಕ ಜನನಸೂತಕ ಪ್ರೇತಸೂತಕ ರಜಸ್ಸೂತಕ ಉಚ್ಚಿಷ್ಟಸೂತಕವಿಲ್ಲ" – ಅದೇ, ವಚನ 123.

ಸ್ಮರಿಸಿದ್ದಾನೆ: "ಕೊಟ್ಟನಯ್ಯ ಎನ್ನ ಕರಸ್ಥಲಕ್ಕೆ ಲಿಂಗವ."[180] ಹೆಂಡದ ಮಾರಯ್ಯ ತನ್ನ ಕೊರಳಲ್ಲಿ ಲಿಂಗವಿದ್ದುದನ್ನು ತನ್ನ ವಚನವೊಂದರಲ್ಲಿ ಸೂಚಿಸಿದ್ದಾನೆ. ಮತಾಂತರದ ರಿಚುಯಲ್ಲು ಅಸ್ಪೃಶ್ಯರಿಗೇ ಬೇರೆಯಾದುದು ಇರಲಾರದು. ಹಾಗೆ ಇರಲು ಸಾಧ್ಯವೂ ಇಲ್ಲ. ಲಿಂಗವಂತರಾದ ಬಳಿಕ ಅವರು ಅಸ್ಪೃಶ್ಯರಾಗಿ ಉಳಿಯುತ್ತಿರಲಿಲ್ಲ, ಏಕೆಂದರೆ ಅಂತಹ ಅಸ್ಪೃಶ್ಯ ಶಿವಭಕ್ತರನ್ನು–ಹಿಂದೆ ಅಸ್ಪೃಶ್ಯರಾಗಿದ್ದ ಶಿವಭಕ್ತರನ್ನು–ಮೇಲ್ಜಾತಿಯ ಶಿವಭಕ್ತರು ಮನೆಗೆ ಕರೆದೊಯ್ದು ಸತ್ಕರಿಸಿದ ಕತೆಗಳಿವೆ, ಮತ್ತು ವಚನಾಧಾರಗಳೂ ಇವೆ (ಮುಂದೆ ನೋಡಿ). 'ಅಂತ್ಯಜನ ವರವೇಷ'ದಲ್ಲಿ ಬಂದ ಶಿವನನ್ನು ವರ್ಣಿಸುವಾಗ "ಆರಾಧ್ಯ ಚಾರಿತ್ರ'ದ ಕರ್ತೃ ನೀಲಕಂಠಾಚಾರ್ಯನು ಉಳಿದಂತೆ ಎಲ್ಲ ಅಸ್ಪೃಶ್ಯರನ್ನು ವರ್ಣಿಸುವಂತೆ ವರ್ಣಿಸಿ, ಜೊತೆಗೆ ಹಣೆಯಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷಿಮಾಲೆ ಮತ್ತು ಲಿಂಗ ಇದ್ದುದನ್ನು ಹೇಳುತ್ತಾನೆ.[181] ಎಲ್ಲ ಹೊಲೆಯರಂತೆ ಅವನೂ ಮಿಣಿಯನ್ನು ಹಿಡಿದು "ಸಂಬೋಳಿ" ಎಂದು ಕೂಗುತ್ತಿದ್ದರೂ ಭಕ್ತರು ಬಂದಾಗ ಮಾತ್ರ "ಸಱಿನಾತಿ, ಸಱಿನಾತಿ, ಸಱಿನಾತಿ" (–ಶರಣಾರ್ಥಿ, ಶರಣಾರ್ಥಿ, ಶರಣಾರ್ಥಿ) ಎನ್ನುತ್ತಿದ್ದ. ಅವನ ಕೈಯಲ್ಲಿ ಕೈಯುಳಿ, ಕತ್ತಿ ಇದ್ದುವು, ಹಳೆಯ ಚಪ್ಪಲಿ ಗಳನ್ನು ಹೊಲಿದು ಕೊಡುತ್ತಿದ್ದ. ಸೂರಮಾಂಬೆ ಅವನ–ಅವನು ಶಿವ ಎಂಬುದು ಅವಳಿಗೆ ತಿಳಿಯದು–ಪಾದಗಳನ್ನು ತೊಳೆದು ತೀರ್ಥವನ್ನು ಕುಡಿದಳು. ಬ್ರಾಹ್ಮಣರು ಅದನ್ನು ಕಂಡು ಹೊಲೆಯರು ಈಶ್ವರ ಭಕ್ತರ ಮನೆಯೊಳಕ್ಕೆ ಬರಬಾರದು, ಕೊನೆಗೆ ಹತ್ತಿರ ಸುಳಿಯಲೂ ಬಾರದು ಎಂದು ಆಕ್ಷೇಪಿಸುತ್ತಾರೆ. ಚೆನ್ನಯ್ಯನ ಕೆಂಭಾವಿ ಭೋಗಣ್ಣನ ಸಾಂಗತ್ಯದಲ್ಲೂ[182] ಇಂತಹುದೇ ಚಿತ್ರ ಉಂಟು. ಚಂದಿಮರಸ ದೊರೆ ಹೊಲೆಯನನ್ನು ಒಳಗೆ ಸೇರಿಸಿದ ಭೋಗಣ್ಣನಿಗೆ "ನಾಡೊಳು ಲಿಂಗವಂತರೆಲ್ಲ ಶ್ವಪಚರ ಕೂಡಿಕೊಂಬರೆ ತಮ್ಮ ಮನೆಯ" ಎಂದು ಪ್ರಶ್ನಿಸಿದ್ದಕ್ಕೆ "ಹೌದು, ನಾಡೊಳು ಲಿಂಗವಂತರೆಲ್ಲ ಶ್ವಪಚರ ಮನೆಯೊಳಕ್ಕೆ ಬರಬಹುದು" ಎಂದು ಭೋಗಣ್ಣ ಉತ್ತರಿಸುತ್ತಾನೆ. ಮುಂದೆ ನಾವು ನೋಡುವಂತೆ ಬಸವಣ್ಣ ಸಂಬೋಳಿ ನಾಗಿದೇವನ ಮನೆಗೆ ಹೋಗಿ ಪ್ರಸಾದ ತೀರ್ಥವನ್ನು ಸ್ವೀಕರಿಸುತ್ತಿದ್ದ. ಲಿಂಗವಂತ ಶಿವಭಕ್ತರಲ್ಲಿ ಸ್ಪೃಶ್ಯ ಅಸ್ಪೃಶ್ಯ ಭೇದ ತಾತ್ವಿಕವಾಗಿ ಇರಲಿಲ್ಲ.

### ಅರ್ಹತೆ

ವ್ಯಕ್ತಿಯ ಆಚಾರ, ವಿಚಾರ, ಉಭಯದ ವಿಚಾರ (ತಂದೆ ತಾಯಿ ವಂಶಗಳು?) ಇವುಗಳನ್ನು ಪರಿಶೀಲಿಸದೆ ಅವನಿಗೆ ಶಿವದೀಕ್ಷೆ ಕೊಡಲಾಗದು

---

180. ಎಂ. ಚಿದಾನಂದಮೂರ್ತಿ : ವಚನಸಾಹಿತ್ಯ ಬೆಂಗಳೂರು, 1975. ಪು. 10.

181. ಆರಾಧ್ಯ ಚಾರಿತ್ರ್ಯ. ಸಂ. ಎನ್. ಬಸವಾರಾಧ್ಯ. ಮೈಸೂರು, 1980. 7.7–8.

182. ಕೆಂಬಾವಿ ಭೋಗಣ್ಣನ ಸಾಂಗತ್ಯ. ಸಂ.: ಎಸ್. ವಿದ್ಯಾಶಂಕರ ಮತ್ತು ಎಸ್. ಶಿವಣ್ಣ. ಬೆಂಗಳೂರು. 1978, 2.5–6.

ಎನ್ನುತ್ತಾನೆ ಚನ್ನಬಸವಣ್ಣ.[183] ವೇಶ್ಯೆ, ದಾಸಿ, ಸುಂಕಿಗ (–ಸುಂಕದ ಅಧಿಕಾರಿ), ಮಣಿಹಗಾರ (–ಮಣೇಗಾರ? ದೇವಾಲಯದ ಅಧಿಕಾರಿ), ವಿದ್ಯಾವಂತ ಇವರಿಗೆ ಲಿಂಗವನ್ನು ಕಟ್ಟಿದರೆ ಅದು ಗುಡಿಯ ಗಂಟೆಯಂತೆ, ಅಷ್ಟೇ ಅಲ್ಲ ಅದು 'ಎಮ್ಮೆಯ ಕೊರಳ ಗಂಟೆ' ಎನ್ನುತ್ತಾನೆ.[184] ಲಿಂಗದೀಕ್ಷೆಗೆ ಅನರ್ಹರಾದವರ ಪಟ್ಟಿಗೆ ಮದ್ಯಪಾನಿ, ಮಾಂಸಾಹಾರಿ, ಜೂಜುಗಾರ, ಅಂಗಹೀನರೂ ಸೇರುತ್ತಾರೆ.[185] ಆದರೆ ಅಸ್ಪೃಶ್ಯರಿಗೆ ಲಿಂಗದೀಕ್ಷೆಯನ್ನು ನಿಷೇಧಿಸಿಲ್ಲವೆಂದು ಸ್ಪಷ್ಟ. ಅಸ್ಪೃಶ್ಯನಾಗಿದ್ದರೂ ಶುದ್ಧ ಮನಸ್ಕನಾಗಿದ್ದರೆ, ಮೇಲೆ ಹೇಳಿದವರಂತೆ ವಂಚನೆಯ ಬದುಕನ್ನು ನಡೆಸದವನಾಗಿದ್ದರೆ ಅವನಿಗೆ ಗುರುವು ಲಿಂಗವನ್ನು ಕರುಣಿಸಬೇಕೆಂದೂ, ಸ್ಪರ್ಶಮಣಿಯಿಂದ ಸಾಮಾನ್ಯ ಲೋಹ ಚಿನ್ನವಾಗುವಂತೆ ಲಿಂಗದಿಂದ ಪರಿಶುದ್ಧನಾದ ಅವನನ್ನು 'ಹೊಲೆ ಗಂಡ' ಎಂದು ಅವನಿಂದ ಅವನ ಹೆಂಡತಿ ದೂರವಿರಬೇಕಾಗಿಲ್ಲವೆಂದೂ, ಆದರೆ ಅವಳು ಅವನಂತೆ ಲಿಂಗವನ್ನು ಪಡೆದುಕೊಳ್ಳದೆ ಲಿಂಗವನ್ನು ಪೂಜಿಸಕೂಡದೆಂದೂ ಸಂಗಮೇಶ್ವರ ಅಪ್ಪಣ್ಣ ವಿಧಿಸುತ್ತಾನೆ. "ಲಿಂಗಾರ್ಚನೆಯಲ್ಲಿ ನಿರತಳಾದ ನಾರಿಯು ಪ್ರಸೂತೆಯಾಗಿರಲಿ ರಜಸ್ವಲೆಯಾಗಿರಲಿ ಸೂರ್ಯ ಬೆಂಕಿ ಗಾಳಿಗಳಂತೆ ಶುದ್ಧಳು" ಎಂಬ ಸಂಸ್ಕೃತೋಕ್ತಿಯಂತೆ ಹೊಲತಿಯೂ ಲಿಂಗದೀಕ್ಷೆಯಿಂದ ಶುದ್ಧಳಾಗುತ್ತಾಳೆ. ಆದರೆ "ಹೊಲೆಮನ ಬಿಡದವಂಗೆ ಗುರುಲಿಂಗವಿಲ್ಲೆಂದ ಕೂಡಲ ಚನ್ನಸಂಗಮದೇವ."[186] ವ್ಯಕ್ತಿ ಶುದ್ಧಮನಸ್ಸಿನವನಾಗದೆ ಅವನಿಗೆ ಲಿಂಗದೀಕ್ಷೆ ಕೊಡಕೂಡದೆಂಬುದು ಸಂಗಮೇಶ್ವರ ಅಪ್ಪಣ್ಣನ ತೀರ್ಮಾನ.

## ಸಂಕೀರ್ಣ ಸಂಸಾರ

ಗಂಡನು ಲಿಂಗಧಾರಿಯಾಗಿ ಹೆಣ್ಣು ಹಾಗೇ ಉಳಿದರೆ, ಹೆಣ್ಣು ಹೆಚ್ಚು ಸಂಪ್ರದಾಯ ನಿಷ್ಠಳಾದ್ದರಿಂದ ತನ್ನ ಸಂಸ್ಕಾರವನ್ನು ಕೈಬಿಡಲು ಒಪ್ಪದಿರಬಹುದು–

183. ಚನ್ನಬಸವಣ್ಣನವರ ವಚನಗಳು, ವಚನ 105. ಬ್ರಾಹ್ಮಣನಿಗೆ ಮೂರು ವರ್ಷ, ಕ್ಷತ್ರಿಯನಿಗೆ ಆರು ವರ್ಷ, ವೈಶ್ಯನಿಗೆ ಒಂಬತ್ತು ವರ್ಷ, ಶೂದ್ರನಿಗೆ ಹನ್ನೆರಡು ವರ್ಷ ಕಾದು ಲಿಂಗದೀಕ್ಷೆಯನ್ನು ಕೊಡಬೇಕೆನ್ನುತ್ತಾನೆ ಚನ್ನಬಸವಣ್ಣ (ಅದೇ. ವಚನ 633). ಅಸ್ಪೃಶ್ಯನಿಗೆ ಎಷ್ಟು ವರ್ಷವೆಂದು ಹೇಳಿಲ್ಲ.

184. ಅದೇ, ವಚನ 208.

185. ಅದೇ, ವಚನ 395. ದೇವಾಲಯವನ್ನು ನಿರಾಕರಿಸಿದ ವಚನಕಾರರು ದೇವಾಲಯದ ಅಧಿಕಾರಿಗಳಿಗೆ ಲಿಂಗದೀಕ್ಷೆ ಕೊಡಬಾರದೆಂದು ಹೇಳುವುದು ಸ್ವಾಭಾವಿಕವಾಗಿದೆ. ಲಿಂಗದೀಕ್ಷೆಗೆ ಅನರ್ಹರಾದ 'ವಿದ್ಯಾವಂತ' ಯಾರು ಎಂಬುದು ಸ್ಪಷ್ಟವಾಗುವುದಿಲ್ಲ. 'ವಿದ್ಯೆ' ಎಂದರೆ ಮಾಟ ಮಂತ್ರ ಎಂಬರ್ಥವೂ ಇರುವುದರಿಂದ 'ವಿದ್ಯಾವಂತ'ವು ಮಾಟ ಮಂತ್ರ ಬಲ್ಲ ಜನರನ್ನು ಸೂಚಿಸುವಂತೆ ತೋರುತ್ತದೆ.

186. ಸಕಲ ಪುರಾತನರ ವಚನಗಳು. III. 304–5.

ಆಶ್ಚರ್ಯವೇನಿಲ್ಲ. ಅಂತಹ ಉದಾಹರಣೆಯೊಂದನ್ನು ಸಂಗಮೇಶ್ವರ ಅಪ್ಪಣ್ಣ ಸೂಚಿಸಿದ್ದನ್ನು ಮೇಲೆ ನೋಡಿದ್ದೇವೆ. ಬಸವಣ್ಣನೂ ಇಂತಹ ಸಂಸಾರವೊಂದರ ಚಿತ್ರ ಕೊಟ್ಟಿದ್ದಾನೆ. ಗಂಡನು ಶಿವಭಕ್ತನಾಗಿ ಪಾದೋದಕ ಪ್ರಸಾದಗಳನ್ನು ಸ್ವೀಕರಿಸುತ್ತಿದ್ದರೆ, ಹೆಂಡತಿ ಹಿಂದಿನಂತೆಯೇ ಮಾರಿ ಮಸಣಿಯ ಭಕ್ತೆಯಾಗಿ ಹೆಂಡ ಮಾಂಸಗಳನ್ನು ತೆಗೆದುಕೊಳ್ಳುತ್ತಿದ್ದಳು. ಅವಳು ಮತಾಂತರಕ್ಕೆ ಬಹುಶಃ ಒಪ್ಪಲಿಲ್ಲ. ಇಂತಹ ಸಂಸಾರ ಹೆಂಡದ ಮಡಕೆಯನ್ನು ಹೊರಗೆ ತೊಳೆದಂತೆ ಎಂದು ಬಸವಣ್ಣ ಉದ್ಗಾರ ತೆಗೆಯುತ್ತಾನೆ.[187] ಒಮ್ಮೊಮ್ಮೆ ಭಕ್ತರಾಗಿ ಮಾಂಸಾಹಾರವನ್ನು ತ್ಯಜಿಸಿದವರು, ಮಾಂಸ ಹೆಂಡಗಳ ಆಸೆಯಿಂದಲೋ ಅಥವಾ ತಮ್ಮ ಜಾತಿಯ ಜನರ ಅವಹೇಳನ ಕಾರಣವಾಗಿಯೋ ಲಿಂಗವನ್ನು ತ್ಯಜಿಸಿ ಹಿಂದಿನಂತೆ ಅದುದನ್ನು ಅಂಬಿಗರ ಚೌಡಯ್ಯ ಟೀಕಿಸಿದ್ದಾನೆ.[187.1] ಶಿವಭಕ್ತನ ಕೈಯಲ್ಲಿ ಮಾಂಸ, ಬಾಯಲ್ಲಿ ಹೆಂಡದ ಬಟ್ಟಲು ಇದ್ದರೂ ಅವನ ಕೊರಳಲ್ಲಿ ಲಿಂಗವಿದ್ದರೆ ಸಾಕು ಅವರನ್ನು ದೇವರೆಂದು 'ಮುಖಲಿಂಗಿ'ಗಳೆನ್ನುತ್ತೇನೆ ಎಂದು ಬಸವಣ್ಣ ಹೇಳುತ್ತಾನೆ. ("ಎಡದ ಕೈಯಲಿ ಕತ್ತಿ ಬಲದ ಕೈಯಲಿ ಮಾಂಸ, ಬಾಯಲ್ಲಿ ಸುರೆಯ ಗಡಿಗೆ ಕೊರಳಲ್ಲಿ ದೇವರಿರಲಿ, ಅವರ ಲಿಂಗನೆಂಬೆ, ಸಂಗನೆಂಬೆ... ದೇವಾ ಅವರ ಮುಖಲಿಂಗಿಗಳೆಂಬೆ."* ವಚನ 719). ಲಿಂಗವಂತರಾದ ಮೇಲೂ ತಮ್ಮ ಹಿಂದಿನ ಆಹಾರಾಭ್ಯಾಸಗಳನ್ನು ಮುಂದುವರಿಸಿದವರ ಚಿತ್ರ ಇಲ್ಲಿದೆ. ಮಾಂಸಾಹಾರ ಮದ್ಯಪಾನ ಬಸವನಿಗೆ ಸಮ್ಮತವಾದುದಲ್ಲವಾದರೂ ಅಂತಹ ಸಂದರ್ಭ ಬಂದರೆ ಭಕ್ತಿಗಾಗಿ ಮತಕ್ಕಾಗಿ ಅವನ್ನು ಸೇವಿಸುವವರನ್ನು ಒಪ್ಪಿಕೊಳ್ಳಲು ಸಿದ್ಧವೆನ್ನುತ್ತಾನೆ. ತಾತ್ವಿಕವಾಗಿ ಮಾಂಸ ಸುರೆಗಳು ಭಕ್ತಿಗೆ ವಿರೋಧವಲ್ಲವೆಂದೂ ಮತ್ತು ಅವೆರಡೂ

---

187. "ಗಂಡ ಶಿವಲಿಂಗ ದೇವರ ಭಕ್ತ. ಹೆಂಡತಿ ಮಾರಿ ಮಸಣಿಯ ಭಕುತೆ. ಗಂಡ ಕೊಂಬುದು ಪಾದೋದಕ ಪ್ರಸಾದ, ಹೆಂಡತಿ ಕೊಂಬುದು ಸುರೆ ಮಾಂಸ. ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ ಹೆಂಡದ ಮಡಕೆಯ ಹೊರಗೆ ತೊಳೆದಂತೆ..." (ಬಸವಣ್ಣನವರ ಷಟ್‌ಸ್ಥಳದ ವಚನಗಳು, ವಚನ 104) ಅಸ್ಪೃಶ್ಯರು ಪೂಜಿಸುತ್ತಿದ್ದ ಬಗೆ ಬಗೆಯ ದೈವಗಳನ್ನು ಪ್ರತ್ಯೇಕವಾಗಿ ಯಾರೂ ಹೇಳಿಲ್ಲವಾದರೂ ಈ ವಚನದಲ್ಲಿ ಮಾರಿ ಮಸಣಿ ಅಂತಹ ದೈವಗಳಲ್ಲಿ ಎರಡು ಎಂಬುದು ಸ್ಪಷ್ಟ. ಮಾರಯ್ಯ, ಬೀರಯ್ಯ, ಖೇಚರ, ಗಾವಿಲ, ಅಂತರ, ಬೆಂತರ, ಕಾಳಯ್ಯ, ದೂಳಯ್ಯ, ಕೇತಯ್ಯ ಇವುಗಳಲ್ಲಿ (ಅದೇ, ವಚನ 555) ಕೆಲವನ್ನಾದರೂ ಅಸ್ಪೃಶ್ಯರು ಪೂಜಿಸುತ್ತಿದ್ದಿರಬಹುದು.

187.1 "ಅಂಗದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಮರಳಿ ತನ್ನ ಜಾತಿಯವರ ಕೂಡಿದರೆ ಆ ಕತ್ತೆ ಹಂದಿ ಬೆಕ್ಕು ಶುನಕದಿಂದತ್ತತ್ತ ಕಾಣಿರೋ."

– ಅಂಬಿಗರ ಚೌಡಯ್ಯನ ವಚನಗಳು. ವಚನ 63.

* 'ಮುಖಲಿಂಗ' ಎಂದರೆ ಶಿವನ ನಾಲ್ಕು ಮುಖಗಳನ್ನು ಲಿಂಗದ ನಾಲ್ಕೂ ಕಡೆ ತುದಿಯಲ್ಲಿ ಕೆತ್ತಿರುವ ಲಿಂಗ. ಉದಾ: ನೇಪಾಳದ ಪಶುಪತಿ ಶಿವಲಿಂಗ.

ಒಟ್ಟಿಗೆ ಇರಬಲ್ಲುವೆಂದೂ ಅಂದಿನ ಲಿಂಗಾಯತ ಮತ ನಂಬಿದ್ದಿತು. ಏಕೆಂದರೆ ಮಾಂಸಭಕ್ಷಣೆ ಮಾಡಿದ, ಶಿವನಿಗೆ ಮಾಂಸವನ್ನು ಅರ್ಪಿಸಿದ ಭಕ್ತರ ಪೌರಾಣಿಕ ಕತೆಗಳನ್ನು ಮತ ಒಪ್ಪಿಕೊಂಡಿದ್ದಿತು. ವಾಸ್ತವಾಚಾರಣೆಯಲ್ಲಿ ಮಾಂಸಾಹಾರವನ್ನು ನಿಷೇಧಿಸಿದ್ದಿತು.[188] ಲಿಂಗಧಾರಣೆಯನ್ನೋ ಲಿಂಗಮುದ್ರೆಯನ್ನೋ ಪಡೆದು (ಶಿವಭಕ್ತರ ಮನೆಯ ಎತ್ತುಗಳಿಗೆ ಲಿಂಗಮುದ್ರೆ ಹಾಕುತ್ತಿದ್ದರು; ಮನುಷ್ಯರಿಗೆ– ವೈಷ್ಣವರಲ್ಲಿ ತಪ್ತಕಾಂಚನ ಮುದ್ರೆ ಹಾಕುವಂತೆ–ಲಿಂಗಮುದ್ರೆ ಹಾಕುತ್ತಿದ್ದರೇ, ತಿಳಿಯದು) ವ್ಯಕ್ತಿ ಹೊರಗೆ ಶೈವ ಲಾಂಛನವನ್ನು ಹೊಂದಿ ಒಳಗೆ ಮಾತ್ರ ಕೊಲೆ ಹಾದರದ ಪಾಪಗಳನ್ನು ಮಾಡುವುದಾದರೆ, ಅದರಿಂದ ಏನು ಪ್ರಯೋಜನ ಎನ್ನುತ್ತಾನೆ ಕೋಲ ಶಾಂತಯ್ಯ.[188.1]

## ಮತಾಂತರಕ್ಕೆ ಪ್ರಚೋದನೆ ಏನು?

ಸ್ನಾನಮಾಡಿಸಿ, ಇನ್ನುಮೇಲೆ ಮಾಂಸ ಹೆಂಡಗಳನ್ನು ತ್ಯಜಿಸುವುದಾಗಿ ಪ್ರಮಾಣ ಮಾಡಿಸಿ, ವಿಭೂತಿ ರುದ್ರಾಕ್ಷಿಗಳನ್ನು ನೀಡಿ, ಕೈಯಲ್ಲಿ ಇಷ್ಟಲಿಂಗವನ್ನು ಕೊಟ್ಟು, ಕಿವಿಯಲ್ಲಿ ನಮಃಶಿವಾಯ ಮಂತ್ರವನ್ನು ಉಸುರಿ, ತಲೆಯಮೇಲೆ ಕೈಯಿಟ್ಟು ಹರಸಿ ಇನ್ನು ಮೇಲೆ ದಿನವೂ ಲಿಂಗಪೂಜೆ ಮಾಡುತ್ತ ಇನ್ನು ಸಾತ್ವಿಕ ಜೀವನವನ್ನು ನಡೆಯಿಸಿ ಎಂದು ಗುರುಗಳು ಹರಸುವುದು: ಮತಾಂತರದ ರಿಚುಯಲ್ ಇದಕ್ಕಿಂತ ಹೆಚ್ಚು ಸರಳವಾಗಿರಲಾರದು. ಕೆಳವರ್ಗದವರು ಏಕೆ ಭಕ್ತರಾದರು? ಅವರಿಗೆ ಹಣ ಅಧಿಕಾರ ದಂತಹ ಆಮಿಷವನ್ನೇನಾದರೂ ಒಡ್ಡಿದರೇ ಎಂಬ ಪ್ರಶ್ನೆಗೆ ಪರವಾಗಿ ವಿರೋಧವಾಗಿ ವಾದಿಸಲು ಯಾವುದೇ ಬಗೆಯ ಆಧಾರಗಳೂ ದೊರಕುವುದಿಲ್ಲವಾದರೂ,

---

188. ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದವರೆಗಾದರೂ ಬ್ರಾಹ್ಮಣರು ಮಾಂಸಾಹಾರ ವನ್ನು ಮಾಡುತ್ತಿದ್ದರೆಂಬುದನ್ನು ಹಿಂದೆ ನೋಡಿದ್ದೇವೆ. ಮುಂದೆ ಬ್ರಾಹ್ಮಣರು ಸಸ್ಯಾಹಾರಿಗಳಾಗಿ ಪರಿವರ್ತನೆ ಹೊಂದಿದ್ದರೆ ಅದಕ್ಕೆ ಜೈನ ಧರ್ಮ ಕಾರಣವಲ್ಲ. ಏಕೆಂದರೆ ಹತ್ತು ಹನ್ನೊಂದನೇ ಶತಮಾನಗಳು ಜೈನ ಧರ್ಮದ ಉತ್ಕರ್ಷ ಕಾಲ; ಆ ಕಾಲದಲ್ಲೂ ಬ್ರಾಹ್ಮಣರ ಮಾಂಸಾಹಾರ ಮುಂದುವರಿದಿತ್ತು. ಹನ್ನೆರಡನೆಯ ಶತಮಾನದ ಬಳಿಕ ವೀರಶೈವ ಮತ ಹೆಚ್ಚು ಪ್ರಚುರವಾಗಿ ಸಸ್ಯಾಹಾರವನ್ನು ಜನಪ್ರಿಯಗೊಳಿಸಿದುದರ ಕಾರಣವಾಗಿ ಬಹುಶಃ ಬ್ರಾಹ್ಮಣರು ಸಸ್ಯಾಹಾರಿಗಳಾಗಿರ ಬಹುದು. ಈ ಬಗ್ಗೆ ಹೆಚ್ಚಿನ ವಿಚಾರಕ್ಕೆ ಅವಕಾಶವಿದೆ.

188.1 ಸಕಲ ಪುರಾತನರ ವಚನಗಳು. I. ಪು. 16 – "ಕೊಲೆ ಹೊಲೆ ಪರದಾರದ ಪಾತಕವ ಮಾಡುವರೊಳಗಿಟ್ಟುಕೊಂಡು ಘನಲಿಂಗದ ಮುದ್ರೆಯನಿಕ್ಕಿ ಹೊಲೆದೊಳೆದೆವೆಂದು ಕಲಹಕ್ಕೆ ಇದಿರಹ ಕುಲುಮೆಗಾಱರಿಗೇಕೆ ಮೂಱಕ್ಷರದ ಒಲವರ ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ಅನಂಗಸಂಗ." ಮಾತೆತ್ತಿದರೆ ಸಾಕು ಕುಲುಮೆಯಂತೆ ಬುಸುಗುಡುತ್ತ ಉರಿಯುಗುಳುತ್ತ ಜಗಳಕ್ಕೆ ಬರುವವರ ಚಿತ್ರ ಚೆನ್ನಾಗಿದೆ. ('ಮೂಱಕ್ಷರ' ಬಹುಶಃ ವಿಭೂತಿಯನ್ನು ಹೇಳುತ್ತದೆ).

ಆಮಿಷಗಳನ್ನೊಡ್ಡಿ ಜನರನ್ನು ತಮ್ಮತ್ತ ಸೆಳೆದರು ಎಂದು ಊಹಿಸುವುದು ತೀರ ಕಷ್ಟ ವಾಗುತ್ತದೆ. ಕೆಳವರ್ಗದವರಿಂದ ವೋಟುಗಳನ್ನು ಪಡೆಯುವಂತಹ ಸಂದರ್ಭವೇನೂ ಆ ಕಾಲಕ್ಕೆ ಇರಲಿಲ್ಲ. ಬಸವನ ಕಡೆಯವರಲ್ಲಿ ಅಂತಹ ಶ್ರೀಮಂತರೂ ಇದ್ದಿರಲಾರರು. ಭಕ್ತರಾಗಿ ಸಾಮಾಜಿಕವಾಗಿ ಮೇಲೇರುವ ಅವಕಾಶ ದೊರಕಿದಾಗ ಅದನ್ನು ಅಸ್ಪೃಶ್ಯರೂ ಸೇರಿದಂತೆ ಕೆಳವರ್ಗದವರು ಉಪಯೋಗಿಸಿಕೊಂಡರೆಂದು ಭಾವಿಸಬೇಕು. ಬಸವ ದೊದಲಾದ ಉದಾರ ಹೃದಯಿಗಳಿಗೆ ಅಸ್ಪೃಶ್ಯರನ್ನು ಭಕ್ತರನ್ನಾಗಿ ಮಾಡುವುದರ ಮೂಲಕ ಅವರಿಗೆ ತಾವು ಒಂದು ಸಾಮಾಜಿಕ ಸ್ಥಾನವನ್ನು ಒದಗಿಸಿ ಕೊಡಲು ಅದು ಒಂದು ಅವಕಾಶವೆಂದೂ ಅನ್ನಿಸಿರಬೇಕು. ಅಸ್ಪೃಶ್ಯರು ಭಕ್ತರಾಗುವುದು ಬಸವನಿಗಿಂತ ಹಿಂದೆಯೇ ನಡೆದು ಬಂದಿದ್ದಿತು. ಅವನ ಕಾಲದಲ್ಲಿ ಅದು ತನ್ನ ಪ್ರಮಾಣವನ್ನು ಹೆಚ್ಚಿಸಿಕೊಂಡಿತು. ಭಕ್ತರಾದವರು ಕೊಟ್ಟ ಕಾಣಿಕೆ ಹಲವು ಗುರುಗಳ ಹಣದ ಅತಿಯಾಸೆಯನ್ನು ತೃಪ್ತಿಗೊಳಿಸಿರಬಹುದು, ಅಥವಾ ಹೆಚ್ಚಿಸಿರಬಹುದು.[189] (ಮತಾಂತರದಲ್ಲಿ ಹಣದ ಪಾತ್ರವೂ ಸ್ವಲ್ಪ ಇದ್ದಿರಬೇಕು.)

## ಅಸ್ಪೃಶ್ಯ ಶಿವಭಕ್ತ ಮತ್ತು ಗುರು

ಕೆಲವು ಗುರುಗಳು ಕುಲಹೀನ ಶಿಷ್ಯರಿಗೆ ಇಷ್ಟಲಿಂಗವನ್ನು ಕೊಟ್ಟು, ಹಾಗೆ ಭಕ್ತರಾದ ಶಿಷ್ಯರ ಮನೆಯಲ್ಲಿ ಊಟ ಮಾಡುವುದನ್ನು ಬಿಟ್ಟು ಅವರ ಮನೆಯಿಂದ ಅಕ್ಕಿ, ತುಪ್ಪ ತಂದು ಬೇರೆ ಅಡುಗೆ ಮಾಡಿಸುವ ಪ್ರವೃತ್ತಿಯನ್ನು ಚನ್ನಬಸವಣ್ಣ ಸ್ಪಷ್ಟವಾಗಿ ಖಂಡಿಸಿದ್ದಾನೆ.[190] ಅಂಬಿಗರ ಚೌಡಯ್ಯ ಅಂತಹ ಗುರುವನ್ನು ಶಿಕ್ಷಿಸಬೇಕೆನ್ನುತ್ತಾನೆ.[191] ಕೋಲಶಾಂತಯ್ಯನ ಪ್ರಕಾರ, ಹಳೆಯ ಸಂಸ್ಕಾರವನ್ನು ಕಳಚಿ 'ಪುನರ್ಜಾತ'ನಾದ ಬಳಿಕ (ಹೊಸ ಹುಟ್ಟು ಪಡೆದ ಬಳಿಕ), ಹೊಟ್ಟೆಪಾಡಿಗಾಗಿ ಬೇರೆ ಬೇರೆ ವೇಷ ಧರಿಸಿ ವಂಚನೆಯ ಬದುಕನ್ನು ನಡೆಸುವವರನ್ನು ("ಜಾತತ್ವಕ್ಕೆ ನಾನಾ ಭೌತಿಕ ತೊಟ್ಟು ಪಿಷ್ಟದವರ ಅಭೀಷ್ಟನಾಗಿ ಮತ್ತೆ ಪುನರ್ಜಾತನಾದ ಪರಿಯಿನ್ನೆಂತೋ?") ಟೀಕಿಸುವುದಲ್ಲವೆ ಅವರಿಗೆ ಪುನರ್ಜಾತತ್ವವನ್ನು ಕೊಡುವ ಗುರುವು ಅವರ ತಂದೆ ತಾಯಿಗಳ ಜಾತಿಯನ್ನು ವಿಚಾರಿಸದೆ, ತನ್ನ ಕರ್ತವ್ಯವನ್ನು

189. ನೋಡಿ – "ಹಣವಿನಾಶೆಗೆ ಹದಿನೆಂಟು ಜಾತಿಯ ತಂದು ಭಕ್ತರ ಮಾಡುವಿರಯ್ಯ" ಮಡಿವಾಳಯ್ಯನ ವಚನಗಳು, ವಚನ 7. (ಪೂರ್ಣ ಪಾಠಕ್ಕೆ ಪು. 114 ನೋಡಿ)

190. ಚನ್ನಬಸವಣ್ಣನವರ ವಚನಗಳು, ವಚನ 633.

191. "ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ ತಿರುಗಿ ಅವನ ಮನೆಯಲ್ಲಿ ಉಣ್ಣಬಾರ ದೆಂದು ಅಕ್ಕಿ ಕಣಕವ ಕೊಂಡು ಹೋಗುವ ಗುರುವಿನ ಕಂಡರೆ ಕೆಡಹಿ ಹಾಕಿ ಮೂಗನೆ ಕೊಯ್ದು ಇಟ್ಟಂಗಿಯ ಕಲ್ಲಲೆ ತಿಕ್ಕಿ ಸಾಸಿವೆಯ ಹಿಟ್ಟನೆ ತಳಿದು ಮೇಲೆ ಲಿಂಬಿಯ ಹುಳಿಯನೆ ಹಿಂಡಿ ಪಡುವಣ ಗಾಳಿಗೆ ಹಿಡಿಯೆಂದಾತ ನಮ್ಮ ಅಂಬಿಗರ ಚೌಡಯ್ಯ" – ಅಂಬಿಗರ ಚೌಡಯ್ಯನ ವಚನಗಳು. ವಚನ 222.

ತಾನು ಅರಿತು ತನ್ನನ್ನು ಮುಟ್ಟಿದ ಭಕ್ತರಿಗೆ ಅನುಗ್ರಹಿಸಬೇಕೆಂದು ಸೂಚಿಸುತ್ತಾನೆ. ಭಕ್ತನನ್ನು ಮುಟ್ಟದೆ ದೂರದಿಂದಲೇ ಅವನಿಗೆ ಭಸ್ಮ, ಲಿಂಗಗಳನ್ನು ಕೊಡುವುದಲ್ಲ; ಅವನಿಂದ ಮುಟ್ಟಿಸಿಕೊಳ್ಳಬೇಕು, ಅವನನ್ನು ಮುಟ್ಟಿ ಲಾಂಛನಗಳನ್ನು ಅನುಗ್ರಹಿಸ ಬೇಕು.[192] ಇಲ್ಲಿ ಕೆಲವಾದರೂ ಗುರುಗಳು ಮಡಿ ಮೈಲಿಗೆ ಭಾವನೆಗಳನ್ನು ಕೆಳವರ್ಗದ ಅದರಲ್ಲೂ ಅಸ್ಪೃಶ್ಯ ಭಕ್ತರ ಬಗ್ಗೆ ತೋರುತ್ತಿರಬಹುದೆಂಬ ಸೂಚನೆ ಯಿದೆ.

## ಲಿಂಗವಂತರಲ್ಲಿ ಜಾತಿಭೇದ

ಭಕ್ತರಾದ ಅಸ್ಪೃಶ್ಯ ವರ್ಗದವರಿಗೂ ಮೇಲ್ಜಾತಿಯ ಭಕ್ತರಿಗೂ ಬರುತ್ತಿದ್ದ ಭಿನ್ನಾಭಿಪ್ರಾಯಗಳೂ ಸ್ವಾರಸ್ಯವಾಗಿವೆ, ಮತ್ತು ಅವು ನಿರೀಕ್ಷಿತವೂ ಹೌದು. ಜಾತಿಗಳ ಮಧ್ಯೆ ಇರುವ ಭೇದ ಊಟಕ್ಕಿಂತ ಮದುವೆಯಲ್ಲಿ ಎದ್ದು ಕಾಣುತ್ತದೆ. ಊಟಕ್ಕಿಂತ ಮದುವೆ ಹೆಚ್ಚು ಸಾಮಾಜಿಕವಾದುದು, ಗಂಭೀರವಾದುದು. ಸ್ಪೃಶ್ಯ, ಅಸ್ಪೃಶ್ಯರೆಲ್ಲ ಭಕ್ತರಾಗಿ ಎಲ್ಲರೂ ತಾತ್ವಿಕವಾಗಿ ಸಮ ಎಂದು ಒಪ್ಪಿಕೊಂಡರೂ, ಭಿನ್ನ ಜಾತಿಗಳಿಂದ ಬಂದ ಜನ ಪರಸ್ಪರರ ಮನೆಗಳಲ್ಲಿ ಊಟ ಮಾಡಲು ಒಪ್ಪಿದರೂ ಪರಸ್ಪರವಾಗಿ ರಕ್ತ ಸಂಬಂಧ ಬೆಳೆಸಲು ಹಿಂಜರಿದರು. ಕೆಲವರು ಸ್ಪಷ್ಟವಾಗಿ ಹೇಳುತ್ತಿದ್ದರು : "ಉಂಬುವುದು ಊಡುವುದು ಶಿವಾಚಾರ, ಕೊಂಬುವುದು ಕೊಡುವುದು ಕುಲಾಚಾರ." ಇಲ್ಲಿ ಧರ್ಮ ಮತ್ತು ಜಾತಿಗಳಿಗೆ ಸಂಬಂಧಿಸಿದ ಕೆಲವು ವಾಸ್ತವಗಳಿವೆ. 'ಶಿವಾಚಾರ'ವು ಮತೀಯ ನಿಯಮಗಳ ಆಚರಣೆಯನ್ನೂ 'ಕುಲಾಚಾರ'ವು ಜಾತಿ ನಿಯಮಗಳ ಆಚರಣೆಯನ್ನೂ ಹೇಳುತ್ತದೆ. ತಾವು ಲಿಂಗವಂತರಾದ್ದರಿಂದ ಅದಕ್ಕನುಗುಣವಾಗಿ ಲಿಂಗವಂತರಾದ ಅನ್ಯಜಾತಿ ಮನೆಗಳಲ್ಲಿ ಉಣ್ಣಲು ಸಿದ್ಧವೆಂದೂ, ಆದರೆ ಹೆಣ್ಣನ್ನು ಕೊಟ್ಟು ತರುವುದು ತಮ್ಮ ಕುಲಾಚಾರವಾದ್ದರಿಂದ ಅನ್ಯಲಿಂಗವಂತ ಜಾತಿಗಳ ಜೊತೆ ಅಂತಹ ಸಂಬಂಧ ಮಾತ್ರ ಸಾಧ್ಯವಿಲ್ಲವೆಂದೂ ಹೇಳುತ್ತಿದ್ದುದನ್ನು ಚೆನ್ನಬಸವಣ್ಣ ಟೀಕಿಸಿ, ಬ್ರಾಹ್ಮಣರೇ ಆಗಲಿ ಅಸ್ಪೃಶ್ಯರೇ ಆಗಲಿ ಶಿವಭಕ್ತರಾದ ಮೇಲೆ ಪರಸ್ಪರ ರಕ್ತ ಸಂಬಂಧ ಬೆಳೆಸುವವೊಂದೇ 'ಸದಾಚಾರ', ಉಳಿದುದೆಲ್ಲ 'ಅನಾಚಾರ' ಎಂದು ಸ್ಪಷ್ಟವಾಗಿ ಘೋಷಿಸಿದ್ದಾನೆ.[193] ವಚನ ವಾಙ್ಮಯದಲ್ಲಿ ಇಷ್ಟು ಧೀರವಾದ ಘೋಷಣೆ ಮತ್ತೊಂದು ಇರಲಾರದು. ಭಕ್ತರಾದ ಸ್ಪೃಶ್ಯ ಅಸ್ಪೃಶ್ಯರ ಮಧ್ಯೆ

---

192. ಸಕಲ ಪುರಾತನರ ವಚನಗಳು, I, ಪು. 16.

193. "ಉಂಬುವುದು ಊಡುವುದು ಶಿವಾಚಾರ, ಕೊಂಬುವುದು ಕೊಡುವುದು ಕುಲಾಚಾರ ಎಂಬ ಅನಾಚಾರಿಯ ಮಾತು ಕೇಳಲಾಗದು... ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರ ಒಂದೆ ಎಂದು ಕೊಟ್ಟು ಕೊಂಬುದು ಸದಾಚಾರ, ಉಳಿದುವೆಲ್ಲ ಅನಾಚಾರ" – ಚನ್ನಬಸವಣ್ಣನವರ ವಚನಗಳು, ವಚನ 399.

ನಿರಾತಂಕವಾಗಿ ಮದುವೆಗಳು ನಡೆಯಬೇಕೆಂಬುದನ್ನು ಚನ್ನಬಸವಣ್ಣ ಬೇರೊಂದು ವಚನದಲ್ಲಿಯೂ ಹೇಳಿದ್ದಾನೆ.[194] (ಆ ವಚನಕ್ಕೆ ಮೂಲ ಬಸವಣ್ಣನವರ ಅದೇ ಅಭಿಪ್ರಾಯದ ಇನ್ನೊಂದು ವಚನ.)

ಅಂದಿನ ಸಮಾಜದಲ್ಲಿ ಬಹು ಜನ ಅಂತಹ ಮದುವೆಗಳಿಗೆ ಹಿಂಜರಿದರೂ ಕೆಲವರಾದರೂ ಧೈರ್ಯವಹಿಸಿ ಅಂತಹ ಸಂಬಂಧಗಳನ್ನು ಬೆಳೆಸಿದರೆಂಬುದಕ್ಕೆ ಮಧುವಯ್ಯ ಹರಳಯ್ಯಗಳ ಪ್ರಕರಣವೇ ಸಾಕ್ಷಿ (ಈ ಬಗ್ಗೆ ಮುಂದೆ ನೋಡಿ).

ಲಿಂಗವಂತರಲ್ಲಿ ಯಾವುದೇ ವಿಷಯದಲ್ಲೂ ಜಾತಿಭೇದವನ್ನು ಹುಡುಕುವುದನ್ನು ಎಲ್ಲ ವಚನಕಾರರೂ ಸ್ಪಷ್ಟವಾಗಿ ಖಂಡಿಸಿದ್ದಾರೆ. "ಶಿವಭಕ್ತರಲ್ಲಿ ಕುಲ ಗೋತ್ರ ಜಾತಿ ವರ್ಣಾಶ್ರಮಅರಿಸದೆ ಅವರೊಕ್ಕುದ ಕೊಂಬುದೆ ಶಿವಾಚಾರ"[195] ಎನ್ನುತ್ತಾನೆ ಚನ್ನಬಸವಣ್ಣ.[196] "ಭಕ್ತರಿಗೆ ಭಕ್ತಿಯ ಲಕ್ಷಣವೆಂತೆಂದಡೆ ಕಳ್ಳ ಹಾದರಿಗ ಹಾವಡಿಗ ಆರಾದಡೂ ಶಿವಲಾಂಛನವ ತಾಳಿ ಬಂದಲ್ಲಿ ಶಿವನೆಂದೇ ಪ್ರಮಾಣಿಸುವುದು" ಎನ್ನುತ್ತಾನೆ ದೋಳಿಗೆ ಮಾರಯ್ಯ.[197] ಅಂಗದ ಮೇಲೆ ಲಿಂಗವುಳ್ಳವರು ಯಾವ ಕುಲದವರಾದರೂ ಸರಿಯೇ ಆಚಾರವುಳ್ಳವರೆಂದೂ ಸದ್ಭಕ್ತರೆಂದೂ ಕರೆಯಿಸಿಕೊಳ್ಳುತ್ತಾರೆ ಎನ್ನುತ್ತಾಳೆ ಅಮುಗೆ ರಾಯಮ್ಮ.[198] ಚನ್ನಬಸವಣ್ಣನ ಪ್ರಕಾರ ಅಂಗದ ಮೇಲೆ ಲಿಂಗ ಧರಿಸಿದ ಶ್ವಪಚನೇ ಸದ್ಬ್ರಾಹ್ಮಣ – "...ಶ್ವಪಚನಾದರೆಯೂ ಲಿಂಗಭಕ್ತನೆ ಕುಲಜನೆಂದುದು. ಲೈಂಗ್ಯಪುರಾಣೇ – 'ನಲಿಂಗೀ ಸರ್ವವೇದಜ್ಞೋ ಯಸ್ತು ಚಂಡಾಲವದ್ಭವಿಃ ಲಿಂಗಾರ್ಚಕಶ್ಚ ಶ್ವಪಚೋ ದ್ವಿಜಕೋಟಿವಿಶೇಷಿತಃ' ಎಂದುದಾಗಿ ಅಂಗದ ಮೇಲೆ ಶಿವಲಿಂಗವಿಲ್ಲದ ಬ್ರಾಹ್ಮಣರೊಂದು ಕೋಟಿಯಾದಡೆಯೂ

---

194. 'ಉಂಬಲ್ಲಿ ಊಡುವಲ್ಲಿ ಕ್ರೀ ಅಳಿಯಿತ್ತೆಂಬರು, ಕೊಂಬಲ್ಲಿ ಕೊಡುವಲ್ಲಿ ಕುಲವನಱಸುವರು. ಏನೆಂಬೆನಯ್ಯಾ? ಒಚ್ಚಿ ಒಚ್ಚಿ ಭವಿಗಳು ಒಚ್ಚಿ ಒಚ್ಚಿ ಭಕ್ತರು. ಇದು ಕಾರಣ ಕೂಡಲಚೆನ್ನ ಸಂಗಯ್ಯನಲ್ಲಿ ಭಕ್ತಕಾಯ ಮಮಕಾಯವಂತೆಂಬರು' (ಅದೇ, ವಚನ 369).

195. "ಉಂಬಲ್ಲಿ ಊಡುವಲ್ಲಿ ಕ್ರೀಯಳಿಯಿತೆಂಬರು, ಕೊಂಬಲ್ಲಿ ಕೊಡುವಲ್ಲಿ ಕುಲವನಱಸುವರು. ಎಂತಯ್ಯಾ ಅವರ ಭಕ್ತರೆಂಬೆ, ಎಂತಯ್ಯಾ ಅವರ ಯುಕ್ತರೆಂಬೆ. ಕೂಡಲಸಂಗಮದೇವಾ ಕೇಳಯ್ಯಾ ಹೊಲತಿ ಶುದ್ಧ ನೀರ ಮಿಂದಂತಾಯಿತ್ತಯ್ಯಾ"– ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ 627.

196. ಚನ್ನಬಸವಣ್ಣನವರ ವಚನಗಳು, ವಚನ 1159. ಇದನ್ನೂ ನೋಡಿ – "ನಿಮ್ಮ ಶರಣರಲ್ಲಿ ಜಾತಿಯ ಹುಡುಕುವ ಕಡುಪಾತಕಿಗಳ ಎನ್ನತ್ತ ತೋಱದಿರಯ್ಯಾ" – ಅದೇ, ವಚನ 194.

197. ಸಕಲ ಪುರಾತನರ ವಚನಗಳು, ಪು. 611.

198. ಸಕಲ ಪುರಾತನರ ವಚನಗಳು, ಪು. 427.

ಶ್ವಪಚದಿಂದ ಕರಕಷ್ಟ ನೋಡಾ ಕೂಡಲ ಚನ್ನಸಂಗಮದೇವಾ"[199] ಶರಣರಲ್ಲಿ "ಜಾತಿ ಸಂಕರವಾದ ಬಳಿಕ ಕುಲ ಹುಡುಕಬರದೆಂದು" ಬಸವಣ್ಣ ಬೋಧಿಸುತ್ತಾನೆ. ಯಾವುದೇ ಜಾತಿಯ ಶಿವಭಕ್ತನಿಗೆ ತಾನು ಹೆಣ್ಣು ಕೊಡಲು ಸಿದ್ಧವೆಂದು ಬಸವ ಹೇಳುತ್ತಾನೆ.[200] ಏಳು ವಾರಗಳಿವೆ, ಹದಿನೆಂಟು ಕುಲಗಳಿವೆ ಎಂದು ಲೋಕದ ಜನ ಹೇಳಿದರೆ ಅದನ್ನು ತಾನು ಒಪ್ಪುವುದಿಲ್ಲವೆನ್ನುತ್ತಾನೆ ಚನ್ನಬಸವ. ಇರುವುದು ಎರಡೇ ವಾರ–ಒಂದು ಇರುಳು ಇನ್ನೊಂದು ಹಗಲು; ಹಾಗೆಯೇ ಇರುವುದು ಎರಡೇ ಕುಲ–ಒಂದು ಭವಿಕುಲ, ಇನ್ನೊಂದು ಭಕ್ತನ ಕುಲ.[201] ವಚನಕಾರರು ಜಗತ್ತನ್ನು ಎರಡು ಗುಂಪುಗಳಾಗಿ ಮಾಡಿ ನೋಡಿದರು; ಶಿವಭಕ್ತರಲ್ಲದವರೆಲ್ಲ ಒಂದು ಗುಂಪು, ಇವರೇ ಭವಿಗಳು; ಶಿವಭಕ್ತರೆಲ್ಲ ಇನ್ನೊಂದು ಗುಂಪು. ಶಿವಲಿಂಗವು ಯಾರನ್ನು ಸ್ಪರ್ಶಿಸಿಲ್ಲವೋ ಅವರೆಲ್ಲ ಕೀಳುಜಾತಿ, ಶಿವಲಿಂಗ ಸ್ಪರ್ಶಿಸಿದವರೆಲ್ಲ ಮೇಲು ಜಾತಿ. ಏಕೆಂದರೆ ಶಿವಲಿಂಗವು ಸ್ಪರ್ಶಮಣಿಯಂತೆ ತಾನು ಮುಟ್ಟಿದವರನ್ನೆಲ್ಲ ಶ್ರೇಷ್ಠಗೊಳಿಸುತ್ತದೆ.[202] ಹದಿನೈದನೇ ಶತಮಾನದ ಸಂಕಲನಕಾರನಾದ ಗುಬ್ಬಿಯ ಮಲ್ಲಣ್ಣನ ಪ್ರಕಾರ ಶಿವಭಕ್ತರನ್ನು ಶಿವನೆಂದೇ ತಿಳಿಯಬೇಕು–ಅವನು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಅಂತ್ಯಜ ಯಾರೇ ಆಗಿರಲಿ. ಲಿಂಗಭಕ್ತನಾದರೆ ಅವನು ಮಹಾಪಾತಕ ಕೋಟಿಯನ್ನೇ ಮಾಡಿದ ಶ್ವಪಚನಾಗಿದ್ದರೂ ಆ ಪಾತಕವೆಲ್ಲ ನಾಶವಾಗಿ ಹೋಗುತ್ತದೆ.[203] ಕುಲ

---

199. ಚನ್ನಬಸವಣ್ಣನವರ ವಚನಗಳು, ವಚನ 129. ಇದನ್ನೂ ನೋಡೀ – 'ಶ್ರೀ ಮಹಾಭಸಿತವ ಧರಿಸಿದಾತನೆ ಸದ್ಬ್ರಾಹ್ಮಣ.' ಅದೇ. ವಚನ 212. ವೇದಶಾಸ್ತ್ರ ಆಗಮ ಪುರಾಣಗಳಿಗೆ ವಿರುದ್ಧವಾದ ಮಟ್ಟಿ ಮಸಿಗಳನ್ನು ಧರಿಸಿದವನೆ ಶ್ವಪಚ.

200. "ಆವ ಕುಲವಾದರೇನು ಶಿವಲಿಂಗವಿದ್ದವನೆ ಕುಲಜನು. ಕುಲವನಱಸುವರೆ ಶರಣರಲ್ಲಿ ಜಾತಿ ಸಂಕರವಾದ ಬಳಿಕ? 'ಶಿವೇ ಜಾತ ಕುಲೇ ಧರ್ಮ ಪೂರ್ವಜನ್ಮ ವಿವರ್ಜಿತಃ ಉಮಾ ಮಾತಾ ಪಿತಾ ರುದ್ರಃ ಈಶ್ವರಃ ಕುಲಮೇವ ಚ ॥' ಎಂಬುದಾಗಿ ಒಕ್ಕುವ ಕೊಂಬೆನವರಲ್ಲಿ ಕೂಸ ಕೊಡುವೆ ಕೂಡಲ ಸಂಗಮದೇವ ನಂಬುವೆ ನಿಮ್ಮ ಶರಣರನು" – ಬಸವಣ್ಣನವರ ಷಟ್‌ಸ್ಥಳದ ವಚನಗಳು. ವಚನ 717.

201. ಚನ್ನಬಸವಣ್ಣನವರ ವಚನಗಳು, ವಚನ 412 ಇದರ ಜೊತೆ ಹೋಲಿಸಿ. ಮಧುವಯ್ಯನ ವಚನ : "ಕುಲವೆರಡಿಲ್ಲದೆ ಹಲವಿಲ್ಲ. ದಿನವೆರಡಿಲ್ಲದೆ ಸಪ್ತದಿನವಿಲ್ಲ. ಅಱವು ಮಱವೆ ಯೆರಡಲ್ಲದೆ ಬೇರೊಂದು ತೊಡಿಗೆಯಿಲ್ಲ. ಅರ್ಕೇಶ್ವರ ಲಿಂಗ ಏಕರೂಪದವನಲ್ಲದೆ ಬಹುನಾಮದವನಲ್ಲ" – ಸಕಲ ಪುರಾತನರ ವಚನಗಳು, I, ಪು. 46.

202. ಬಸವಣ್ಣನವರ ಷಟ್‌ಸ್ಥಳದ ವಚನಗಳು, ವಚನ 142.

203. ಗಣಭಾಷಿತರತ್ನಮಾಲೆ, ಪು. 244 – 'ಲಿಂಗಭಕ್ತನಾದಲ್ಲಿ ಮಹಾಪಾತಕಕೋಟಿಯ ಮಾಡಿದ ಶ್ವಪಚನಾದರೆಯೂ ಆ ಪಾತಕವೆಲ್ಲವೂ ಕೆಟ್ಟುಹೋಹುದು. ಆತನೊಡನೆ ಸಂಭಾಷಣೆಯ ಮಾಡಿದರೆ ಮುಕ್ತಿಯುಂಟು. ಮೇಲೆ ಶಿವಗಣಂಗಳಿಗೆ ಮುಖ್ಯನಹನು.

ಲೈಂಗೇ–

ಹಲವಾದರೂ ಎಲ್ಲವೂ ಒಂದೇ ("ಕುಲ ಹಲವಾದಡೇನು ಉತ್ಪತ್ತಿ ಸ್ಥಿತಿ ಲಯ ಒಂದೇ ಭೇದ") ಎನ್ನುತ್ತಾನೆ ಅಂಬಿಗ ಚೌಡಯ್ಯ.[204] ಊರ ಹೊರಗಿರುವವನು ಮಾತ್ರ ಹೊಲೆಯನಲ್ಲವೆಂದೂ ತಾಯಿಗೆ ಬೈದವ, ನಡೆಯುವ ದಾರಿಗೆ ಮುಳ್ಳು ಹಚ್ಚಿದವ, ಬ್ರಾಹ್ಮಣನನ್ನು ಹಸುಗಳನ್ನು ಕೊಂದವ ಎಂದೆಲ್ಲ ಹೇಳಿ, ಈ ಊರ ಒಳಗಿನ ಹೊಲೆಯರಿಗಿಂತ ಹೊರಗಿನ ಹೊಲೆಯರ ಹುಟ್ಟಿದ "ಮೂರು ದಿನಕ್ಕೆ ಪಿಂಡಕ್ಕೆ ನೆಲೆಯಾಯಿತ್ತು", ಅವರು ತಿಂದ ದನಗಳ ಚರ್ಮದಿಂದ ಹರಿಗೋಲು, ಚರ್ಮಾವುಗೆ, ಮಿಣಿ, ಮೃದಂಗವಾಯಿತ್ತೆಂದೂ ಅವರ ಸಿದ್ದಲಿಕೆಯ (=ತಿತ್ತಿ, ಚರ್ಮದ ಚೀಲ) ತುಪ್ಪ, ಬುದ್ಧಲಿಕೆಯ ಎಣ್ಣೆ[205]ಗಳನ್ನು ಶೀಲವಂತರು ತಿಂದು ಸವಿದರೂ, ಜಗಳ ಬಂದಾಗ ಹೊಲೆಯರನ್ನು ಹೊಲೆಯರೆಂದು ಜಾತಿ ಹಿಡಿದು ನಿಂದಿಸುವುದನ್ನು ಕಟುವಾಗಿ ಟೀಕಿಸಿದ್ದಾನೆ.[206] ಉಳಿದಂತೆ ಸೌಹಾರ್ದದಲ್ಲಿದ್ದು ಜಗಳದಲ್ಲಿ ಜಾತಿ ಹಿಡಿದು ನಿಂದಿಸುವ ಪದ್ಧತಿ ಆಧುನಿಕ ಕಾಲದ್ದು ಎಂದೇನೂ ಭಾವಿಸಬೇಕಾಗಿಲ್ಲ. "ಕುಲ"ವನ್ನು ಹಿಡಿದು ಜಗಳಮಾಡುವ ವ್ಯಕ್ತಿಗಳ ಬಗ್ಗೆ ಸಿದ್ಧರಾಮನಿಗೆ ಅಸಹನೆ ಇದೆ. ಕುಲವನ್ನು ನೋಡಬೇಡಿ, ನಡೆ ಅಥವಾ ಶೀಲವನ್ನು ನೋಡಿ ಎನ್ನುತ್ತಾನೆ.[207]

---

**ಸ್ತ್ರೀ ವಾಥ ಪುರುಷಃ ಷಂಡೋ ಚಂಡಾಲೋ ದ್ವಿಜವಂಶಜಃ ।**
**ನ ಜಾತಿಭೇದೋ ಲಿಂಗಾರ್ಚೇ ರುದ್ರಗಣಾಃ ಸ್ಮೃತಾಃ ॥**

...ಬ್ರಾಹ್ಮಣನು ಕ್ಷತ್ರಿಯನು ವೈಶ್ಯನು ಶೂದ್ರನು ಅಂತ್ಯಜ ಮೊದಲಾದ ಅವನೊಬ್ಬ ನಾದರೆಯೂ ಆಗಲಿ ಶಿವಭಕ್ತನಾದರೆ ಆತನೆಂದೂ ಮನುಷ್ಯನಲ್ಲ, ಶಿವನೆಂದು ತಿಳಿವುದು.'

204. ಅಂಬಿಗರ ಚೌಡಯ್ಯನ ವಚನಗಳು, ವಚನ 218.

205. ಎರಡೂ ಚರ್ಮದ ಚೀಲಗಳೇ ಆದರೂ, ತುಪ್ಪವನ್ನು ಹಾಕುತ್ತಿದ್ದ ಚೀಲವನ್ನು ಸಿದ್ದಲಿಕೆಯೆಂದೂ ಎಣ್ಣೆ ಹಾಕುತ್ತಿದ್ದ ಚೀಲವನ್ನು ಬುದ್ಧಲಿಕೆಯೆಂದೂ ಹಿಂದೆ ಕರೆಯು ತ್ತಿದ್ದರು.

206. "...ಜಗಳ ಬಂದಾಗ ನನ್ನ ಕುಲ ಹೆಚ್ಚು ನಿನ್ನ ಕುಲ ಹೆಚ್ಚು ಕಡಿಮೆ ಎಂದು ಬಡಿ ದಾಡುವ ಕುನ್ನಿ ನಾಯಿಗಳ ದೋಟಿಯ ಮೇಲೆ ನಮ್ಮ ಪಡಿಹಾರಿ ಉತ್ತಣ್ಣಗಳ ವಾಮ ಪಾದುಕೆಯ ಕೊಂಡು ಅವರ ಅಂಗುಳ ಮೆಟ್ಟಿ ಫಡಫಡನೆ ಹೊಡಿ ಎಂದಾತ ನಮ್ಮ ದಿಟ್ಟ ಅಂಬಿಗರ ಚೌಡಯ್ಯ ನಿಜಶರಣನು" – ಅಂಬಿಗರ ಚೌಡಯ್ಯನ ವಚನಗಳು, ವಚನ 219.

207. "...ಕುಲವೆಂದು ಹೋರಾಡುವ ಅಣ್ಣಗಳಿರಾ, ಕೇಳಿರೋ. ಕುಲವೇ ಡೋಹರನ, ಕುಲವೇ ಮಾದಾರನ, ಕುಲವೇ ದುರ್ವಾಸನ, ಕುಲವೇ ವ್ಯಾಸನ, ಕುಲವೇ ವಾಲ್ಮೀಕನ, ಕುಲವೇ ಕೌಂಡಿಲ್ಯನ? ಕುಲವ ನೋಳ್ಪಡೆ ಹುರುಳಿಲ್ಲ. ಅವರ ನಡೆ ನೋಳ್ಪಡೆ ನಡೆಯುವರು ತ್ರಿಲೋಕದಲ್ಲಿಲ್ಲ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ." ಶ್ರೀ ಸಿದ್ಧ

## ಅಂತರಜಾತೀಯ ವಿವಾಹ

ಲಿಂಗವಂತರಲ್ಲಿ ಅಂತರಜಾತೀಯ ವಿವಾಹಗಳಾಗುವುದನ್ನು ಹಲವರು ಪ್ರೋತ್ಸಾಹಿಸಿರುವುದನ್ನು ಮೇಲೆ ನೋಡಿದ್ದೇವೆ. ಬ್ರಾಹ್ಮಣ ಮಧುವಯ್ಯನಿಗೆ ಅಸ್ಪೃಶ್ಯ ಹರಳಯ್ಯನಿಗೂ ('ಅಲ್ಲಯ್ಯ' ಎಂದಿದೆ ಬಸವಪುರಾಣದಲ್ಲಿ) ವಿವಾಹ ಸಂಬಂಧ ವಾದುದರಿಂದ ವರ್ಣಾಶ್ರಮ ವ್ಯವಸ್ಥೆಯು ಹಾಳಾಗದಂತೆ ನೋಡಿಕೊಳ್ಳುವುದು ಅಂದಿನ ರಾಜರು ತಮ್ಮ ಕರ್ತವ್ಯವೆಂದು ಭಾವಿಸಿದ್ದ ಕಾಲದ ಬಿಜ್ಜಳ ಅವರಿಬ್ಬರ ಕಣ್ಣನ್ನು ಕೀಳಿಸಿದನೆಂಬ ಕತೆ ಪ್ರಸಿದ್ಧವಾಗಿದೆ. ಹರಳಯ್ಯ ಮಧುವಯ್ಯರ ಬಂಧುತ್ವದ ಐತಿಹಾಸಿಕತೆಯ ಬಗ್ಗೆ ಸಂದೇಹಗಳನ್ನು ಎತ್ತುವುದು ಸುಲಭ. ವಚನಗಳಲ್ಲಿ ಆ ಬಗ್ಗೆ ಉಲ್ಲೇಖವಿಲ್ಲ. ಹರಿಹರನ ಬಸವರಾಜದೇವರ ರಗಳೆಯಲ್ಲಿ "ಶಿವದ್ರೋಹವಂಗೈದ ಬಿಜ್ಜಳನ ಕೊಲಿಸುತಂ" ಎಂದಿಷ್ಟು ಮಾತ್ರ ಇದೆ. ಅಲ್ಲಿ ಬಿಜ್ಜಳ ಮಾಡಿದ 'ಶಿವದ್ರೋಹವೇನು' ತಿಳಿಯದು. ಬಸವ ಪುರಾಣದಲ್ಲಿ ಹರಳಯ್ಯ ಮಧುವಯ್ಯಗಳ ಮೇಲೆ ಬಿಜ್ಜಳನಿಗೆ ಯಾರೋ ಚಾಡಿ ಹೇಳಿದ್ದರಿಂದ ಅವರ ಮಾತು ಕೇಳಿ ರಾಜ ಅವರ ಕಣ್ಣು ತೆಗೆಸಿದನೆಂದಿದೆ ("ಸೊಗಸದವದಿರ ಮಾತಿಗ್ಹಳ್ಳಯ್ಯಗಳ ಮಧುವಯ್ಯ ಗಳನಾಗಳೆ ಜಗತಿಪಂ ತಪ್ಪೇನುವಿಲ್ಲದೆ ನೀತಿಯಲ್ಲೆಂದು ಬಗೆಯದವರಂ ಕರೆಸಿ ಕಣ್ಣಂ ತೆಗೆಸಿದನು"). ಇದರಿಂದ ಕುಪಿತಗೊಂಡ ಭಕ್ತರ ಪ್ರತಿನಿಧಿಯಾಗಿ ಜಗದೇವನು ಮೊಲ್ಲಯ್ಯ, ಬೊಮ್ಮಯ್ಯ ಎಂಬುವರ ಜೊತೆ ಹೋಗಿ ಬಿಜ್ಜಳನ್ನು ಸಂಹರಿಸುತ್ತಾನೆ. (ಬಸವಪುರಾಣ, ಸಂಧಿ 62) ಇಲ್ಲಿ ಹರಳಯ್ಯ ಮಧುವಯ್ಯಗಳ ಬಾಂಧವ್ಯದ ಸ್ಪಷ್ಟ ಉಲ್ಲೇಖವಿಲ್ಲದಿದ್ದರೂ, ಅವರದು 'ನೀತಿ' ಅಲ್ಲವೆಂದು ಕಣ್ಣು ತೆಗೆಸಿದ ವಿಚಾರವಿದೆ. ಸ್ಪೃಶ್ಯ ಅಸ್ಪೃಶ್ಯ ಉಲ್ಲೇಖವಿಲ್ಲದಿದ್ದರೂ, ಅವರದು 'ನೀತಿ' ಅಲ್ಲವೆಂದು ಕಣ್ಣು ತೆಗೆಸಿದ ವಿಚಾರವಿದೆ. ಹಿಂದೆ ಅಸ್ಪೃಶ್ಯ ಮತ್ತು ಬ್ರಾಹ್ಮಣರಾಗಿದ್ದ ಅವರು ಮಾಡಿರಬಹುದಾದ ಅನೀತಿ ಕಾರ್ಯವೆಂದರೆ ಪರಸ್ಪರ ನಂಟನ್ನು ಬೆಳೆಸಿಕೊಳ್ಳುವುದೇ ಆಗಿರಬೇಕೆಂದು ಅನುಮಾನಪಡಲು (infer) ಅವಕಾಶವಿದೆ. ವಚನವೊಂದರಲ್ಲಿ ಅವರಿಬ್ಬರಿಗೂ ನಿಕಟ ಸ್ನೇಹ, ಅತ್ಮೀಯತೆಗಳ ಸೂಚನೆಯಿರುವುದರಿಂದ ಅವರ ಬಾಂಧವ್ಯದ ಘಟನೆಗೆ ದುರ್ಬಲವಾದರೂ ಸ್ಪಷ್ಟ ಸಾಕ್ಷ್ಯಾಧಾರಗಳಿವೆ. ಮುಂದಿನ ವೀರಶೈವ ಕೃತಿಗಳು ಮಧುವಯ್ಯನ ಮಗಳನ್ನು ಹರಳಯ್ಯನ ಮಗನಿಗೆ ಕೊಟ್ಟುದನ್ನು ಸ್ಪಷ್ಟವಾಗಿ ಹೇಳುತ್ತವೆ. ಉದಾಹರಣೆಗೆ ಶರಣಲೀಲಾಮೃತ, ಗೂಳೂರು ಸಿದ್ಧವೀರಣ್ಣೊಡೆಯನ ಶೂನ್ಯ ಸಂಪಾದನೆಯಲ್ಲೂ ಅವರಿಬ್ಬರ ನಂಟಿನ ಸೂಚನೆಯಿದೆ ("ಹಳ್ಳಯ್ಯ ಮಧುವಯ್ಯಗಳು ಪರಮಹರುಷದೊಳು ಪ್ರವರ್ತಿಸಲು ಬಿಜ್ಜಳನು ಹಳ್ಳಯ್ಯ

---

ರಾಮೇಶ್ವರ ವಚನಗಳು, ವಚನ 518. ಇದನ್ನೂ ನೋಡಿ – "ಕುಲದಲ್ಲಿ ಶೂದ್ರನಾದ ಡೇನು? ಮನದಲ್ಲಿ ಮಹಾದೇವ ನೆಲೆಗೊಂಡವನೆ ವೀರಶೈವ ನೋಡಾ." ಅದೇ, ವಚನ 517.

ಮಧುವಯ್ಯಗಳ ಚರಿತ್ರೆ ನೀತಿಯಲ್ಲವೆಂದು ಮಥನಿಸಲು, ಬಹುವಿಧದ ದೃಷ್ಟವ ಕೊಡಲು ನಂಬುಗೆ ಮನಕ್ಕೆ ಸಾಲದೆ ಅವರಂ ಕರಸಿ ಕಣ್ಣಂ ತೆಗೆಯಿಸಲು...") ಜೈನ ಆಕರಗಳಲ್ಲೂ ಇಂತಹ ಬಾಂಧವ್ಯವೊಂದು ನಡೆಯಿತೆಂದು ಹೇಳಲಾಗಿದೆ. ಉದಾಹರಣೆಗೆ, ಧರಣಿಪಂಡಿತನ ಬಿಜ್ಜಳರಾಯಚರಿತೆಯಲ್ಲಿ (ಸಂ: ಮಾಸ್ತಿ ವೆಂಕಟೇಶ ಅಯ್ಯಂಗಾರ್. ಪು. 40) ಹರಳಯ್ಯ ಮಧುವಯ್ಯರು ನಂಟುತನ ಮಾಡಿದ್ದಕ್ಕೆ ಬಿಜ್ಜಳ ಅವರನ್ನು ನೊಗಕ್ಕೆ ಹಾಕಿ ಕೊಲ್ಲಿಸಿದನೆಂದಿದೆ.

ಬ್ರಾಹ್ಮಣ ಮತ್ತು ಅಸ್ಪೃಶ್ಯ ಶಿವಭಕ್ತರ ಮಧ್ಯೆ ನಡೆದ ವಿವಾಹದ ಘಟನೆಯು ಐತಿಹಾಸಿಕವೆಂಬುದಕ್ಕೆ ಸಮಕಾಲೀನವಾದ ಆಧಾರಗಳು ಕೆಲವಿವೆ. ಸಿದ್ಧರಾಮ ತನ್ನ ಒಂದು ವಚನದಲ್ಲಿ "ಕುಲದಿಂದಧಿಕವೆಂದು ಹೋರಾಡುವ ಅಣ್ಣಗಳಿರಾ, ಕೇಳಿರಯ್ಯಾ" ಎಂದು ಹೇಳುತ್ತ "ಬ್ರಾಹ್ಮಣನವ ಮಧುವಯ್ಯ, ಚಂಡಾಲನವ ಹರಳಯ್ಯ" ಎಂದು ಇಬ್ಬರ ಹೆಸರನ್ನು ಒಟ್ಟಿಗೆ ಹೇಳುತ್ತಾನೆ. ಅದೇ ವಚನದಲ್ಲಿ ಮಚ್ಚಿಗ ದುರ್ವಾಸ ದೇವಾಂಗನೆ ಊರ್ವಶಿಯರ ಹೆಸರನ್ನೂ ಚಂಡಾಲ ಪರಾಶರ, ಕಬ್ಬಿಲಗಿತ್ತಿಯಾದ ಕುಸುಮಗಂಧಿಯನ್ನೂ ಒಟ್ಟಿಗೆ ಹೆಸರಿಸುತ್ತಾನೆ.[208] ಪರಾಶರ (ವ್ಯಾಸನ ತಂದೆ) ಮತ್ತು ಕುಸುಮಗಂಧಿಯರ ಕತೆ ತಿಳಿದಿದೆ. ಹಾಗೆಯೇ ನಮಗೆ ದೊರಕದ ಯಾವುದೋ ಪೌರಾಣಿಕ ಕತೆಯಲ್ಲಿ ದುರ್ವಾಸ ಊರ್ವಶಿಯರು ಪರಸ್ಪರ ಪ್ರೀತಿಸಿದ ವಿಷಯ ದೊರಕಬಹುದು. ಹಾಗೆಯೇ ಮಧುವಯ್ಯ ಹರಳಯ್ಯನವರ ಸಂಸಾರಗಳ ಮಧ್ಯೆ ವಿವಾಹಸಂಬಂಧವೇರ್ಪಟ್ಟಿದ್ದು ಇಲ್ಲಿ ಸೂಚಿತವಾಗಿದೆ. ಅವರಿಬ್ಬರ ಸಂಸಾರಗಳ ಮಧ್ಯೆ ವಿವಾಹ ನಡೆಯಬೇಕೆಂದು ತೀರ್ಮಾನಿಸಿದ ಕೆಲಕಾಲದಲ್ಲಿಯೇ, ವಿವಾಹ ವಾಸ್ತವವಾಗಿ ನಡೆಯುವ ಮುನ್ನವೇ ಮಧುವಯ್ಯ ಹರಳಯ್ಯರ ಕಣ್ಣನ್ನು ಕೀಳಿಸಿದ ಪರಿಣಾಮವಾಗಿ ಕಲ್ಯಾಣದಲ್ಲಿ ಅಲ್ಲೋಲಕಲ್ಲೋಲವಾಯಿತೆಂಬ ಕತೆಯಿರುವುದರಿಂದ ಸಿದ್ಧರಾಮನ ವಚನ ಇಲ್ಲವೇ ಆ ಘಟನೆ ನಡೆದಾದ ಮೇಲೆ ಬರೆದುದಾದರೆ ವೈವಾಹಿಕ ಸಂಬಂಧವನ್ನೂ ಆ ಘಟನೆಗೆ ಮುನ್ನ ಬರೆದುದಾದರೆ ಅವರಿಬ್ಬರಿಗೆ ಇದ್ದ ಬಾಂಧವ್ಯದಂತಹ ನಿಕಟ ಸ್ನೇಹವನ್ನೂ ಹೇಳುತ್ತದೆ (ಆ ನಿಕಟ ಸ್ನೇಹ ಮುಂದೆ ನಂಟಾಗಿ ಪರಿಣಮಿಸಿರಬಹುದು).

ಹರಳಯ್ಯನ ವಚನಗಳು ದೊರೆತಿಲ್ಲ. ಆದರೆ ಮಧುವಯ್ಯನ ವಚನಗಳು ದೊರೆತಿವೆ, ಮತ್ತು ಅವುಗಳ ವಸ್ತುವಿಶ್ಲೇಷಣೆ ಬಹು ಕುತೂಹಲಕಾರಿಯಾದುದು.

---

208. ಶ್ರೀಸಿದ್ಧರಾಮೇಶ್ವರ ವಚನಗಳು, ವಚನ 519 – "ಕುಲದಿಂದಧಿಕವೆಂದು ಹೋರಾಡುವ ಅಣ್ಣಗಳಿರಾ ಕೇಳಿರಯ್ಯಾ; ಬ್ರಾಹ್ಮಣನವ ಮಧುವಯ್ಯ, ಚಂಡಾಲನವ ಹರಳಯ್ಯ; ದುರ್ವಾಸನವ ಮಚ್ಚಿಗ, ಊರ್ವಶಿಯಾಕೆ ದೇವಾಂಗನೆ; ಚಂಡಾಲನವ ಪರಾಶರ, ಕುಸುಮ ಗಂಧಿಯಾಕೆ ಕಬ್ಬಿಲಗಿತ್ತಿ; 'ಜಪತಸ್ತಪತೋ ಗುಣತಃ' – ಕಪಿಲಸಿದ್ಧ ಮಲ್ಲಿಕಾರ್ಜುನಾ ಕೇಳಾ ಕೇದಾರಯ್ಯ."

ಜಾತಿಯನ್ನು "ಕೊಲ್ಲುವ" ಮಾತಾಡಿದ್ದಾನೆ ಎರಡು ಕಡೆ.[209] ಜಾತಿಯನ್ನು ಕೊಲ್ಲುವುದು ಎಂಬುದಕ್ಕೆ ಬೇರೆ ಏನೇ ಅರ್ಥ ಮಾಡಿದರೂ ವ್ಯಕ್ತಿ ವ್ಯಕ್ತಿಯ ಜಾತಿಯನ್ನು ಕೊಲ್ಲಬೇಕು ಎಂಬಲ್ಲಿ ಜಾತಿ ಜಾತಿಗಳ ಮಧ್ಯೆ ಮಾನವ ಸಂಬಂಧಗಳಿಗೆ ಧಕ್ಕೆಯುಂಟು ಮಾಡುವ ಅಂಶವಿದ್ದರೆ ಆ ಜಾತಿಗಳನ್ನೇ ನಿರ್ದಯವಾಗಿ ಕಿತ್ತು ಹಾಕಬೇಕು ಎಂಬ ಧ್ವನಿ ಸ್ಪಷ್ಟವಾಗಿವೆ. ಮಧುವಯ್ಯನ ವಚನಗಳು ಗಾತ್ರದಲ್ಲಿ ಚಿಕ್ಕವಾಗಿದ್ದು ಅರ್ಥಗರ್ಭಿತವಾಗಿದ್ದರೂ ಅವುಗಳಲ್ಲಿ ಬರುವ ಮೈಲಿಗೆ ಪ್ರತಿಮೆಗಳು ನಮ್ಮ ಗಮನವನ್ನು ಸೆಳೆಯುತ್ತವೆ. ದೇವಾಲಯದಲ್ಲಿ ಹೊಲೆಯರು ಪೂಜೆ ಮಾಡುತ್ತಿರುವುದು, ಸಮಗಾರರ ಬಾಗಿಲ ಹೊರಗೆ ಬ್ರಾಹ್ಮಣರು ಕಾದು ನಿಂತಿರುವುದು, ಬ್ರಾಹ್ಮಣನು ಹೊಲತಿಯ ಗುಪ್ತಾಂಗವನ್ನು ನೆಕ್ಕುವುದು[210] ಇವೆಲ್ಲ ಬೆಡಗಿನ ಅರ್ಥ ಪ್ರತೀತವಾಗಬೇಕಾಗಿದ್ದರೂ ಸಮಾಜದ ಮಡಿವಂತಿಕೆಯು ನಿಷೇಧಿಸಿರುವ ಎಂದರೆ ಸಾಲದು, ಯೋಚಿಸಲೂ ಹೆದರುವ ಪ್ರತಿಮೆಗಳನ್ನು ನಾವು ಮಧುವಯ್ಯನಲ್ಲಿ ಕಾಣುತ್ತೇವೆ. ಇವಲ್ಲದೆ ಹಂದಿಯನ್ನು ನಾಯಿ ಕೊಲ್ಲುವುದು, ನೊಣ ಯುದ್ಧದಲ್ಲಿ ರಕ್ತವನ್ನು ಕುಡಿಯುವುದು, ಬಲೆಯಲ್ಲಿ ಸತ್ತ ಮೃಗ, ಹಾವನ್ನೂ ಹದ್ದನ್ನೂ ಒಟ್ಟಿಗೆ ತಿನ್ನುವುದು, ಸೂನೆಗಾರನ ಮನೆ, ಸತ್ತವನ ಮನೆ, ಬ್ರಾಹ್ಮಣನನ್ನು ಕೊಲ್ಲುವುದು, ಆಡಿನ ಕಾಲನ್ನು ಕೋಡಗದ ಹಲ್ಲನ್ನು ಉಡುವಿನ ನಾಲಗೆಯನ್ನು ಕೂಡಿಸಿ ತಿನ್ನುವುದು, ಸುರೆಯನ್ನು ಕುಡಿಯುವುದು, ಜಿಂಕೆಯ ಕಣ್ಣು ಕಿತ್ತು ತಿರುಳನ್ನು

---

209. **"ಜಾತಿ ಜಾತಿಯ ಕೊಂಡು ನಿಹಿತ ಅನಿಹಿತ ಕೆಡಿಸಿ**
**ಜಾತ ಅಜಾತನ ಕಂಡು ನಿಹಿತವಾಗಿರಿ**
**ಅರ್ಕೇಶ್ವರ ಲಿಂಗವನಹೆವುದಕ್ಕೆ"**

– ಸಕಲ ಪುರಾತನರ ವಚನಗಳು. I, ಪು. 35.

"ಸಾಧನೆಯಲ್ಲಿ ಬೆಳೆದ ವಿಹಂಗನಂತೆ, ದೀಹವಾದ ಮೃಗದಂತೆ
ಜಾತಿ ಜಾತಿಯ ಕೊಂದು ಭೂತ ಹಿತವುಂಟೆ?
ಸಮಯ ಸಮಯವ ಕೊಂದು ಬಲ್ಲಹ ಬಲ್ಲಹನ ಸೋಲ್ತು ಒಳ್ಳಿತ್ತಲ್ಲಾಯೆಂದು ಎಲ್ಲರೊಳಗೆ ಹೇಳುವ ಕುಲ್ಲನ ಬಲ್ಲತನವನೊಲ್ಲ ಅರ್ಕೇಶ್ವರ ಲಿಂಗ" – ಅದೇ, ಪು. 44.

210. ಅದೇ, ಪು. 42 – "ಊರೊಳಗಣ ದೇವಾಲಯದಲ್ಲಿ ಐವರು ಹೊಲೆಯರು ಹೊಕ್ಕು ದೇವರ ಪೂಜಿಸುತ್ತೈದಾರೆ, ಹೊಲೆಯರು ಮುಟ್ಟಿ ದೇವಾಲಯ ಹೊಱಗಾಯಿತ್ತು: ದೇವರೊಳಗದೆ, ಕುಲಜರು ಹೊಲಬುದಪ್ಪಿ ಹೊಲೆ ಒಳಗಾಯಿತ್ತು ಅರ್ಕೇಶ್ವರ ಲಿಂಗವನಹೆವುದಕ್ಕೆ"; (ಮುಂದೆ ನೋಡಿ) ಅದೇ, ಪು. 41–"ಮೂವರು ಸಮಗಾಱರ ಬಾಗಿಲಲ್ಲಿ ಆಯಿವರು ಹಾರುವರು ಹರಸುತ್ತೈದಾರೆ. ಒಬ್ಬನಿಗೆ ಕೊಂಬ ಕೊಟ್ಟು ಒಬ್ಬನಿಗೆ ಕೊಳಗ ಕೊಟ್ಟು ಒಬ್ಬನಿಗೆ ಕರುಳ ಕೊಟ್ಟು ಒಬ್ಬನಿಗೆ ಗರ್ಭವ ಕೊಟ್ಟು ಒಬ್ಬನಿಗೆ ಏನೂ ಇಲ್ಲದೆ ತಬ್ಬಿಬ್ಬಾಯಿತ್ತು, ಆ ಮಾದಿಗನ ಮನೆಯ ಹೊಕ್ಕು ಮಾದಗಿತ್ತಿಯ ಅದ ತಿಂದ ಅರ್ಕೇಶ್ವರ ಲಿಂಗವನಹೆದ ಕಾರಣ."

ತಿನ್ನುವುದು, 'ನನ್ನ ತಲೆಯನ್ನು ಕುಟ್ಟಿ ನನ್ನ ಗುಪ್ತಾಂಗವನ್ನು ಕೊಯ್ದುಕೊಳ್ಳಿ ಎಂದಳು' ಎನ್ನುವ ಅರ್ಥದ್ದು, ಇತ್ಯಾದಿ ವಚನಗಳಲ್ಲಿ ರಕ್ತ, ಮಾಂಸ, ಹೆಂಡ, ಬಲೆ, ಹಿಂಸೆ ಇತ್ಯಾದಿ ಬಹು ಒರಟಾದ, ತಾಮಸ ಪ್ರಪಂಚದ ಅಥವಾ ಹೊಲೆಯ ಪ್ರಪಂಚದ ಪ್ರತಿಮೆಗಳೇ ಬಂದಿರುವುದು ಆಕಸ್ಮಿಕವೂ ಅಲ್ಲ, ನಿಷ್ಕಾರಣವೂ ಅಲ್ಲ. ಉಳಿದ ವಚನಕಾರರಲ್ಲಿ ವಿರಳವಾಗಿ ಕಾಣಿಸಿಕೊಳ್ಳುವ ಈ ಪ್ರತಿಮೆಗಳು ಮಧುವಯ್ಯ ನಲ್ಲಿ ಕಾಣಿಸಿಕೊಳ್ಳಲು ಬಹುಶಃ ಕಾರಣ ಹೀಗಿದೆ. ಅವನು ಬ್ರಾಹ್ಮಣ ಮತದಿಂದ ವೀರಶೈವನಾಗಿ ಪರಿವರ್ತನೆ ಹೊಂದಿ, ಹೊಸ ಮತಾಂತರಿಗಳು ಹೆಚ್ಚು ಅಭಿಮಾನ ಶಾಲಿಗಳೆಂಬ ಲೋಕೋಕ್ತಿಗೆ ಅನುಗುಣವಾಗಿಯೋ (ಅಥವಾ ಸ್ವಾಭಾವಿಕವಾಗಿಯೋ) ಜಾತಿಶ್ರೇಣಿಯ ಇನ್ನೊಂದು ತುದಿಯ ಹೊಲೆಯರ ಹರಳಯ್ಯನ ಸ್ನೇಹವನ್ನು ಮಾಡಿರಬಹುದು. ಆ ಸ್ನೇಹದ ಬಗ್ಗೆ ಮಡಿ ಸಮಾಜ ಆಡಿರಬಹುದಾದ ಕುಹಕದ ಮಾತುಗಳಿಗೆ ಉತ್ತರವಾಗಿ ಬೇಕೆಂದೇ ಬಳಸಿದ ಮೈಲಿಗೆ ಪ್ರತಿಮೆಗಳಿಗೂ ಅವನಿಗೂ ಹರಳಯ್ಯನಿಗೂ ಇದ್ದ ಸ್ನೇಹಕ್ಕೂ ತಾರ್ಕಿಕ ಸಂಬಂಧವಿರುವಂತಿದೆ. ಬ್ರಾಹ್ಮಣನಾದ ಬಸವ ತಾನು ಹೊಲೆಯರ ದಾಸ ದಾಸಿಯರಿಗೆ ಜನಿಸಿದವನೆಂದು ತನ್ನನ್ನು ಅಬ್ರಾಹ್ಮಣೀಕರಿಸಿಕೊಂಡಂತೆ ಮಧುವಯ್ಯನಲ್ಲೂ ಇನ್ನೂ ಸೂಕ್ಷ್ಮ ಪ್ರಮಾಣದ ಅಂತಹುದೇ ಯತ್ನವಿದೆ.

## ಅಸ್ಪೃಶ್ಯ ವಚನಕಾರರು

ಹರಳಯ್ಯ ಮಧುವಯ್ಯಗಳ ರಕ್ತ ಸಂಬಂಧವು ಜಾತಿಭೇದ ನಿವಾರಣೆಯ ಪ್ರಯತ್ನದ ಶಿಖರ, ಲಿಂಗಾಯತ ಚಳವಳಿಯ ಒಂದು ಮುಖ್ಯ ಫಲ. ಹೊಲೆಯರಿಗೆ ಭಕ್ತಿಲಾಂಛನಗಳು ದೊರೆತುದು ಮಾತ್ರವೇ ಅಲ್ಲ, ಶಿವಭಕ್ತರೆಂಬ ಗುಂಪಿಗೆ ಸೇರ್ಪಡೆಯಾದುದು ಮಾತ್ರವಲ್ಲ, ಅವರಲ್ಲಿ ಕೀಳರಿಮೆ ಕುಗ್ಗಿ ಆತ್ಮಾಭಿಮಾನ ಕುದುರಿದ್ದನ್ನೂ ನಾವು ಲಕ್ಷಿಸಬೇಕು. ಮತಾಂತರವು ಆಂತರಂಗಿಕ ಬದಲಾವಣೆ ಗಳಿಗೂ ಕಾರಣವಾದುದು ಮುಖ್ಯ. ಇದಕ್ಕೆ ಒಂದು ಆಧಾರ: ಅಸ್ಪೃಶ್ಯರು ಊರೊಳಕ್ಕೆ ಬರುವಾಗ 'ಸಂಬೋಳಿ' ಎಂದು ಕೂಗುತ್ತ ಬರುತ್ತಿರಬೇಕಿತ್ತು; ಆದರೆ ಬಸವ ಇತ್ಯಾದಿ ಸಾಮಾಜಿಕ ನಾಯಕರ ಸಂಪರ್ಕ ಬಂದು ಶಿವಭಕ್ತರಾದ ಅವರು ಬಳಿಕ ಹಾಗೆ ಕೂಗುವುದನ್ನು ನಿಲ್ಲಿಸಿ ಕಲ್ಯಾಣದ ಮೇಲ್ಜಾತಿಯ ಜನರ ಅಸಮಾಧಾನವನ್ನು ಕಟ್ಟಿಕೊಂಡಿದ್ದರು.[211] ಇನ್ನೊಂದು ಆಧಾರ, ಅಸ್ಪೃಶ್ಯ ವಚನಕಾರರ ಕೃತಿಗಳು. ಅವರು

---

211. ಬಸವಪುರಾಣದಲ್ಲಿ ಬ್ರಾಹ್ಮಣರು ಬಸವನ ಬಗ್ಗೆ ಬಿಜ್ಜಳನ ಹತ್ತಿರ ಹೇಳಿದ ದೂರಿನಲ್ಲಿ, ಅವನಿಂದಾಗಿ ನಾಗಿಮಯ್ಯ ಸಂಬೋಳಿ ಎನ್ನುವುದನ್ನು ನಿಲ್ಲಿಸಿದ್ದಾನೆ, ಯಾರನ್ನೂ ಲೆಕ್ಕಿಸುತ್ತಿಲ್ಲ ಎಂಬುದೂ ಸೇರಿದೆ. ನೋಡಿ – "ಭಕ್ತನು ಮದಿಸಿ ಪುರವೀಧಿಯಲ್ಲಿ ಬರುತಂ ಬೆದಱ, ಸಂಬೋಳಿಯೆನ್ನನು, ಎಮ್ಮುವನಿನಿತು ಬಗೆಗೊಳ್ಳ"; "ಕಲ್ಯಾಣ ಕಟಕವದೆಲ್ಲವುಂ ಹೊಲೆಗಲಸಿ ಹೋಯಿತು" (ಬಸವಪುರಾಣ. 55. 5–6).

ಕನ್ನಡದಲ್ಲಿ ಕೃತಿರಚನೆ ಮಾಡಿ ತಮ್ಮನ್ನು ತಾವು ಅಭಿವ್ಯಕ್ತಪಡಿಸಿಕೊಂಡುದು ಮಾತ್ರ ವಲ್ಲದೆ ತಮ್ಮ ವೈಯಕ್ತಿಕದ ಜೊತೆಗೆ ಸಾಮಾಜಿಕ ಸಮಸ್ಯೆಗಳನ್ನೂ ಹೊರಗೆ ಹಾಕಿ ಹಗುರ ಮಾಡಿಕೊಂಡಿದ್ದಾಗಲಿ ತಾವು ಮನುಷ್ಯರೆಂದು ಅನುಭವಿಸಿ ಜೊತೆಗಾರರನ್ನೂ ಆ ದಿಸೆಯಲ್ಲಿ ಚಿಂತಿಸುವಂತೆ ಮಾಡಿದುದಾಗಲಿ ಕರ್ನಾಟಕದ ಸಾಮಾಜಿಕ ಮೇಲು ಚಲನೆಗೆ ಇವು ಒಳ್ಳೆಯ ಸಾಕ್ಷ್ಯಾಧಾರಗಳು.[212] ಅಸ್ಪೃಶ್ಯ (ಅಥವಾ ಹಿಂದೆ ಅಸ್ಪೃಶ್ಯ ರಾಗಿದ್ದ) ವಚನಕಾರರನ್ನು ಸಂಕ್ಷಿಕ್ತವಾಗಿ ಇಲ್ಲಿ ಸಮೀಕ್ಷಿಸುವುದು ಅಗತ್ಯ.

## ಮಾದಾರ ಚನ್ನಯ್ಯ ಮತ್ತು ಡೋಹರ ಕಕ್ಕಯ್ಯ

ಇಬ್ಬರನ್ನೂ ಜೇಡರ ದಾಸಿಮಯ್ಯ (ಸು. 1140) ಸ್ಮರಿಸಿರುವುದರಿಂದ ಮತ್ತು ಬಸವಣ್ಣ (1160) ಇತ್ಯಾದಿ ವಚನಕಾರರೂ ಆತ್ಮೀಯವಾಗಿ ಹೇಳಿರುವುದರಿಂದ ಇವರು ಬಸವನ ಹಿರಿಯ ಸಮಕಾಲೀನರೆಂದೂ ವಚನಕಾರರಾಗಿ ಬಸವನಿಗಿಂತ ಈಚಿನವರೆಂದೂ ಈಗಾಗಲೇ ತೋರಿಸಿದ್ದೇನೆ.[213] ಇಬ್ಬರ ಬಗ್ಗೆಯೂ ನಮಗೆ ಐತಿಹಾಸಿಕವಾಗಿ ಗೊತ್ತಿರುವುದು ಅತ್ಯಲ್ಪ. ಚೋಳ ಚಕ್ರವರ್ತಿಯ ಹತ್ತಿರವಿದ್ದ ಚನ್ನಯ್ಯನೂ ವಚನಕಾರ ಚನ್ನಯ್ಯನೂ ಭಿನ್ನರೋ ಅಭಿನ್ನರೂ ತಿಳಿಯದು. (ಹರಿಹರನಲ್ಲಿ ಬರುವ ಚನ್ನಯ್ಯನ ಕತೆಗೆ ಮುಂದೆ ನೋಡಿ). ಬಹುಶಃ ಅಭಿನ್ನರು. ಡೋಹರ ಕಕ್ಕಯ್ಯ ಬಸವನಿಗೆ ವೈಯಕ್ತಿಕವಾಗಿ ಬಹಳ ಆತ್ಮೀಯನಾಗಿದ್ದು ಅವನ ಹರಕೆಯಿಂದ ಚನ್ನಬಸವಣ್ಣ ಹುಟ್ಟಿದನೆಂದು ಕತೆಗಳಿವೆ. ಈ ಇಬ್ಬರನ್ನು ಎಲ್ಲ ವಚನಕಾರರೂ ಅತ್ಯಂತ ಆತ್ಮೀಯವಾಗಿ ಸ್ಮರಿಸಿದ್ದಾರೆ. ಬಸವಣ್ಣ ಚನ್ನಯ್ಯನನ್ನು ತನ್ನ ವಚನಗಳಲ್ಲಿ ಇಪ್ಪತ್ತೊಂಬತ್ತು ಬಾರಿ ಕಕ್ಕಯ್ಯನನ್ನು ಹನ್ನೊಂದು ಬಾರಿ ನೆನೆದಿದ್ದಾನೆ.[213.1] ಇಲ್ಲಿಯ ಚನ್ನಯ್ಯ ಚೋಳನ ಹತ್ತಿರವಿದ್ದ ಚನ್ನಯ್ಯನೇ. ಏಕೆಂದರೆ ಚನ್ನಯ್ಯನ ಅಂಬಲಿಯನ್ನು ಶಿವ ಉಂಡುದು, ಚೋಳನ ಹತ್ತಿರ ಚನ್ನಯ್ಯ ಕೆಲಸಕ್ಕಿದ್ದುದು ಇವುಗಳನ್ನು ಬಸವ ಸ್ಮರಿಸಿದ್ದಾನೆ. ಚನ್ನಯ್ಯನ ಭಕ್ತಿ ಅವನಿಗೆ ಆದರ್ಶ. ತಾನು ಅವನ ಬಂಟ, ದಾಸನ ಮಗ, ಮಗನ ಮಗ, ಮೊಮ್ಮಗ ಮರಿಮಗನೆಂದು ಬಗೆಬಗೆಯಾಗಿ ಹೇಳಿಕೊಂಡಿದ್ದಾನೆ. ಬಸವಣ್ಣನ ವಚನಗಳನ್ನು ಆಧರಿಸಿ ಹೇಳುವು

---

212. ಅವರ ಸಾಮಾಜಿಕ ಏರಿನಂತೆಯೇ ಅವರ ಆರ್ಥಿಕ ಪರಿಸ್ಥಿತಿಯೂ ಸುಧಾರಿಸಿತೇ ಎನ್ನುವ ಪ್ರಶ್ನೆಗೆ ಉತ್ತರಿಸಲು ಏನೂ ಆಧಾರಗಳಿಲ್ಲವಾದರೂ ಆತ್ಮಾಭಿಮಾನವನ್ನು ಬೆಳೆಸಿಕೊಂಡ ಅವರು ಬಸವನ ಕಾಲಾನಂತರ ಒಂದೆರಡು ತಲೆಮಾರಾದರೂ ಹಿಂದಿಗಿಂತ ಉತ್ತಮವಾಗಿ ಬದುಕಿರಬಹುದು ಎಂಬ ಅನುಮಾನವನ್ನು (inference) ಮಾಡಬಹುದು. (ಈ ಬಗ್ಗೆ ಮುಂದೆ ಹೆಚ್ಚಿನ ವಿವರಗಳು.)

213. ಎಂ. ಚಿದಾನಂದಮೂರ್ತಿ: ವಚನಸಾಹಿತ್ಯ. ಬೆಂಗಳೂರು. 1975. ಪು. 9, 15.

213.1 ನೋಡಿ. ಎಸ್.ಆರ್. ಗುಂಜಾಳ: ಬಸವಣ್ಣನವರ ಪದಪ್ರಯೋಗಕೋಶ. ಧಾರವಾಡ. 1937, ಪು. 261, 401–3.

ದಾದರೆ ಅವನ ಗೌರವಕ್ಕೆ ಚನ್ನಯ್ಯನಷ್ಟು ಪಾತ್ರನಾದ ಭಕ್ತ ಮತ್ತೊಬ್ಬನಿಲ್ಲ. ಕಕ್ಕಯ್ಯನನ್ನು ಬಸವ ತನ್ನ ಬೊಪ್ಪನೆಂದು (ಬೊಪ್ಪನೆಂದು. ಬೊಪ್ಪ=ತಾತ) ಕರೆದುಕೊಂಡಿದ್ದಾನೆ. ಚನ್ನಯ್ಯನ ಮನೆಯ ದಾಸಿಯ ಮಗ, ಕಕ್ಕಯ್ಯನ ಮನೆಯ ದಾಸಿಯ ಮಗಳು ಇಬ್ಬರೂ ಬೆರಣಿಯಾಯಲು ಹೋಗಿ ಸಂಗವನ್ನು ಮಾಡಿದ್ದರಿಂದ ತಾನು ಹುಟ್ಟಿದವನೆಂದು ಒಂದು ಕಡೆ ಹೇಳಿಕೊಂಡಿದ್ದಾನೆ.[213.2]

ಬೇರೆ ವಚನಕಾರರೂ ಇವರಿಬ್ಬರನ್ನು ಬಹುವಾಗಿ ಪ್ರಶಂಸಿಸಿದ್ದಾರೆ. ನೀಲಮ್ಮನಿಗೆ ಅಲ್ಲಮ, ಅಜಗಣ್ಣರು ಎಷ್ಟೋ ಕಕ್ಕಯ್ಯ ಚಿಕ್ಕಯ್ಯರೂ ಅಷ್ಟೇ ಬೇಕಾದವರು,[213.3] 'ಡೋಹರಂಗೆ ಹೊಲೆಯಂಗೆ' ಶಿವನು ಒಲಿದನೆಂದು ಅಂಬಿಗರ ಚೌಡಯ್ಯ ಹೇಳುವಾಗ[213.4] ಸ್ಪಷ್ಟವಾಗಿ ಅವರಿಬ್ಬರೂ ಕಕ್ಕಯ್ಯ ಚನ್ನಯ್ಯರೇ ಎಂಬಲ್ಲಿ ಅನುಮಾನವಿಲ್ಲ. ಚೌಡಯ್ಯನ ಪ್ರಕಾರ ಮತಗಳು ಮನುಷ್ಯರು ಮಾಡಿಕೊಂಡ ಕೃತಕ ಏರ್ಪಾಟುಗಳು ("ಲೋಕದ ಮಾನವರು ಮಾಡುವರು ಸಮಯಂಗಳನು"). ಈ ಸಮಯಗಳು ಅಥವಾ ಮತಗಳು–ಸ್ಪೃಶ್ಯತೆ, ಅಸ್ಪೃಶ್ಯತೆ ಇತ್ಯಾದಿ ಮತದ ಕಟ್ಟುಪಾಡುಗಳು–ಬೇಡ (ಕಣ್ಣಪ್ಪ), ಜೇಡ (ದಾಸಿಮಯ್ಯ), ಡೋಹರ, ಹೊಲೆಯರಿಗೆ ಅನ್ವಯವಾಗಲಿ ಎಂದು ಮನುಷ್ಯರು ಹೇಳಲೇಬೇಕು; ಏಕೆಂದರೆ ಅವರಿಗೆ ಹಾಗೆ ಹೇಳದೇ ವಿಧಿಯಿಲ್ಲ. ಆದರೆ ಶಾಸ್ತ್ರದ ಆ ಕಟ್ಟುಪಾಡುಗಳನ್ನು ಭಕ್ತರ ದಾರಿಯಲ್ಲಿ ಒಡ್ಡಿದರೆ ಕಲ್ಲು ಮುಳ್ಳು ಮೂಡಿಯಾವು ಎನ್ನುತ್ತಾನೆ. ಶಾಸ್ತ್ರಗಳು ಭಕ್ತರಿಗೆ ನಿರ್ಬಂಧಗಳನ್ನು ಹಾಕುವಲ್ಲಿ ನಿಷ್ಫಲವೆನ್ನುವ ಮಾತನ್ನು ಇನ್ನೊಂದು ವಚನದಲ್ಲೂ ಹೇಳುತ್ತಾನೆ.[214] ಚನ್ನಬಸವಣ್ಣ ("ಚನ್ನಯ್ಯನ

---

213.2 "ಚೆನ್ನಯ್ಯನ ಮನೆಯ ದಾಸಿಯ ಮಗನು, ಕಕ್ಕಯ್ಯನ ಮನೆಯ ದಾಸಿಯ ಮಗಳು ಇವರಿಬ್ಬರು ಹೊಲದಲಿ ಬೆರಣಿಗೆ ಹೋಗಿ ಸಂಗವ ಮಾಡಿದರು. ಇವರಿಬ್ಬರಿಗೆ ಹುಟ್ಟಿದ ಮಗ ನಾನು, ಕೂಡಲ ಸಂಗಮದೇವ ಸಾಕ್ಷಿಯಾಗಿ" (ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ 345).

213.3 ಶಿವಶರಣೆಯರ ವಚನಗಳು, ಪು. 223 – "ಅಲ್ಲಮನ ಸಂಗ, ಅಜಗಣ್ಣನ ಸಂಗ, ಕಕ್ಕಯ್ಯನ ಸಂಗ, ಚಿಕ್ಕಯ್ಯನ ಸಂಗ, ಎಲ್ಲರ ಸಂಗ..." ('ಸಂಗ' ಎಂಬುದು ಕೂಡಲ ಸಂಗಮದೇವರನ್ನೂ ಸೂಚಿಸಬಹುದು).

213.4 "ಬೇಡಂಗೆ ಜೇಡಂಗೆ ಡೋಹರಂಗೆ ಹೊಲೆಯಂಗೆ ರೂಢಿಗೀಶ್ವರನೊಲಿದ ಪರಿಯ ನೋಡಾ. ಲೋಕದ ಮಾನವರು ಮಾಡುವರು ಸಮಯಂಗಳನು. ಮಾಡಲಿಕ್ಕೆ ಅವರೇನು ಸ್ವತಂತ್ರರೇ. ಇವನೊಡ್ಡಿದ ದಾರಿನಲ್ಲಿ ಕಲ್ಲು ಮುಳ್ಳು ಮೂಡುವುವೆಂಬಾತ ನಮ್ಮ ಅಂಬಿಗರ ಚೌಡಯ್ಯ" – ಅಂಬಿಗರ ಚೌಡಯ್ಯನ ವಚನಗಳು, ವಚನ 220.

214. "ಕಷ್ಟನ ಮನೆಯಲ್ಲಿ ಸೃಷ್ಟಿಗೀಶ್ವರನುಂಬಾಗ ಎತ್ತ ಹೋದುವು ನಿಮ್ಮ ಶಾಸ್ತ್ರಂಗಳು" – ಅದೇ. ವಚನ 223. 'ಕಷ್ಟ' ಎಂದರೆ ಕೆಳಜಾತಿಯವನು. 'ಕಷ್ಟಜಾತಿ' 'ಕಷ್ಟಕುಲ' ಕೆಳಜಾತಿಯನ್ನು ಹೇಳುತ್ತವೆ. ನೋಡಿ – "ಕಷ್ಟ ಜಾತಿಯ ಜನ್ಮದಲ್ಲಿ ಜನಿಸಿದೆ, ಎನಗಿದು ವಿಧಿಯೆ" – ಬಸವಣ್ಣನವರ ಷಟ್‌ಸ್ಥಳದ ವಚನಗಳು, ವಚನ 342.

ಕೈಯಲ್ಲಿ ಹಾಗವ ಕೊಟ್ಟು ಕಂಕಣದ ಕೈಯ ಕಂಡು ಧನ್ಯರಾಗಿರೆ ನೀವು"– ಚನ್ನಬಸವಣ್ಣನವರ ವಚನಗಳು, ವಚನ 492) ಸಿದ್ಧರಾಮರೂ ("ಮಾದಾರನಲ್ಲಿ ಉಂಡ ಶಿವನು", "ಚೋಳನ ಭೋಜನವನ್ನೊಲ್ಲದೆ ಚನ್ನಯ್ಯನ ಕೂಡ ಜಾತಿಗೆಟ್ಟು ಮೈಗೊಟ್ಟು ಒಲಿದೆ ದೇವಾ" (–ಶ್ರೀ ಸಿದ್ಧರಾಮೇಶ್ವರ ವಚನಗಳು, ವಚನ 114, 365) ಚನ್ನಯ್ಯನನ್ನು ಕೊಂಡಾಡಿದ್ದಾರೆ. ಕಕ್ಕಯ್ಯನ ಪ್ರಸಾದವನ್ನು ಹಂಬಲಿಸಿ ಕಾದು ಬಸವಣ್ಣ ಪಡೆದನೆಂದು ಸಿದ್ಧರಾಮ ಹೇಳಿದ್ದಾನೆ. ("ಕಕ್ಕಯ್ಯನವರಲ್ಲಿ ಒಕ್ಕ ಪ್ರಸಾದ ವನು । ಸಾಕ್ಷಾತು ಬಸವೇಶ ಕಾದು ತಂದಾ । ನಿಕ್ಷೇಪವಾಗಿ ಪಡೆದಕ್ಷಯ ಶೇಷವನು । ಭಿಕ್ಷಕ್ಕೆ ಕರುಣಿಸೈ ಯೋಗಿನಾಥ" – ಶ್ರೀ ಸಿದ್ಧರಾಮೇಶ್ವರ ವಚನಗಳು. ಪು. 500).

ಮಾದಾರ ಚನ್ನಯ್ಯನ ಹತ್ತು ವಚನಗಳು ಮೊರೆತಿವೆ.[215] ಮನುಷ್ಯರನ್ನು ನಾಲ್ಕು ವರ್ಣಗಳಾಗಿ ವಿಂಗಡಿಸುವುದು ತಪ್ಪೆಂದೂ, ನೀಚ ಶ್ರೇಷ್ಠವೆಂಬ ಎರಡು ಕುಲ ಗಳೇ ಹೊರತು ಹದಿನೆಂಟು ಜಾತಿಗಳಲ್ಲವೆಂದೂ ಹೇಳುತ್ತಾನೆ. ಬ್ರಹ್ಮವನ್ನು ಅರಿತರೆ ಬ್ರಾಹ್ಮಣ, ಜೀವಿಗಳನ್ನು ಕೊಲ್ಲುವವನು ಸಮಗಾರ ("...ಇಂತೀ ಜಾತಿಗೋತ್ರದೊಳ–ಗಾದ ನೀಚ ಶ್ರೇಷ್ಠವೆಂಬ ಎರಡು ಕುಲವಲ್ಲದೆ ಹೊಲೆ ಹದಿನೆಂಟು ಜಾತಿಯೆಂಬ ಕುಲ ವಿಲ್ಲ. ಬ್ರಹ್ಮವನಱೆದಲ್ಲಿ ಬ್ರಾಹ್ಮಣ, ಸರ್ವಜೀವಹತಕರ್ಮಕ್ಕೊಳಗಾಗಿದ್ದಲ್ಲಿ ಸಮಗಾಱ"). ಯಾವನ ನಡೆ ನುಡಿಗಳು ಸಮಂಜಸವಾಗಿವೆಯೋ ಅವನಿಗೆ 'ಕುಲ, ಹೊಲೆ, ಸೂತಕ' ಗಳಿಲ್ಲವೆಂದು ಹೇಳಿ "ಆಚಾರವೇ ಕುಲ, ಅನಾಚಾರವೆ ಹೊಲೆ" ಎಂಬ ಸೂತ್ರವಾಕ್ಯ ವನ್ನು ಕೊಟ್ಟಿದ್ದಾನೆ. ("ನಡೆ ನುಡಿ ಸಿದ್ಧಾಂತವಾದಲ್ಲಿ ಕುಲ ಹೊಲೆ ಸೂತಕವಿಲ್ಲ... ಆಚಾರವೇ ಕುಲ, ಅನಾಚಾರವೆ ಹೊಲೆ").[216] ಅವನ ಪ್ರಕಾರ ಸಪ್ತರ್ಷಿಗಳೆಲ್ಲರೂ

---

(ಕಕ್ಕಯ್ಯ, ಚನ್ನಯ್ಯ, ಶ್ವಪಚಯ್ಯರ ವಂಶದಲ್ಲಿ ಹುಟ್ಟಿ ತಾನು ಹೊಲೆಯನಾದೆನಲ್ಲಾ ಎಂಬ ತೋರಿಕೆಯ ಪಶ್ಚಾತ್ತಾಪ ಇಲ್ಲಿದೆ – ವಾಸ್ತವವಾಗಿ ಹಾಗೆ ಹೇಳಿಕೊಳ್ಳುವಲ್ಲಿ ಅವನಿಗೆ ಹಿಗ್ಗು). 'ಕನಿಷ್ಠ'ವೆಂಬುದೂ ಅದನ್ನೇ ಹೇಳುತ್ತದೆ. ಹಡದಪ್ಪಣ್ಣನ ಹೆಂಡತಿ ಲಿಂಗಮ್ಮನ "ಕನಿಷ್ಠದಲ್ಲಿ ಹುಟ್ಟಿದೆ, ಉತ್ತಮದಲ್ಲಿ ಬೆಳೆದೆ" ಎಂಬ ಮಾತನ್ನು ಗಮನಿಸಿ (ಶಿವಶರಣೆಯರ ವಚನಗಳು, ಪು, 254). 'ಕನಿಷ್ಠ' ಎಂದರೆ ಕೆಳಗಿನದು, ಹೀನ ವಾದದ್ದು ಎಂದರ್ಥ.

215. ಸಕಲಪುರಾತನರ ವಚನಗಳು. III .ಪು. 244.

216. "ಸಾಂಖ್ಯ ಶ್ವಪಚ, ಅಗಸ್ತ್ಯ ಕಬ್ಬಿಲ, ದುರ್ವಾಸ ಮಚ್ಚಿಗ, ದಧೀಚಿ ಕೀಲಿಗ, ಕಸ್ಯಪ ಕಮ್ಮಾರ, ರೋಮಜ ಕಂಚುಗಾಱ, ಕೌಂಡಿಲ್ಯ ನಾವಿದನೆಂಬುದನಱೆದು ಮತ್ತೆ ಕುಲವುಂಟೆಂದು ಫಲಕ್ಕೆ ಹೋರಲೇತಕೆ? ಇಂತೀ ಸಪ್ತಋಷಿಗಳೆಲ್ಲರೂ ಸತ್ಯದಿಂದ ಮುಕ್ತರಾದುದನಱೆಯದೆ ಅಸತ್ಯದಲ್ಲಿ ನಡದು ವಿಪ್ರರು ನಾವು ಘನವೆಂದು ಹೋರುವ ಹೊತ್ತು ಹೋಕರ ಮಾತೇಕಕ್ಕೆ?..." 'ಕೀಲಿಗ' ಎಂದರೆ ಮೀನುಗಾರ ಎಂದು ಅರ್ಥ ಕೊಟ್ಟಿದೆ ಕನ್ನಡ ನಿಘಂಟಿನಲ್ಲಿ (II. ಬೆಂಗಳೂರು, 1956. ಪು. 1863) ಕಾವ್ಯಸಾರದ ಒಂದು ಪದ್ಯದ ಪ್ರಕಾರ ಪೊಲೆಯ ಮಾದಿಗ ಕೀಲಿಗ ಡೊಂಬ ಇವು ಹೇಸಿಗೆ

ಕೀಳುಕುಲದವರು. ಅವರು ಸತ್ಯಮಾರ್ಗದಲ್ಲಿ ನಡೆದು ಮುಕ್ತರಾದರೇ ಹೊರತು, ತಮ್ಮ ಜಾತಿ ಅವರಿಗೆ ಅಡ್ಡಿ ಬರಲಿಲ್ಲ. (ಸಪ್ತರ್ಷಿಗಳು ಕೀಳು ಕುಲದವರೆನ್ನುವ ಮಾತು ವಚನಗಳಲ್ಲಿ ಉದ್ದಕ್ಕೂ ಬರುತ್ತದೆ. ಅದಕ್ಕೆ ಮೂಲ ಏನೋ ಇನ್ನೂ ಶೋಧವಾಗ ಬೇಕಾಗಿದೆ. ಸಂಸ್ಕೃತ ವಾಙ್ಮಯದಲ್ಲಿ ಅದಕ್ಕೆ ಸೂಚನೆಗಳು ಇದ್ದಂತಿಲ್ಲ.) ಮಾದಾರ ಜಾತಿಯ ಚನ್ನಯ್ಯ ವಿಶೇಷವಾಗಿ ಜಾತಿ ಸಮಸ್ಯೆ ಕುರಿತು ಪ್ರಸ್ತಾಪಿಸಿರುವುದು ಸಹಜ ವಾಗಿದೆ. ಅವನ ವಚನ "ಕೈ ಉಳಿ ಕತ್ತಿ ಅಡಿಗೂಂಟಕ್ಕಡಿಯಾಗಬೇಡ ಅಜೆ ನಿಜಾತ್ಮರಾಮರಾಮನ" ಎಂಬ ಅಂಕಿತವು ಅವನ ವೃತ್ತಿಯನ್ನು ಸೂಚಿಸುವುದಾಗಿದೆ.

ಡೋಹರ ಜಾತಿಯ ಜನ ಬೆಳಗಾವಿ, ವಿಜಾಪುರ, ಧಾರವಾಡ ಇತ್ಯಾದಿ ಜಿಲ್ಲೆ ಗಳಲ್ಲಿ ಮಾತ್ರವಲ್ಲದೆ ಮಹಾರಾಷ್ಟ್ರ ಆಂಧ್ರ ಪ್ರದೇಶದಲ್ಲೂ ಇದ್ದಾರೆ. ಚರ್ಮ ಹದ ಮಾಡುವುದು ಇವರ ಮುಖ್ಯ ಕಸಬು ಮತ್ತು ಬಹುತೇಕ ಇವರ ಮನೆಮಾತು ಮರಾಠಿ. ರೈತರಿಗೆ ಬೇಕಾದ ನೀರು ಎತ್ತುವ ಚರ್ಮದ ಕಪಲಿಯನ್ನು ಡೋಹರ ರಿಂದ ಶಿವ ಪಾರ್ವತಿಯರು ಮಾಡಿಸಿದರೆನ್ನುವ ಜಾನಪದ ಕತೆಗಳಿವೆ.[217] ಡೋಹರ, ಸಮಗಾರ, ಮಾದರ ಬೇರೆ ಬೇರೆ ಅಸ್ಪೃಶ್ಯ ಜಾತಿಗಳಾದರೂ ಅವರಲ್ಲಿ ಪರಸ್ಪರ ಕೆಳೆತನವಿದೆ.

ಇಂತಹ ಜಾತಿಯಲ್ಲಿ ಹುಟ್ಟಿದ ಕಕ್ಕಯ್ಯನ ಆರು ವಚನಗಳು ಸಿಕ್ಕಿವೆ. "ಅಭಿನವ ಮಲ್ಲಿಕಾರ್ಜುನಾ" ಅವನ ಅಂಕಿತ. ಅಲ್ಲಮ, ಬಸವರನ್ನು ಸ್ಮರಿಸಿ ಅವರಿಂದ ತಾನು ಉದ್ಧಾರವಾದುದಾಗಿ ಹೇಳಿಕೊಂಡಿದ್ದಾನೆ. ತಾನು "ಕಷ್ಟ ಜಾತಿ ಕೀಳು ಕುಲ"ದಲ್ಲಿ ಹುಟ್ಟಿದವನೆಂದು ಸಂಕೋಚವಿಲ್ಲದೆ ಹೇಳಿಕೊಂಡಿದ್ದಾನೆ.[218] ತನ್ನದೇ ಜಾತಿ ಕಾರಣ ವಾಗಿ ದೇವರನ್ನು ಕೈಮುಟ್ಟಿ ಪೂಜಿಸಲಾಗುವುದಿಲ್ಲವೆಂದು ಹೇಳುವಲ್ಲಿ ಅಸ್ಪೃಶ್ಯತೆಯ ಶಾಪವನ್ನು ಒಂದು ಕಡೆ ಸೂಚಿಸಿದ್ದಾನೆ. ಇದು ದೇವಸ್ಥಾನಕ್ಕೆ ಅಸ್ಪೃಶ್ಯರಿಗೆ ಇದ್ದ ಪ್ರವೇಶ ನಿರ್ಬಂಧವನ್ನು ಹೇಳಬಹುದು. ಗುರುವಿನ ಹಸ್ತಸ್ಪರ್ಶದಿಂದ, ಗುರು ಕೊಟ್ಟ ಲಿಂಗದಿಂದ ತನ್ನ ಕಷ್ಟಕುಲದಲ್ಲಿ ಹುಟ್ಟಿದ ಕರ್ಮ ಕಳೆಯಿತೆಂದು ಸಮಾಧಾನ ಪಟ್ಟುಕೊಂಡಿದ್ದಾನೆ. ಹುಟ್ಟಿನಿಂದಾದ ಹೊಲೆತನ ಲಿಂಗ ಮುಟ್ಟಿ ಬಯಲಾಯಿತು

---

ಜಾತಿಗಳು. ಶ್ರಾವಕಾಚಾರದ ಪ್ರಕಾರ ಇವರು ನೀಚಕುಲದವರು: "ಕೆಲರ್ ನೀಚಕುಲದೊಳ್ ಪುಟ್ಟಿ... ಪೊಲೆಯರುಂ ಮಾದಿಗರುಂ ಕೀಲಿಗರುಮೆನಿಸಿ" (–ಅದೇ). 'ಕಬ್ಬಿಲ' ಎಂದರೆ ಬೇಡ.

217. 'ಮಾಯಾ ಪ್ರಸಾದ'': ಪರಮಪ್ರಸಾದಿ ಮಹಾಶಿವಶರಣ ಕಕ್ಕಯ್ಯ. ಬೆಂಗಳೂರು. 1980, ಪು. 9.

218. "ಕಪ್ಪು ಜಾತಿ ಕೀಳುಕುಲದಲ್ಲಿ ಹುಟ್ಟಿಸಿದೆಯಯ್ಯ, ಎಲೆ ಲಿಂಗ ತಂದೆ ಕೆಟ್ಟೆನಯ್ಯ ನಿಮ್ಮ ಮುಟ್ಟಿ ಪೂಜಿಸಿದಂತೆ ಪೂಜೆಗೊಳ್ಳೆನೆಂದು. ನನ್ನ ಕೈ ಮುಟ್ಟದಿರ್ದರೆ ಮನ ಮುಟ್ಟ ಲಾಗದೆ ಅಭಿನವ ಮಲ್ಲಿಕಾರ್ಜುನಾ" (ಕಕ್ಕಯ್ಯನ ವಚನ. ಮೇಲಿನ ಪುಸ್ತಕದಿಂದ).

ಎಂದೂ ಹೇಳಿರುವುದು ಉಳಿದ ಶಿವಭಕ್ತರ ಮಧ್ಯೆಯಾದರೂ ಅವನು ಸ್ಪೃಶ್ಯನಾದುದರ ಸೂಚನೆಯಿರಬಹುದು.[219] ಸಾಧಕನಾಗಿ ಅವನು ಪಡೆದ ಅನುಭಾವವನ್ನು ಹೇಳಿಕೊಂಡಿದ್ದಾನೆ. ತನ್ನ ಎಲ್ಲ ಇಂದ್ರಿಯ ಸುಖಗಳನ್ನು ಲಿಂಗಕ್ಕೆ ಅರ್ಪಿಸಿದ್ದರಿಂದ ಪಂಚೇಂದ್ರಿಯಗಳು 'ಬಯಲಾದು'ದನ್ನು ಹೇಳಿದ್ದಾನೆ. ತನ್ನ "ಅಂತರಂಗದಲ್ಲಿ ಜ್ಞಾನಜ್ಯೋತಿ ಎಡೆಗೊಂಡಿ"ದ್ದನ್ನೂ ಹೇಳಿರುವುದಲ್ಲದೆ, ತುತ್ತತುದಿಯ ಐಕ್ಯಸ್ಥಿತಿಗೆ ತಾನು ಮುಟ್ಟಿರುವ ಸಂಗತಿಯನ್ನೂ ಹೇಳಿಕೊಂಡಿದ್ದಾನೆ.[220]

ಹೀನ ಕುಲದ ಶಾಪ ಅಪಮಾನಗಳನ್ನು ಹೊತ್ತು ಬದುಕುತ್ತಿದ್ದ ಕಕ್ಕಯ್ಯನಂಥವರಿಗೆ ಮೊರಕಿದ ಭಕ್ತಿಯ ಸ್ವಾತಂತ್ರ್ಯವು ತಿಳಿಗೊಂಡ ವಾತಾವರಣವನ್ನು ಸೃಷ್ಟಿಸಿತು. ಉಳಿದವರಿಗೆ ಭಕ್ತಿ ಗಮನಾರ್ಹವಲ್ಲದ ಮಾಮೂಲಿ ವಿಷಯವಾಗಿದ್ದರೆ ಕಕ್ಕಯ್ಯನಂಥವರಿಗೆ ಅದು ಅಪೂರ್ವ ಸಾಮಾಜಿಕ ಧಾರ್ಮಿಕ ಅವಕಾಶವಾಗಿದ್ದು ಅದನ್ನು ಅವರು ಮನಃಪೂರ್ವಕ ಶ್ರದ್ಧೆಯಿಂದ ಆಚರಿಸಿ ತೃಪ್ತಿಯನ್ನು ಪಡೆದರು. "ಅಭಿನವ ಮಲ್ಲಿಕಾರ್ಜುನನಲ್ಲಿ ಸುಖಿಯಾದೆನು"–ಇಂತಹ ಮಾತು ಉಳಿದವರಿಗಿಂತ ಅಸ್ಪೃಶ್ಯ ವಚನಕಾರರಲ್ಲಿ ಹೆಚ್ಚಿನ ಅರ್ಥವನ್ನು ಪಡೆಯುತ್ತದೆ.

ಒಬ್ಬ ಕಕ್ಕಯ್ಯನ ಕಂಕರಿ ವಾದ್ಯಕ್ಕೆ ಶಿವನು ಹಿಗ್ಗಿ ಕುಣಿದನೆಂದು ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರವು (I. ಪು. 257–8) ಹೇಳುತ್ತದೆ. ಹೊಲೆಯರು ಹಿಡಿಯುತ್ತಿದ್ದ ಕೋಲಿಗೆ ಕಂಕರಿಗೋಲು ಎಂಬ ಹೆಸರಿದ್ದಿತಾದರೂ ಇದು ಆ ಕಂಕರಿ ಅಲ್ಲ. ಹಲವು ವಾದ್ಯಗಳಲ್ಲಿ ಕಂಕರಿಯೂ ಒಂದಾಗಿದ್ದಿತು. ಡೋಹರ ಕಕ್ಕಯ್ಯ ಒಬ್ಬ ಕಲಾವಿದನಾಗಿದ್ದನೆಂಬುದಕ್ಕೆ ಪ್ರಾಚೀನ ಆಧಾರಗಳು ಸಾಲವು.[221] ಕಂಕರಿ ಕಕ್ಕಯ್ಯ,

---

219. "ಎನ್ನ ಕಷ್ಟಕುಲದಲ್ಲಿ ಹುಟ್ಟಿದೆನೆಂಬ ಕರ್ಮವ ಕಳೆದು ಮುಟ್ಟಿ ಪಾವನವ ಮಾಡಿ ಕೊಟ್ಟನಯ್ಯ ಎನ್ನ ಕರಸ್ಥಲಕೆ ಲಿಂಗವ"; "ಎನ್ನ ಕಷ್ಟಕುಲದ ಸೂತಕ ನಿಮ್ಮ ಹಸ್ತ ಮುಟ್ಟಿದಲ್ಲಿ ಬಯಲಾಯಿತು. ಶುಕ್ಲಶೋಣಿತದಿಂದಾದ ಸೂತಕ ಲಿಂಗ ಮುಟ್ಟಲೊಡನೆ ಬಯಲಾಯಿತ್ತು."

220. "ನೆನೆಯಲಱಿಯ ನಿರ್ಧರಿಸಲಱಿಯೆ, ಮನವಿಲ್ಲಾಗಿ... ಜ್ಞಾತೃ ಜ್ಞಾನ ಜ್ಞೇಯಂಗಳೆಲ್ಲವ ಮೀರಿ ಅಭಿನವ ಮಲ್ಲಿಕಾರ್ಜುನನಲ್ಲಿ ಸುಖಿಯಾದೆನು."

221. ಬೆಳಗಾವಿ ಜಿಲ್ಲೆಯ ಕಕ್ಕೇರಿಯಲ್ಲಿ–ಇದು ಅಳ್ನಾವರ ರೈಲ್ವೆ ನಿಲ್ದಾಣಕ್ಕೆ ಒಂಬತ್ತು ಕಿಲೋ ಮೀಟರ್ ದೂರದಲ್ಲಿದೆ–ಕಕ್ಕಯ್ಯನು ಮಡಿದನೆಂದು ವದಂತಿಯಿದೆ. ಅಲ್ಲಿ ಅವನ ಹೆಸರು ಹೇಳುವ ಬಾವಿ ಕೆರೆಗಳೂ ಇವೆ. ಸಮಾಧಿಮಂದಿರದಲ್ಲಿ "ಬುದ್ಧ ದೇವರ ರೀತಿಯ ಮುದ್ರೆಯುಳ್ಳ ಕಕ್ಕಯ್ಯನ ಶಿಲಾಮೂರ್ತಿ" ಇದೆ. ಪದ್ಮಾಸನದಲ್ಲಿ ಕುಳಿತು ಗಡ್ಡವನ್ನೂ ಕೈಯಲ್ಲಿ ಕಡಗವನ್ನೂ ಎದೆಯ ಮೇಲೆ ಲಿಂಗವನ್ನೂ ಹೊಂದಿರುವ ಈ ವಿಗ್ರಹ ಅರ್ವಾಚೀನದ್ದಾಗಿರಬೇಕು. ಮಕ್ಕಳಾಗದ ಹೆಂಗಸರು ಈ ವಿಗ್ರಹಕ್ಕೆ ನಡೆದು ಕೊಳ್ಳುತ್ತಾರೆ. (ಅವನ ಪ್ರಸಾದದಿಂದ ಚನ್ನಬಸವ ಹುಟ್ಟಿದನೆಂಬ ಕತೆ ಇದಕ್ಕೆ ಪ್ರಚೋದನೆ ನೀಡಿರಬಹುದು). ಮಹಾಶಿವರಾತ್ರಿ ದಿನ ನಡೆವ ಕಕ್ಕೇಶ್ವರದ ಜಾತ್ರೆಗೆ

ಡೋಹರ ಕಕ್ಕಯ್ಯರಿಬ್ಬರೂ ಭಿನ್ನರು. ಡೋಹರ ಕಕ್ಕಯ್ಯನಿಗೂ ಅವನ ಹೆಂಡತಿ ಮಲ್ಲದೇವಿಗೂ ಧೂಳಯ್ಯ ಎಂಬ ಮಗನಾದನೆಂದೂ ಧೂಳಯ್ಯನಿಗೆ ಕಕ್ಕಯ್ಯನ ಸೋದರಿಯ ಮಗಳನ್ನು ಕೊಟ್ಟು ಲಗ್ನವಾಯಿತೆಂದೂ, ಧೂಳಯ್ಯನ ಮಗಳೇ ವರದಾನಿ ಗುಡ್ಡವ್ವೆಯೆಂದೂ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ ಹೇಳುತ್ತದೆ.[222] ಧೂಳಯ್ಯ ಒಬ್ಬ ವಚನಕಾರ; ಗುಡ್ಡವ್ವೆ ಒಬ್ಬ ಪ್ರಸಿದ್ಧ ಶಿವಭಕ್ತೆ.

## ಸಂಬೋಳಿ ನಾಗಿದೇವ ಅಥವಾ ಶಿವನಾಗಿಮಯ್ಯ

ಬಸವನ ಸಮಕಾಲೀನನಾಗಿ ಕಲ್ಯಾಣದ ಹೊರವಲಯದ ಹೊಲೆಗೇರಿಯಲ್ಲಿ ವಾಸಿಸುತ್ತಿದ್ದ ನಾಗಿದೇವನ ಮನೆಗೆ, ಅವನ ಭಕ್ತಿಯನ್ನು ಬಹುವಾಗಿ ಮೆಚ್ಚಿಕೊಂಡಿದ್ದ ಬಸವಣ್ಣ ಆಗಾಗ್ಗೆ ಹೋಗಿ ಬರುತ್ತಿದ್ದ. ಬಸವನ ಸಂಪರ್ಕ ಬಂದು ತನ್ನ ಜಾತಿಧರ್ಮದ 'ಸಂಬೋಳಿ' ಎಂದು ಕೂಗುವುದನ್ನು ಅವನು ನಿಲ್ಲಿಸಿದ್ದರೂ ಅವನ ಒಂದು ಕಾಲದ ವೃತ್ತಿಯ ಸೂಚಕವಾಗಿ ಸಂಬೋಳಿ ಎಂಬ ವಿಶೇಷಣವು ಅವನ ಹೆಸರಿಗೆ ಅಂಟಿಕೊಂಡಿತ್ತು. ಅವನ ಮನೆಗೆ ಹೋಗಿ ಅವನ ಜೊತೆ ಉಂಡುದಕ್ಕೆ ಬಿಜ್ಜಳ ಆಕ್ಷೇಪಿಸಿದಾಗ ಅವನ ಶ್ರೇಷ್ಠತೆಯನ್ನು ಪವಾಡವೊಂದರ ಮೂಲಕ ಸ್ಥಾಪಿಸಿ ದಂತೆ ಹರಿಹರ ಭೀಮಕವಿಗಳಲ್ಲಿ ಕಥೆಯಿದೆ (ಮುಂದೆ ನೋಡಿ).

ಅವನು ಒಂದೇ ಒಂದು ವಚನದಲ್ಲಿ ಆಧ್ಯಾತ್ಮಿಕ ಅನುಭವವೊಂದನ್ನು ವ್ಯವಸಾಯದ ಪ್ರತಿಮೆಯ ಮೂಲಕ ವ್ಯಕ್ತಪಡಿಸಿದ್ದಾನೆ.[223]

## ಅನಾಮಿಕ ನಾಚಯ್ಯ

ಮೊರಕಿರುವ ಒಂದೇ ಒಂದು ವಚನದಲ್ಲಿ[224] ನಾಚಯ್ಯನು ಸಮಾಜದ ವಂಚಕನೊಬ್ಬನನ್ನು ಚಿತ್ರಿಸುವುದರ ಮೂಲಕ ಸಮಾಜ ವಿಮರ್ಶೆಯನ್ನು ಮಾಡಿದ್ದಾನೆ.

---

ಸಾವಿರಾರು ಜನ ಲಿಂಗಾಯತರು ಡೋಹರರು ನೆರೆಯುತ್ತಾರೆ. ("ಮಾಯಾ ಪ್ರಸಾದ"ರ ಪುಸ್ತಿಕೆಯಿಂದ).

222. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ. II. ಸಂ: ಆರ್.ಸಿ. ಹಿರೇಮಠ ಮತ್ತು ಎಂ.ಎಸ್, ಸುಂಕಾಪುರ. ಧಾರವಾಡ. 1968, ಪು. 36.

223. ಸಕಲಪುರಾತನರ ವಚನಗಳು, III, ಪು. 297 – "ಘನಸುಖ ಮಹಾಸುಖವ ಮುಟ್ಟಲು ಸಮಸುಖಂಗಳ ಸುಖಿಸಬಲ್ಲ ಸುಖವನಲ್ಲಿಯೇ ಕೊಯ್ದು ಸೂಡ ಕಟ್ಟಬಲ್ಲ, ನಾಗಪ್ರಿಯ ಚೆನ್ನರಾಮೇಶ್ವರಾ, ನಿಮ್ಮ ಶರಣನು ಸುಖಿಸಬಲ್ಲ ಸುಖವನು." ದಲಿತ ವರ್ಗದ 'ಮಾಲ ಜಂಗಮ'ರನ್ನು ಆಂಧ್ರದಲ್ಲಿ 'ಶಿವನಾಗಮಯ್ಯಲು' (ಶಿವನಾಗಮಯ್ಯ ಗಳು) ಎನ್ನುತ್ತಾರೆ (ದಾಸನೂರು ಕೂಸಣ್ಣ: ಶೋಷಿತ ಜಂಗಮರ ಮೀಸಲಾತಿ).

224. ಅದೇ, ಪು. 8 – "ಹಸಿವಿಂಗೆ ಲಯವಿಲ್ಲ ವಿಷಯಕ್ಕೆ ಕುಲವಿಲ್ಲ. ಮರಣಕ್ಕೆ ಮನ್ನಣೆ ಯಿಲ್ಲ, ಆಸೆಗೆ ಹವಣಿಲ್ಲ. ವಂಚನನಾಮಿಕ, ನಾಚಯ್ಯ ಪ್ರಿಯ ಚನ್ನರಾಮಯ್ಯ." ನಾಚಯ್ಯ ಮತ್ತು ನಾಗಿದೇವರ ಅಂಕಿತಗಳಿಗಿರುವ ಹೋಲಿಕೆಯನ್ನು ಗಮನಿಸಿ.

ವಂಚಕನ ಹಸಿವಿಗೆ ಕೊನೆಯಿಲ್ಲ, ಇಂದ್ರಿಯ ಸುಖದ ಪ್ರಶ್ನೆ ಬಂದಾಗ ಜಾತಿಯನ್ನು ಗಮನಿಸ, ಸಾವಿನ ಬಗ್ಗೆ ಯೋಚನೆಯಿಲ್ಲ, ಆಸೆಗೆ ಇತಿ ಮಿತಿ ಇಲ್ಲ; ಅವನೇ ನಿಜವಾದ 'ಅನಾಮಿಕ' (ಹೊಲೆಯ). ಇಲ್ಲಿ ಅಸ್ಪೃಶ್ಯ ಜಾತಿಯ ವಚನಕಾರನೊಬ್ಬ ಮೇಲ್ಜಾತಿಯ ಶ್ರೀಮಂತರ ಬಗ್ಗೆ, ಅದರಲ್ಲೂ ಅವರ ಹೊಟ್ಟೆಬಾಕತನದ ಬಗ್ಗೆ ಬರೆಯುವಾಗ ತನ್ನ ಜಾತಿಯ ಜನರ ಹಸಿವಿನ ಸಮಸ್ಯೆ ಎದ್ದು ತೋರಿರಬೇಕು.[225] ಕೆಳವರ್ಗದವರಿಗೆ ಸದಾ ಹಸಿವು ಇದ್ದರೂ, ಏನು ಸಿಗುತ್ತದೆಯೋ ತಿಂದು ಹಸಿವು ಹೋಯಿತು ಎಂದು ಸಮಾಧಾನಪಟ್ಟುಕೊಳ್ಳಬೇಕು. ಶ್ರೀಮಂತನಿಗೋ ಸದಾ ಹಸಿವು, ಸದಾ ತಿನ್ನುತ್ತಲೇ ಇರಬೇಕು ("ಹಸಿವಿಂಗೆ ಲಯವಿಲ್ಲ").[226] ಅವನಿಗೆ ಸಾಮಾಜಿಕವಾಗಿ ಜಾತಿ ಬೇಕು; ತನ್ನ ದೇಹಸುಖಕ್ಕೆ ಜಾತಿ ಭೇದವಿಲ್ಲ. ಕೆಳವರ್ಗದ ಹೆಂಗಸರು ಅವನಿಗೆ ಭೋಗವಸ್ತುಗಳು. ನಾಚಯ್ಯ ನಿಜವಾದ ಹೊಲೆಯ ವಂಚಕರನ್ನು ಕಂಡಿರುವ ರೀತಿ ಇದು. 'ವಂಚಕನನಾಮಿಕ' ಎಂಬಲ್ಲಿ ಸಮಾಜ ದ್ರೋಹಿಗಳ ಬಗ್ಗೆ ರೋಷ ಎದ್ದು ಕಾಣುತ್ತದೆ.

## ಮಾದಾರ ಧೂಳಯ್ಯ

ಇವನು ಡೋಹರ ಕಕ್ಕಯ್ಯನ ಮಗ ಎಂದು ಹೇಳಲಾಗಿದೆ (ಆಧಾರ ಸಾಲದು). ಅಸ್ಪೃಶ್ಯ ವಚನಕಾರರಲ್ಲೆಲ್ಲ ಉರಿಲಿಂಗ ಪೆದ್ದಿಯನ್ನು ಬಿಟ್ಟರೆ ಬಹು ಹೆಚ್ಚಿನ ಸಂಖ್ಯೆಯ ವಚನಗಳನ್ನು – ಒಟ್ಟು ನೂರಾ ಎರಡು–ಬರೆದಿರುವನು. ಪಾದರಕ್ಷೆ ಹೊಲಿಯುವ ವೃತ್ತಿಯ ಇವನು ಒಮ್ಮೆ ತನ್ನ ಕಾರ್ಯದಲ್ಲಿ ನಿರತನಾಗಿರುವಾಗ ಶಿವನೇ ಬಂದರೂ ಉದಾಸೀನದಿಂದ ಇದ್ದನೆಂದು ಕತೆಯಿದೆ (ಈ ಅರ್ಥದ ಒಂದು ವಚನವೇ ಇದೆ).[227] ಈ ಕತೆಯ ಹಿಂದಿರುವ ಮನೋವಿಜ್ಞಾನ ಸ್ವಾರಸ್ಯವಾದುದು. ಸಾಮಾಜಿಕವಾಗಿ ತೀವ್ರ ನಿಷೇಧಗಳಿಗೆ ಒಳಗಾಗಿ ಯಾವುದೇ ಸ್ವಾತಂತ್ರ್ಯವೂ ಇರದ

---

225. ಸಾಮಾಜಿಕ ಸಮಸ್ಯೆಯಾಗಿ ಹಸಿವನ್ನು ದಾಖಲೆಗೊಳಿಸಿದ ಮೊದಲ ವಚನಕಾರ ಜೇಡರ ದಾಸಿಮಯ್ಯ. ಸಾಮಾನ್ಯ ಜನತೆಯ ಹಸಿವಿನ ತೀವ್ರತೆಯನ್ನು ಅದರ ಅನುಭವವಿಲ್ಲದ ಶಿವನಿಗೆ ನಿವೇದಿಸಿದವನು ಅವನು. ನೋಡಿ – "ಒಡಲುಗೊಂಡವ ಹಸಿವ, ಒಡಲುಗೊಂಡವ ಹುಸಿವ, ಒಡಲುಗೊಂಡವನೆಂದು ನೀನೊಮ್ಮೆ ಜಡಿದು ನುಡಿಯದಿರಾ... ನೀನೆನ್ನಂತೆ ಹಸಿದು ನೋಡಾ."

226. ನಾಚಯ್ಯನ ವಚನದ ಬಗ್ಗೆ ನಾನು ಹಿಂದೆ ಮಾಡಿದ ಒಂದು ವ್ಯಾಖ್ಯಾನಕ್ಕಿಂತ (ವಚನ ಸಾಹಿತ್ಯ, ಪು. 128) ಈಗಿನದು ಹೆಚ್ಚು ಸಮರ್ಪಕ.

227. ಸಕಲ ಪುರಾತನರ ವಚನಗಳು, I, ಪು. 468 – "ಅಟ್ಟೆಯ ಚುಚ್ಚುವ ಉಳಿಯ ದೊನೆಯಲ್ಲಿ ಪ್ರತ್ಯಕ್ಷವಾದ ಪರಮೇಶ್ವರನ ಕಂಡು ಇತ್ತಲೇಕಯ್ಯಾ ಕಾಯದ ತಿತ್ತಿಯ ಹೊತ್ತಾಡುವವನ ಮುಂದೆ? ನಿನ್ನ ಭಕ್ತರ ಠಾವಿನಲ್ಲಿಗೆ ಹೋಗಿ ಮುಕ್ತಿಯ ಮಾಡು, ನೀ ಹೊತ್ತ ಬಹುರೂಪ ತಪ್ಪದೆ ರಜತದ ಬೆಟ್ಟದ ಮೇಲಕ್ಕೆ ಹೋಗು, ನಿನ್ನ ಭಕ್ತರ ಮುಕ್ತಿಯ ಮಾಡು, ಕಾಮ ಧೂಮ ಧೂಳೇಶ್ವರನ ಕರುಣದಿಂದ ನೀನೆ ಬದುಕು."

ಒಂದು ಗುಂಪಿಗೆ ಇದ್ದಕ್ಕಿದ್ದಂತೆ ಸ್ವಾತಂತ್ರ್ಯ ಸಿಕ್ಕಾಗ, ಯಾವುದರ ಬಗ್ಗೆಯೂ ಅವರ ಪ್ರತಿಕ್ರಿಯೆ ಮತ್ತು ನಡವಳಿಕೆ ಸಮಾಧಾನ ಸ್ಥಿತಿಯದ್ದಾಗಿರುವುದು ಕಷ್ಟವಾಗುತ್ತದೆ. ಮೇಲ್ವರ್ಗದವರ ಬಗ್ಗೆ ಇದ್ದ ಶುದ್ಧ ವಿಧೇಯತೆಯು ಇನ್ನೊಂದು ತುದಿಗೆ ಹೋಗಿ ಶುದ್ಧ ಅವಿಧೇಯತೆಯಾಗಿಯೂ ಕಾಣಿಸಿಕೊಳ್ಳಬಹುದು. ಹೊಸದಾಗಿ ಬಂದ ಸ್ವಾಭಿಮಾನವು ಸ್ವಪ್ರೇಮವಾಗಿ, ತಾನು ಯಾರಿಗೂ ಯಾವುದಕ್ಕೂ ಅಡಿಯಾಳಲ್ಲ ಎಂಬ ಕ್ಷಮಾರ್ಹ ಜಂಬ ತೋರಬಹುದು. ಮಡಿವಾಳ ಮಾಚಯ್ಯ ನಾನು ಶಿವಭಕ್ತರ ಬಟ್ಟೆ ಬಿಟ್ಟು ಯಾರ ಬಟ್ಟೆಯನ್ನೂ ತೊಳೆಯುವುದಿಲ್ಲ ಎಂದು ಕೂಗುತ್ತ ಕಲ್ಯಾಣ ಪಟ್ಟಣದ ಬೀದಿ ಬೀದಿಯಲ್ಲಿ ತಿರುಗಿದುದು, ಅಂಬಿಗರ ಚೌಡಯ್ಯನ ವಚನಗಳಲ್ಲಿ ಬರುವ ಅನಾಗರಿಕ ಬೈಗುಳಗಳು, ಸಂಬೋಳಿ ಎಂದು ಕೂಗುವುದನ್ನು ನಿಲ್ಲಿಸಿ ಮೇಲ್ಜಾತಿಯವರನ್ನು ಶಿವನಾಗಮಯ್ಯ ಅನಾದರದಿಂದ ಕಂಡದ್ದು, ಕೊನೆಗೆ ಶಿವನನ್ನೇ ಒಂದು ಕ್ಷಣ ಮಾದಾರ ಧೂಳಯ್ಯ ಉದಾಸೀನದಿಂದ ನೋಡಿದ್ದು ಇವುಗಳನ್ನು ಸ್ವಲ್ಪ ವಿಮರ್ಶಿಸಿ ಇವುಗಳು ಧ್ವನಿಸುವ ಧೋರಣೆಯನ್ನು ಅರ್ಥಮಾಡಿಕೊಳ್ಳುವುದು ಅಷ್ಟು ಕಷ್ಟವಾಗಲಾರದು. ಮಾದಾರ ಧೂಳಯ್ಯನ ಕೃತ್ಯ ಅವನ ಕಾಯಕ ನಿಷ್ಠೆಯನ್ನು ಹೇಳುತ್ತದೆಯೆಂಬುದು ತೀರ ಸಾಂಪ್ರದಾಯಕವಾದ ಮಾಮೂಲಿ ಸಪ್ಪೆ ವ್ಯಾಖ್ಯಾನ.

ಅಸ್ಪೃಶ್ಯ ವಚನಕಾರರಲ್ಲಿ ಸಾಹಿತ್ಯಕ ಗುಣದ ಸುಂದರ ವಚನಗಳನ್ನು ಬರೆದಿರುವವರಲ್ಲಿ ಅವನು ಅಗ್ರಗಣ್ಯ. “ವಾದಕ್ಕೆ ಬಂಧವಲ್ಲದೆ ನಾದಕ್ಕೆ ಬಂಧವುಂಟೆ”; “ಸುಳಿವ ಅನಿಲಂಗೆ ಮೈಯೆಲ್ಲವು ಕೈ, ಸುಡುವ ಅನಲಂಗೆ ಭಾವವೆಲ್ಲವು ಬಾಯಿ” (ಬಹುಶಃ ಅಲ್ಲಮನ ಪ್ರಭಾವ) ಇತ್ಯಾದಿ ಮಾತುಗಳಲ್ಲಿ ಹೊಸತನವಿದೆ. ನೀರಿನ ಹನಿಗೆ ದಾರವ ಏರಿಸಿದವರಿಲ್ಲ ಎಂಬ ಮಾತು ನಿಶ್ಚಿತವಾಗಿಯೂ ಉಜ್ವಲ; ಓದುಗರಿಗೆ ಥಕ್ಕನೆ ಬೆರಗನ್ನು ತಂದು ಕೊಡುತ್ತದೆ. ಹಲವು ಕಡೆ ಚಪ್ಪಲಿ ಹೊಲಿಯುವ ಪ್ರತಿಮೆಗಳನ್ನು ನಿಸ್ಸಂಕೋಚವಾಗಿ ಆಧ್ಯಾತ್ಮಿಕ ಅನುಭವಗಳ ನಿರೂಪಣೆಗೆ ಬಳಸಿ ಕೊಂಡಿದ್ದಾನೆ. ಒಂದು ವಚನದಲ್ಲಿ ಚಪ್ಪಲಿ ಹೊಲೆಯುವ ಕ್ರಿಯೆಯನ್ನು ಆಧ್ಯಾತ್ಮಿಕ ಅನುಭವಕ್ಕೆ ಪೂರ್ಣವಾಗಿ ಸಮೀಕರಿಸಿದ್ದಾನೆ.[228] ತನ್ನ ದೇಹವನ್ನು ಚಪ್ಪಲಿಗೆ

---

228. ಅದೇ – “ಕಟ್ಟಿದೆ ಘಟದಟ್ಟೆಯ ಹೊಲಿದು, ಇಕ್ಕಿದೆ ಚರ್ತುವಿಧದ ನಾಲ್ಕು ಗುಂಟವ ಬಲಿದು, ಗುಂಟದ ದ್ವಾರದಲ್ಲಿ ಉಭಯ ಸಂಚದ ಬಾರ ತೆಗೆದು ತೊಡಕು ಬಂಧವನಿಕ್ಕಿ ಅಡಿಯ ಬಿಡದಂತೆ ಹಿಂದಣ ಮಡ ಮುಂದಣ ಉಂಗುಷ್ಟಕ್ಕೆ ಒಂದನೊಂದು ಜಾರದಂತೆ ಬಂಧಿಸಿ ಸಕಲೇಂದ್ರಿಯವೆಂಬ ಉಭಯವ ಸಂಧಿಸಿ ಕುಣಿಕೆಯನಿಕ್ಕಿ ಕಾಮದ ಒಡಲ ಮಾದಿಗ ಬಂದೆ, ಘಟ ತೋಕುಳು ತೊಗಲು ಹದ ಬಂದಿತ್ತು. ಹೊತ್ತು ಹೋದಿಹಿತಣ್ಣಾ ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ. ಒಪ್ಪಿದವರಿರಲಿ ಒಪ್ಪದಿದ್ದಡೆ ಮೂರು ಮುಖದಪ್ಪಗೆ ಕೊಟ್ಟಿಹೆ; ತಪ್ಪಡಿಯ ಮೆಟ್ಟಿ ಹೋಗುತ್ತಿದ್ದೇನೆ ಚನ್ನಯ್ಯ ಪ್ರಿಯ ಧೂಳನೆ ಧೂಳಿಗಾಗಿ.” ಎಚ್ಚರಿಕೆಯಿಂದ ವ್ಯಾಖ್ಯಾನಿಸಬೇಕಾದ ಅಪೂರ್ವ ವಚನ. (ಮೂರು ಮುಖದ ಅಪ್ಪ=ಸ್ವರ್ಗ, ಮರ್ತ್ಯ, ಪಾತಾಳಗಳ ಒಡೆಯ, ಶಿವ)

ಹೋಲಿಸಿಕೊಂಡು, ಅದನ್ನು ಶುದ್ಧಗೊಳಿಸಿ ಒಪ್ಪಿಸಿದ್ದೇನೆ, ಈಶ್ವರನಿಗಾದರೂ ಒಪ್ಪಿಸುತ್ತೇನೆ ಎನ್ನುವಾಗ ತನ್ನನ್ನು ಸಮಾಜ ಒಪ್ಪಿಕೊಳ್ಳಬೇಕು, ತನ್ನ ದೇಹ ಇರುವುದೇ ಸಮಾಜದ ಸೇವೆಗೆ ಎಂಬ ಧ್ವನಿ ಇದೆ. ತನಗೆ 'ಬಟ್ಟ ಬಯಲ'ನ್ನು ತೋರಬೇಕೆಂದು ಕೋರಿ ಸತ್ಯವಂತರಿಗೆ ಪಾದರಕ್ಷೆ ತೊಡಿಸಿದ್ದೇನೆ, ನೀವು ನಿಮ್ಮ ಮಾರ್ಗದಲ್ಲಿ ಹೋಗಿ, ನನಗೆ ಕಾಮಧೂಮ ಧೂಳೇಶ್ವರನ ದಾರಿಯೇ ಸಾಕು ಎಂಬುದು ಬಹು ಮಾರ್ಮಿಕವಾಗಿದೆ.[229]

ಬ್ರಾಹ್ಮಣನೊಬ್ಬ ಒಂದು ರಾತ್ರಿ ತನ್ನ ಪಶುವಿನ ಹಿಂದೆ ಹೋಗುತ್ತ ಅರಿಯದೆ ಧೂಳಯ್ಯನ ಮನೆಯ ಬಚ್ಚಲ ಕೆಸರಲ್ಲಿ ಬಿದ್ದು ಮನೆಗೆ ಹೋಗಿ ಅಸಹ್ಯಪಟ್ಟು ಕಾಲು ತೊಳೆದುಕೊಂಡನೆಂದೂ ಬೆಳಿಗ್ಗೆ ನೋಡಿದಾಗ ಆ ಕಾಲಿನ ಭಾಗ ದಿವ್ಯಾಂಗವಾಗಿರುವುದನ್ನು ಕಂಡು ಇಡೀ ದೇಹವನ್ನು ಅದ್ದಿ ದಿವ್ಯಾಂಗವನ್ನಾಗಿ ಮಾಡಿಕೊಂಡನೆಂದೂ, ಅದನ್ನು ಕೇಳಿ ವಿಷ್ಣುಭಕ್ತ ಅಪ್ಪಣ್ಣ ಆ ಕೊಚ್ಚೆಯಲ್ಲಿ ಹೊರಳಿ ತನ್ನ ಕುಷ್ಟರೋಗವನ್ನು ಕಳೆದುಕೊಂಡನೆಂದೂ ಬಸವಪುರಾಣದಲ್ಲಿ (ಪು. 296) ಕತೆಯಿದೆ. ಕರಿಬಸವಾರ್ಯಕೃತ ಗಣನಾಮ ರತ್ನಾವಳಿಯಲ್ಲಿಯೂ[230] ಇದೇ ಪ್ರಸಂಗವನ್ನು ಸೂಚಿಸಿದೆ. ಹೊಲೆಯ ಭಕ್ತರ ಮನೆಯ ಕೆಸರಿಂದ ರೋಗ ಪರಿಹಾರ ಮಾಡಿ-ಕೊಂಡವರ ಇಂತಹ ಹಲವು ಕತೆಗಳು ಹನ್ನೆರಡನೆಯ ಶತಮಾನದ ಬಳಿಕ ಹುಟ್ಟಲು ಪ್ರಚೋದನೆ ಹೊಲೆಯರ ನೀರು ಬ್ರಾಹ್ಮಣರಿಗೆ ಪವಿತ್ರವೆನ್ನುವ ಜಾನಪದ ನಂಬಿಕೆ. ಕತೆಗಳ ಉದ್ದೇಶ ಹೊಲೆಯ ಶಿವಭಕ್ತರ ಶ್ರೇಷ್ಠತೆಯನ್ನು ಸ್ಥಾಪಿಸುವುದು.

## ಉರಿಲಿಂಗ ಪೆದ್ದಿ

ಅಸ್ಪೃಶ್ಯ ಜಾತಿಯ ಇವನ ಹೆಸರು ಪೆದ್ದಣ್ಣ ಎಂದೂ ಕಟ್ಟಿಗೆ ಮಾರುವ ವೃತ್ತಿಯವನಾಗಿದ್ದ ಇವನ ಊರು ಮಹಾರಾಷ್ಟ್ರದ ನಾಂದೇಡ ಜಿಲ್ಲೆಯ ಕಂದಹಾರ (ಕಂದಾರ) ಎಂದೂ ಕೆಲವರು, ವಿಜಾಪುರ ಜಿಲ್ಲೆಯ ನಂದವಾಡಗಿ ಎಂದೂ ಕೆಲವರು ಊಹಿಸಿದ್ದಾರೆ. ಇವನು ಮಧುರ ಭಾವದ ಸುಂದರ ವಚನಗಳನ್ನು ಬರೆದಿರುವ ಉರಿಲಿಂಗ ದೇವನ ಶಿಷ್ಯನೆಂದೂ, ಗುರುವಿನ ಬಳಿಕ ಅದೇ ಮಠಕ್ಕೆ ಅವನು ಗುರುವಾದನೆಂದೂ ಹೇಳುತ್ತಾರೆ. ಇವನು ಅಸ್ಪೃಶ್ಯ ವಚನಕಾರರಲ್ಲಿ ಅತಿ

229. ಅದೇ. ಪು. 464–"ಅಱೆದು ಚುಚ್ಚುವರೆಲ್ಲರೂ ದನದಟ್ಟೆ, ಮಱೆದು ಚುಚ್ಚುವರೆಲ್ಲರೂ ದನದಟ್ಟೆ, ನಾ ಚುಚ್ಚುವುದೆಲ್ಲವು ಸತ್ತ ಜೀವದನದಟ್ಟೆ. ಅಟ್ಟೆಯ ಕೊಯ್ದು ಮೆಟ್ಟಿಸಿದೆ ಸತ್ಯರಿಗೆಲ್ಲಕ್ಕೂ, ಎನಗೆ ಬಟ್ಟ ಬಯಲ ತೋಱಬೇಕೆಂದು ನಿಮ್ಮ ಬಟ್ಟೆಯಲ್ಲಿ ನೀವು ಹೋಗಿ, ಎನ್ನ ಬಟ್ಟೆ ಕಾಮಧೂಮ ಧೂಳೇಶ್ವರನ ಬಟ್ಟೆಯೆ ಸಾಕು."

230. ಕರಿಬಸವಾರ್ಯಕೃತ ಗಣನಾಮ ರತ್ನಾವಳಿ. ಸಂ. ಎಸ್. ಶಿವಣ್ಣ. ಬಸವಪಥ, 3:8. ಪು. 72 – "ಅಣಿಯದೇಳ್ನೂರ್ವಿಪ್ರರಂಗಕುಷ್ಟಂಗಳಂ ಒಣಗಿಸಿದ ಮಾದಾರ ದೂಡನಾಳೆನಿ-ಸಯ್ಯ" (ದೂಡ–ದೂಳಯ್ಯ).

ಹೆಚ್ಚು ಅತಿ ಪ್ರೌಢ (ಎಂದರೆ ಸಂಸ್ಕೃತ ಭೂಯಿಷ್ಠ) ವಚನಗಳನ್ನು ಬರೆದಿರುವಾತ (ಒಟ್ಟು 294 ವಚನಗಳು). ಇವನು ಮಾದಾರ ಚನ್ನಯ್ಯ, ಮಡಿವಾಳ ಮಾಚಿದೇವ, ಜೇಡರ ದಾಸಿಯರನ್ನು ಸ್ಮರಿಸಿದ್ದಾನೆ. ಹೀನಕುಲದವನಿಗೆ ಶಿವೋಪದೇಶವನ್ನು ಕೊಡುವ ವಿಷಯದಲ್ಲಿ ಅವನು ಉತ್ಸಾಹವನ್ನು ತೋರಿಲ್ಲ. ಆದರೆ ಶಿವೋಪದೇಶ ವನ್ನು ತೆಗೆದುಕೊಂಡವನು ಮಾತ್ರ ತನ್ನ ಬದುಕನ್ನು ತೀವ್ರವಾಗಿ ತಿದ್ದಿಕೊಂಡು ಸದಾ ಎಚ್ಚರದಿಂದಿದ್ದು ನಡೆದುಕೊಳ್ಳಬೇಕು, ಹಾಗೆ ಅವನು ಶಿವಜ್ಞಾನಿಯಾದರೆ ಅವನು ಲೋಕಕ್ಕೆ ಉಪದೇಶಕನಾಗುತ್ತಾನೆ ಎಂದು ಹೇಳಿದ್ದಾನೆ ಉರಿಲಿಂಗ ಪೆದ್ದಿ.[231] ಅಂತ್ಯಜನೇ ಆಗಲಿ ಬ್ರಾಹ್ಮಣನೇ ಆಗಲಿ ಪಂಚಾಕ್ಷರಿ ಮಂತ್ರವನ್ನು ಜಪಿಸಬೇಕೆಂದು ಬೋಧಿಸಿದ್ದಾನೆ.*

ಉರಿಲಿಂಗಪೆದ್ದಿ ಬಹು ದೊಡ್ಡ ವಿದ್ವಾಂಸ, ವಚನಗಳ ಮಧ್ಯೆ ಲೀಲಾಜಾಲ ವಾಗಿ ನೂರಾರು ಸಂಸ್ಕೃತ ಉಲ್ಲೇಖಗಳನ್ನು ವೇದಗಳಿಂದ ಆಗಮ ಪುರಾಣಗಳಿಂದ ಉಲ್ಲೇಖಿಸುತ್ತಾನೆ. ಅವನು ನಿಶ್ಚಿತವಾಗಿಯೂ ಆಧುನಿಕ ಪೂರ್ವ ಭಾರತ ಕಂಡ ಅತಿದೊಡ್ಡ ದಲಿತವರ್ಗದ ಸಂಸ್ಕೃತ ವಿದ್ವಾಂಸ. ತಾನು ಅಸ್ಪೃಶ್ಯ ಜಾತಿಯವನೆಂಬ ಕಾರಣಕ್ಕಾಗಿ ಸಮಾಜ ತನ್ನನ್ನು ಅನಾದರಿಸಬಹುದೆಂಬ ಒಳ ಅಳುಕು ಹೀಗೆ ಸಂಸ್ಕೃತ ಪಾಂಡಿತ್ಯವನ್ನು ಮೆರೆಯಲು ಸೂಕ್ಷ್ಮ ಪ್ರಚೋದನೆಯಾಗಿರಬಹುದು. ಆದರೆ ಸಂಸ್ಕೃತ ಪಾಂಡಿತ್ಯ ಅವನ ಹೊಲೆಯ ಸಹಜ ಒರಟುತನ ಕೆಚ್ಚು ರೋಷಗಳನ್ನು ತಣ್ಣಗೆ ಮಾಡಿಲ್ಲ. ಹೆಂಡದಲ್ಲಿ ಸ್ನಾನ ಮಾಡಿದಂತೆ, ಅಮೇಧ್ಯವನ್ನು ತಂದಂತೆ, ಹೇಲಿನ ಒಳಗಿನ ಹುಳುಗಳನ್ನು ಕೆದಕಿದಂತೆ, ಒಣಗಿದ ಎಲುಬನ್ನು ನಾಯಿ ಕಡಿದು ಗಾಯ ಮಾಡಿಕೊಂಡು ತನ್ನ ರಕ್ತವನ್ನು ತಾನೇ ಕುಡಿದಂತೆ ಎನ್ನುವ ಉಪಮೆಗಳನ್ನಾಗಲಿ,

---

231. ಉರಿಲಿಂಗ ಪೆದ್ದಿಗಳ ವಚನಗಳು, ವಚನ 133–"ಕುಲಕಷ್ಟ ಮತಿಹೀನನಿಗೆ ಉಪದೇಶವ ಕೊಡಲಾಗದು, ವಿಭೂತಿಯ ನೀಡಲಾಗದು, ಕರ್ಣಮಂತ್ರವ ಹೇಳಿ ಲಿಂಗವ ಕಟ್ಟಲಾಗದು, ಕಟ್ಟಿದರೂ ಹಿಂದಣ ಪೂರ್ವಜನ್ಮವ ಬಿಡದಿದ್ದಡೆ ಹೊಲೆಯರ ಮನೆಯ ಶ್ವಾನಬಳಗದಂತೆ. ಕುಲಕಷ್ಟನಾದಡೆಯೂ ಆಗಲಿ ಉಪದೇಶವ ಕೊಡಲಿ ವಿಭೂತಿಯ ನೀಡಲಿ ಕರ್ಣಮಂತ್ರವ ಹೇಳಲಿ ಲಿಂಗವ ಕಟ್ಟಲಿ, ಕಟ್ಟಿದಡೆ ಸ್ವಪ್ನ ಜಾಗ್ರದಲ್ಲಿ ಶಿವಜ್ಞಾನಿಯಾಗಿದ್ದಡೆ ಲೋಕಕ್ಕೆ ಆತನೇ ಉಪದೇಶಕರ್ತ ಕಾಣಾ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ."

* ಅದೇ. ವಚನ 166–"ಅಂತ್ಯಜನಾಗಲಿ ಅಗ್ರಜನಾಗಲಿ, ಮೂರ್ಖನಾಗಲಿ ಪಂಡಿತ ನಾಗಲಿ, ಜಪಿಸುವುದು ಶ್ರೀಪಂಚಾಕ್ಷರಿಯ. ಆ ಜಪದಿಂದ ರುದ್ರನಪ್ಪುದು ತಪ್ಪದು, ಅದೆಂತೆಂದಡೆ... ಲೈಂಗೇ – 'ಅಂತ್ಯಜೋ ಹ್ಯಗ್ರಜೋ ವಾಪಿ ಮೂರ್ಖೋ ವಾ ಪಂಡಿತೋऽ ಪಿ ವಾ ಪಂಚಾಕ್ಷರೀಂ ಜಪೇನ್ನಿತ್ಯಂ ಸ ರುದ್ರೋ ನಾತ್ರ ಸಂಶಯಃ' ಇಂತೆಂದುದಾಗಿ ಇದು ಸತ್ಯ ಇದು ಸತ್ಯ ಜಪಿಸುವುದು ಶಪಥವ ಮಾಡಿದೆ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರ."

ಬ್ರಾಹ್ಮಣರ ಬಗ್ಗೆ ವ್ಯಕ್ತವಾಗುವ ಆಕ್ರೋಶವನ್ನಾಗಲಿ ಇಲ್ಲಿ ಗಮನಿಸಬೇಕು.[231.1] ವೇದಶಾಸ್ತ್ರ ಪುರಾಣಾಗಮ ಗ್ರಂಥಗಳನ್ನು ಓದಿ ಮೆರೆಯುವವರಿಗೂ ಡೊಂಬವಿದ್ಯೆಗಳನ್ನು ಕಲಿತ ಡೊಂಬನಿಗೂ ವ್ಯತ್ಯಾಸವಿಲ್ಲ, ಇಬ್ಬರದೂ "ಉದರಪೋಷಣವಿದ್ಯೆ" ಎಂಬ ಟೀಕೆ[232] ನೇರವಾಗಿ ಬಾಣದಂತೆ ನುಗ್ಗುತ್ತದೆ. ಅಂಗದ ಮೇಲೆ ಲಿಂಗವನ್ನು ಧರಿಸಿದ ಮೇಲೆಯೂ ಅನ್ಯದೈವಗಳನ್ನು ಪೂಜಿಸುವ 'ಕುನ್ನಿ'ಗಳನ್ನು ನೇರವಾಗಿ ಖಂಡಿಸಿದ್ದಾನೆ.[233] ಶಿವಭಕ್ತನೇ ಕುಲಜ ಎಂದು ವಾದಿಸುವಲ್ಲಿ[234] ಅವನು ತಾರ್ಕಿಕನಾಗಿ, ಖಚಿತ ಯೊಜನೆಯ ಸಾಮಾಜಿಕ ಚಿಂತಕನಾಗಿ ತೋರುತ್ತಾನೆ. ಬೀದರ ಜಿಲ್ಲೆ ಮತ್ತು ಸುತ್ತಮುತ್ತಣ ಬಸವಕಲ್ಯಾಣ, ಕೊರಳಿ, ಬೇವಿನ ಚಿಂಚೋಳಿ, ಭಾಲ್ಕಿಗಳಲ್ಲಿ ಉರಿಲಿಂಗ ಪೆದ್ದಿಯ ಹೆಸರನ್ನು ಹೇಳುವ ಮಠಗಳಿದ್ದು ಅವುಗಳಿಗೆ ಹರಿಜನರು ಭಕ್ತರಾಗಿದ್ದಾರೆ (ಗುರುಗಳು ಮಾತ್ರ ಲಿಂಗಾಯುತರು).

## ಕಾಳವ್ವೆ–ಏಕೈಕ ಅಸ್ಪೃಶ್ಯ ವಚನಕಾತಿ

ಉರಿಲಿಂಗ ಪೆದ್ದಿಯಂತಹ ಅನುಭಾವಿ ವಿದ್ವಾಂಸನ ಹೆಂಡತಿಯಾದ ಕಾಳವ್ವೆ ಹನ್ನೆರಡನೇ ಶತಮಾನದ ಇಪ್ಪತ್ತೇಳು ವಚನಕಾರ್ತಿಯರಲ್ಲಿ ಏಕೈಕ ಅಸ್ಪೃಶ್ಯ ವಚನಕಾರ್ತಿಯಾಗಿ ಕಂಡು ಬರುತ್ತಾಳೆ. ಇವಳ ಹದಿಮೂರು ವಚನಗಳು ಅಧ್ಯಯನ ಯೋಗ್ಯವಾಗಿವೆ. ಹೊಟ್ಟೆಪಾಡಿಗಾಗಿ ಭಕ್ತರ ಮನೆಯಲ್ಲಿ ಪೂಜೆ ಕೈಗೊಳ್ಳುವ ಜಂಗಮರನ್ನು ಅವರ ಸೇವೆ ಮಾಡುವ ಭಕ್ತರನ್ನು 'ನಾಯಕನರಕಕ್ಕೆ ಯೋಗ್ಯರು' ಎಂದು ಅವಳು ತೀರ್ಮಾನಿಸಿದ್ದಾಳೆ.[235] ವಾಂತಿ ಮಾಡಿಕೊಂಡ ಕೂಳು, ಸಂತೆಯ ಸೂಳೆಯ ಎಂಜಲು, ಅಮೇಧ್ಯ, ಗೋಮಾಂಸ, ಸಿಂಗಿ, ನರಮಾಂಸ, ಮಲಮೂತ್ರ,

---

231.1 ಅದೇ, ವಚನ. 216, 240,249, 258.

232. ಅದೇ, ವಚನ. 287.

233. ಅದೇ, ವಚನ. 258 – "ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ, ಮರಳಿ ಅನ್ಯದೈವಂಗಳನಾರಾಧಿಸುವ ಕುನ್ನಿಗಳು ನೀವು ಕೇಳಿ ಭೋ... ವಿಷ್ಣುವೇ ದೈವವೆಂದು ಆರಾಧಿಸಿದ ಬಲಿಗೆ ಬಂಧನವಾಯಿತ್ತು... ಮೈಲಾರನೇ ದೈವವೆಂದಾರಾಧಿಸಿದಾತನು ಕೊರಳಲ್ಲಿ ಕವಡೆಯ ಕಟ್ಟಿ ನಾಯಾಗಿ ಬೊಗಳುತ್ತಿಪ್ಪ. ಭೈರವನೇ ದೈವವೆಂದಾರಾಧಿಸಿದಾತನು ಕೊರಳಲ್ಲಿ ಕವಡೆಯ ಕಟ್ಟಿ ಕುರುಳು ಬೆರಳ ಕಡಿದಿಕ್ಕಿ ಬಾಹಿರನಾದನು. ಮಾಯಿರಾಣಿಯೇ ದೈವವೆಂದು ಆರಾಧಿಸಿದಾತನು ಕೊರಳಿಗೆ ಕವಡಿಯ ಕಟ್ಟಿ ತಲೆಯಲ್ಲಿ ಕೆರಹ ಹೊತ್ತು ಬೇವಿನ ಸೊಪ್ಪನುಟ್ಟು ಲಜ್ಜೆಯ ನೀಗಿದ. ಈ ಬಿನುಗು ದೈವಂಗಳ ಭಕ್ತಿ ಬಣಗುನಾಯಿ ಒಣಗಿದೆಲುವ ಕಚ್ಚಿಕೊಂಡು ಕಂಡ ಕಂಡೆಡೆಗೆ ಹರಿದಂತಾಯಿತ್ತು ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರ."

234. ಅದೇ, ವಚನ. 249.

235. ಶಿವಶರಣೆಯರ ವಚನಗಳು, ಪು. 387.

ಸೂಳೆಗೆ ಹುಟ್ಟಿದ ಮಕ್ಕಳು ಇತ್ಯಾದಿ ಮಾತುಗಳು ಅವಳ ದಿಟ್ಟತನದ ಸೂಚಕಗಳು. ಅವಳ ವಚನಗಳಲ್ಲೂ ಮೂರು ಸಂಸ್ಕೃತ ಉಲ್ಲೇಖಗಳು ಬಂದಿರುವುದು ಉರಿಲಿಂಗ ಪೆದ್ದಿಯ ಹೆಂಡತಿ ಅವಳು ಎಂಬುದನ್ನು ಜ್ಞಾಪಿಸುತ್ತದೆ. "ಸತ್ಯಶುದ್ಧವಿಲ್ಲದುದು ಕಾಯಕವಲ್ಲ"–ವ್ಯಕ್ತಿ ತನ್ನ ಉದ್ಯೋಗದಲ್ಲಿ ಪ್ರಾಮಾಣಿಕತೆಯನ್ನು ಸಾಧಿಸುವುದನ್ನು ಒತ್ತಿ ಹೇಳಿದ್ದಾಳೆ. ಶಿವಭಕ್ತರು ಪ್ರಾತಃಕಾಲ ಗುರು ಲಿಂಗ ಜಂಗಮಕ್ಕೆ ಶರಣೆನ್ನದೆ 'ಒಂಟಿ ಬ್ರಾಹ್ಮಣ'ನಿಗೆ ವಂದಿಸಿದರೆ ಶಾಶ್ವತ ಪಾಪ ಬರುತ್ತದೆ ಎಂದು ವಾದಿಸಿದ್ದಾಳೆ. ತನ್ನ ಜಾತಿಯನ್ನು ಕೀಳಾಗಿ ಭಾವಿಸುವುದನ್ನು ಸ್ಪಷ್ಟೋಕ್ತಿಗಳಲ್ಲಿ ಪ್ರತಿಭಟಿಸಿದ್ದಾಳೆ. ಕುರಿ, ಕೋಳಿ, ಮೀನು ತಿನ್ನುವವರು ಮಾತ್ರ ಕುಲಜರು! ಶಿವನ ಅಭಿಷೇಕಕ್ಕೆ ಹಾಲು ಕೊಡುವ ಹಸುವನ್ನು ತಿನ್ನುವ ಮಾದಿಗ ಹೇಗೆ ಕೀಳುಜಾತಿ ಎಂದು ಸವಾಲು ಹಾಕುವುದಲ್ಲದೆ ಬ್ರಾಹ್ಮಣನು ಮಾದಿಗನಿಗಿಂತ ಶ್ರೇಷ್ಠ ಹೇಗೆ ಎಂದೂ ಪ್ರಶ್ನಿಸುತ್ತಾಳೆ.[236]

## ಹೆಂಡದ ಮಾರಯ್ಯ ಮತ್ತು ಢಕ್ಕೆಯ ಬೊಮ್ಮಣ್ಣ

ಇವರಿಬ್ಬರೂ ಅಸ್ಪೃಶ್ಯ ಜಾತಿಯವರೆಂದು ಹೇಳಲು ಊಹೆಯೇ ಆಧಾರ. ಹೆಂಡದ ಮಾರಯ್ಯ ಹೆಂಡವನ್ನು ಮಾರುವ ವೃತ್ತಿಯವನಾಗಿದ್ದು, ಶಿವಭಕ್ತನಾದ ಬಳಿಕ ಅದನ್ನು ಕೈಬಿಟ್ಟಿರಬಹುದು. (ಅವನದು ಈಡಿಗ ಜಾತಿಯಾಗಿದ್ದರೆ ಅಸ್ಪೃಶ್ಯನಾಗುವುದಿಲ್ಲ). ಹೆಂಡವನ್ನು ತೊಗಲ ಚೀಲದಲ್ಲಿ ತುಂಬಿ ಮಾರುವ ಪ್ರತಿಮೆಗಳಿವೆ ಇವನಲ್ಲಿ.[237] ಪಾತ್ರೆಯ ಹೆಂಡವನ್ನು ಬಟ್ಟಲಲ್ಲಿ ತುಂಬಿ ಕುಡಿವವನಿಗಿಂತ, ಮಣ್ಣೆಂಬ ಘಟದಲ್ಲಿ ಹುಟ್ಟುವ ಹೊನ್ನು ಎಂಬ ಸುರೆಯನ್ನು ಹೆಣ್ಣು ಎನ್ನುವ ಬಟ್ಟಲಲ್ಲಿ ಕುಡಿದ 'ಲಹರಿ ತಲೆಗೇರಿ'ದವನು ಹೇಗೆ ಹಿರಿಯ ಎಂಬ ಸವಾಲು ಮನನೀಯವಾಗಿದೆ. ಮಾರಯ್ಯ ಜೀವನದ ಬಗ್ಗೆ ಚಿಂತಿಸಿದವನು, ಕಳಕಳಿ ವ್ಯಕ್ತಪಡಿಸಿದವನು ಎಂಬುದು ಮಾತ್ರ ಸ್ಪಷ್ಟ. ಮೊರದಲ್ಲಿ ಮಾರಿಯಿಟ್ಟು ಕುಣಿಸುತ್ತಿದ್ದ ಢಕ್ಕೆಯ ಬೊಮ್ಮಣ್ಣ ಮಾರಿಯ

236. ಶಿವಶರಣೆಯರ ವಚನಗಳು, ಪು. 391 – "ಕುಱಿ ಕೋಳಿ ಕಿಱಿ ಮೀನು ತಿಂಬವರಿಗೆಲ್ಲ ಕುಲಜ ಕುಲಜರೆಂದೆಂಬರು, ಶಿವಗೆ ಪಂಚಾಮೃತವ ಕಱೆವ ಪಶುವ ತಿಂಬ ಮಾದಿಗ ಕೀಳು ಜಾತಿಯೆಂಬರು. ಅವರೆಂತು ಕೀಳು ಜಾತಿಯಾದರು. ಜಾತಿಗಳು ನೀವೇಕೆ ಕೀಳಾಗಿರೋ? ಬ್ರಾಹ್ಮಣನುಂಡುದು ಪುಲ್ಲಿಗೆ ಶೋಭಿತವಾಗಿ ನಾಯಿ ನೆಕ್ಕಿ ಹೋಯಿತು. ಮಾದಿಗರುಂಡುದು ಪುಲ್ಲಿಗೆ ಬ್ರಾಹ್ಮಣಗೆ ಶೋಭಿತವಾಯಿತು. ಅದೆಂತೆಡೆ : ಸಿದ್ಧಲಿಕೆ ಯಾಯಿತು ಸಗ್ಗಳೆಯಾಯಿತು. ಸಿದ್ಧಲಿಕೆಯ ತುಪ್ಪವನು ಸಗ್ಗಳೆಯ ನೀರನು ಶುದ್ಧ ವೆಂದು ಕುಡಿವ ಬುದ್ಧಿಗೇಡಿ ವಿಪ್ರರಿಗೆ ನಾಯಕನರಕ ತಪ್ಪದಯ್ಯಾ ಉರಿಲಿಂಗ ಪೆದ್ದಿಗಳರಸು ಒಲ್ಲನವ್ವಾ."

237. ಸಕಲ ಪುರಾತನರ ವಚನಗಳು, III. ಪು. 344 – "ಮಣ್ಣೆಂಬ ಘಟದ ಮಧ್ಯದಲ್ಲಿ ಹೊನ್ನೆಂಬ ಸುರೆ ಹುಟ್ಟಿತ್ತು. ಹೆಣ್ಣೆಂಬ ಬಟ್ಟಲಲ್ಲಿ ಅಂತು ಈಂಟಲಾಗಿ ಲಹರಿ ತಲೆ ಗೇರಿತ್ತು. ಈ ಉನ್ಮತ್ತದಲ್ಲಿ ಮಗ್ನರಾದವರೆಲ್ಲರು ಅವರು ಹಿರಿಯರೆಂತಪ್ಪರೋ? ಭಕ್ತಿ ವಿರಕ್ತಿಯೆಂಬುದು ಇತ್ತಲೆ ಉಳಿಯಿತ್ತು. ಧರ್ಮೇಶ್ವರ ಲಿಂಗದತ್ತ ಮುಟ್ಟಿದಡಂತಿಲ್ಲ."

ಅರ್ಚಕನೆಂಬ ಕಾರಣಕ್ಕೆ ಹೊಲೆಯ ಜಾತಿಯವನಿರಬೇಕೆಂದು ಊಹೆ. ಜಾನಪದ ಕಲಾವಿದನಾದ ಅವನು ಮೊರದಲ್ಲಿ ಮಾರಿಯನ್ನು ಕುಣಿಸುವಂತೆ ತನ್ನ ವಚನಗಳಲ್ಲಿ ಕನ್ನಡ ಭಾಷೆಯನ್ನು ಕುಣಿಸಿದ್ದಾನೆ. ಕೈಯಲ್ಲಿ ಬಳೆ ಧರಿಸಿ ಕತ್ತಿ ಬಟ್ಟಲು ಹಿಡಿದು ಮೊರದಲ್ಲಿ ಮಾರಿ ಕೂರಿಸಿಕೊಂಡು ಮನೆಮನೆಗೆ ಬಂದು ಢಕ್ಕೆ ಬಾರಿಸುತ್ತ ಕುಣಿಯುತ್ತಿದ್ದ. ಮಾರಿದೇವತೆ 'ಅರಿದವನಿಗೆ ದೇವಿ, ಮರೆದವನಿಗೆ ಮಾರಿ'. ಮಾರಿ ಅವನಿಗೆ ಅಜ್ಞಾನದ ಸಂಕೇತ: ಢಕ್ಕೆಯು ದೇಹದ ಸಂಕೇತ. ಒಂದು ವಚನದಲ್ಲಿ ಹೆಣ್ಣು ಗಂಡಿನ ಸಂಬಂಧದ ಬಗ್ಗೆ ಚಿಂತಿಸಿದ್ದಾನೆ. ಬದುಕಿನಲ್ಲಿ ಹೆಣ್ಣನ್ನು ಪ್ರಶ್ನಿಸುವ ಅಧಿಕಾರ ಗಂಡಿಗಿರುವಂತೆ ಗಂಡನ್ನು ಪ್ರಶ್ನಿಸುವ ಹಕ್ಕು ಹೆಣ್ಣಿಗಿದೆಯೆನ್ನುತ್ತಾನೆ. ಹೆಣ್ಣು ಗಂಡು ಇಬ್ಬರೂ ಎರಡು ಕಣ್ಣುಗಳಿದ್ದಂತೆ.[238] ಷಟ್ಸ್ಥಲಗಳೆಲ್ಲ ತನ್ನ ದೊರದ ಮಾರಿಯಲ್ಲಿವೆ ಎಂದು ಹೇಳಿಕೊಳ್ಳುವ ಅವನಿಗೆ ತನ್ನ ವೃತ್ತಿಯ ಬಗ್ಗೆ ಮಮತೆ ಅಭಿಮಾನಗಳು ಎದ್ದು ಕಾಣುತ್ತವೆ. ಅಂದಿನ ಚಳವಳಿಯನ್ನು ಇವನೂ ಇವನಂಥ ಅನೇಕ ಜಾನಪದ ಕಲಾವಿದರೂ (ಉದಾ: ಕಲಕೇತ ಬೊಮ್ಮಯ್ಯ) ತಮ್ಮ ಕಲೆಯ ಮೂಲಕ ಜನಪ್ರಿಯಗೊಳಿಸಲು ಯತ್ನಿಸಿರಬೇಕು. ಕಲೆಯನ್ನು ಸಮಾಜಕಲ್ಯಾಣ ಕಾರ್ಯಕ್ಕೆ ಬಳಸಿದವರಲ್ಲಿ ಇವರು ಆದ್ಯರಾಗುತ್ತಾರೆ.

## ಅಸ್ಪೃಶ್ಯ ವಚನಕಾರರ ಸಾಮಾಜಿಕ ಸ್ಪಂದನ

ಅಸ್ಪೃಶ್ಯ ವಚನಕಾರರು ಧಾರ್ಮಿಕ ವಾತಾವರಣದ ಭಕ್ತಿಯ ಚೌಕಟ್ಟಿನಲ್ಲಿಯೇ ಚಿಂತಿಸಬೇಕಾಗಿದ್ದುದರಿಂದ ಅವರೂ ಇತರ ವಚನಕಾರರಂತೆ ದೈವ, ಆಧ್ಯಾತ್ಮದ ಬಗ್ಗೆ ಮಾತನಾಡಿದ್ದಾರೆ. ಇತರರಂತೆ ಅದೇ ಭಾಷೆ ಪ್ರತಿಮೆಗಳನ್ನು ಬಳಸಿದ್ದಾರೆ. ಇದು ಸಂಸ್ಕೃತೀಕರಣದ ಅನಿವಾರ್ಯ ಫಲ ಮತ್ತು ತೀರ ನಿರೀಕ್ಷಿತ. ಆದರೆ, ತಮಗೆ ದೊರೆತ ಹೊಸ ರೀತಿಯ ಸಮಾಜೋಧಾರ್ಮಿಕ ಸವಲತ್ತುಗಳನ್ನು ಪಡೆದುಕೊಂಡ ಅವರು ತಮ್ಮ ಮೂಲ ಸಮಾಜವನ್ನು ಮರೆತುಬಿಟ್ಟರೆ? ತಾವು ಸಾಮಾಜಿಕವಾಗಿ ಎದುರಿಸಿದ ಸಮಸ್ಯೆಗಳನ್ನು ಅವರು ಕೈಬಿಟ್ಟು ಆಧ್ಯಾತ್ಮಿಕ ಕನಸಿನಲ್ಲಿ ಕನವರಿಸುತ್ತ ಕುಳಿತುಬಿಟ್ಟರೆ? ಅಸ್ಪೃಶ್ಯತೆ, ದಾರಿದ್ರ್ಯ, ಹಸಿವು, ಅಜ್ಞಾನ, ಇತರರ ತಿರಸ್ಕಾರ ಇವುಗಳ ಬಗ್ಗೆ ಹೇಗೆ ಪ್ರತಿಸ್ಪಂದಿಸಿದ್ದಾರೆ?

ಅವರ ವಚನಗಳಲ್ಲಿ ಈ ಬಗೆಯ ಪ್ರತಿಸ್ಪಂದನ ಅಷ್ಟಾಗಿ ಎದ್ದು ಕಾಣದೆ, ಆಧ್ಯಾತ್ಮವೇ ಪ್ರಮುಖವಾಗಿಬಿಡುವುದರಿಂದ ಅವರನ್ನು ಅದಕ್ಕಾಗಿ ಟೀಕಿಸುವ ಮನಸ್ಸಾಗುತ್ತದೆ. ಸ್ವಲ್ಪ ಸಹಾನುಭೂತಿಯಿಂದ ಅವರನ್ನೂ ಅವರ ಹಿನ್ನೆಲೆ ಮತ್ತು

238. "ಸತಿಯ ಗುಣವ ಪತಿ ನೋಡಬೇಕಲ್ಲದೆ ಪತಿಯ ಗುಣವ ಸತಿ ನೋಡಬಹುದೆ ಎಂಬರು. ಸತಿಯಿಂದ ಬಂದ ಸೋಂಕು ಪತಿಗೆ ಕೇಡಲ್ಲವೆ? ಪತಿಯಿಂದ ಬಂದ ಸೋಂಕು ಸತಿಗೆ ಕೇಡಲ್ಲವೆ? ಒಂದಂಗದ ಕಣ್ಣು ಉಭಯದಲ್ಲಿ ಒಂದು ಹಿಂಗಲಿಕ್ಕೆ ಭಂಗವಾರಿಗೆಂಬುದು ತಿಳಿದಲ್ಲಿಯೇ ಕಾಲಾಂತಕ ಭೀಮೇಶ್ವರ ಲಿಂಗಕ್ಕೆ ಸಲೆ ಸಂದಿತ್ತು."

ಅಂದಿನ ವಾತಾವರಣವನ್ನೂ ಅರ್ಥಮಾಡಿಕೊಂಡು ಅವರನ್ನು ಎಚ್ಚರದಿಂದ ಅಭ್ಯಸಿಸಿದರೆ ಅವರಲ್ಲಿ ಸಮಾಜದ ಬಗ್ಗೆ ಚಿಂತನೆ, ಅದರ ಬಗ್ಗೆ ಕಳಕಳಿಗಳು ಗೋಚರಿಸುತ್ತವೆ. ವಚನಕಾರರ ಚಳವಳಿ ಮುಖ್ಯವಾಗಿ ಸಮಾಜೋಧಾರ್ಮಿಕ ಸ್ವರೂಪದ್ದೇ ಹೊರತು ರಾಜಕೀಯೋಆರ್ಥಿಕ ಸ್ವರೂಪದ್ದಲ್ಲವೆಂಬುದನ್ನು ಚನ್ನಾಗಿ ನೆನಪಿಡಬೇಕು. ಆ ಕಾರಣ, ಅವರು ಪ್ರತಿಭಟಿಸಬೇಕಾಗಿದ್ದುದು ಧಾರ್ಮಿಕ–ಸಾಮಾಜಿಕ ಅಸಮಾನತೆಯನ್ನು, ಧಾರ್ಮಿಕವಾಗಿ ಸಾಮಾಜಿಕವಾಗಿ ಮೇಲಿದ್ದು ಅದರ ಎಲ್ಲ ಅನುಕೂಲಗಳನ್ನು ಪಡೆದವರನ್ನು. ಅವರ ಪ್ರತಿಭಟನೆಗೆ ಮುಖ್ಯವಾಗಿ ಬ್ರಾಹ್ಮಣ ಏಕೆ ಗುರಿಯಾಗಿದ್ದಾನೆ ಎಂಬುದು ಆಗ ಮಾತ್ರ ಸ್ಪಷ್ಟವಾಗುತ್ತದೆ. ಬ್ರಾಹ್ಮಣನ ಶ್ರೇಷ್ಠತೆಯನ್ನು–ಅವರ ಪ್ರಕಾರ, ಬ್ರಾಹ್ಮಣನ ಶ್ರೇಷ್ಠತೆಯ ಕಟ್ಟುಕತೆಯನ್ನು ಒಡೆಯುವುದೊಂದೇ–ಅವರಿಗಿದ್ದ ಏಕೈಕ ಮಾರ್ಗ. ಅಲ್ಲಿ ಇಲ್ಲಿ ಬಹಳ ವಿರಳವಾಗಿ ರಾಜರ ಬಗ್ಗೆ ಪ್ರತಿಭಟನೆ ಇದ್ದರೂ, ಎಲ್ಲರಲ್ಲೂ ಅದರಲ್ಲೂ ಅಸ್ಪೃಶ್ಯ ವಚನಕಾರರಲ್ಲಿ ಬ್ರಾಹ್ಮಣಜಾತಿಯ ಟೀಕೆ ಹರಿತವಾಗುತ್ತದೆ. ಬ್ರಾಹ್ಮಣನನ್ನು ಸಾಮಾಜಿಕವಾಗಿ ಧಾರ್ಮಿಕವಾಗಿ ಕೆಳಗಿಳಿಸುವುದು, ತಮ್ಮನ್ನು ತಾವು ಮೇಲೇರಿಸಿಕೊಂಡು ಇತರರನ್ನೂ ಮೇಲೇರಿಸುವುದು ಅಗತ್ಯವಾಗಿದ್ದಿತು.[239] ಬ್ರಾಹ್ಮಣ ಸಾಮಾಜಿಕ ಶೋಷಣೆಯ ಸಂಕೇತವಾಗಿ ಪರಿಣಮಿಸಿದ್ದಾನೆ. ಬ್ರಾಹ್ಮಣನನ್ನು ಟೀಕಿಸುವುದರಲ್ಲಿ ಅಸ್ಪೃಶ್ಯ ವಚನ ಕಾರರು ಇತರರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿದ್ದಾರೆ.

ಈ ಟೀಕೆ ಬರಿಯ ಸಾಂಕೇತಿಕ; ಮನಸ್ಸಿಗೆ ಸಮಾಧಾನ ಅಹಮ್ಮಿಗೆ ಉಬ್ಬನ್ನು ತರುವುದಕ್ಕೆ ಮಾತ್ರ ಸಹಾಯಕವೆಂಬುದನ್ನು ಅವರು ಬಲ್ಲವರಾಗಿದ್ದರು. ಅಸ್ಪೃಶ್ಯ ವಚನಕಾರರು ಬರಿಯ ಭಾವುಕರಾಗಿರದೆ ಅಂತರ್ಮುಖಿಗಳಾಗಿ ಕೆಲವೆಡೆ ಯೋಚನೆ ಮಾಡಿದವರೂ ಆಗಿದ್ದಾರೆ. ಕೆಳಜಾತಿಗಳ ಅಸಮಾನತೆಯ ಬಗ್ಗೆ ತೀವ್ರ ಅಸಮ್ಮತಿಯನ್ನು ವ್ಯಕ್ತಪಡಿಸಿ ಭಕ್ತಿಯಲ್ಲಿ ಎಲ್ಲ ಮನುಷ್ಯರೂ ಸಮಾನವೆಂಬುದನ್ನು ಪರಿಣಾಮಕಾರಿಯಾಗಿ ಘೋಷಿಸಿದ್ದಾರೆ. ಅವರಲ್ಲಿ ಯಾರಿಗೂ ತಾವು ಕೀಳು ಕುಲದವರೆಂಬ ಕೀಳರಿಮೆ ಬಾಧಿಸಿಲ್ಲವೆಂಬುದು ಬಹು ಮುಖ್ಯವಾಗಿ ಗಮನಿಸಬೇಕಾದ ಸಂಗತಿ. ತಮ್ಮ ತಮ್ಮ ವೃತ್ತಿಗಳ ಬಗ್ಗೆ ಅವರಿಗೆ ಪೂರ್ತಿ ಅಭಿಮಾನ ವಿಶ್ವಾಸಗಳಿವೆ (ಉದಾ: ಮಾದಾರ ಧೂಳಯ್ಯ, ಹೆಂಡದ ಮಾರಯ್ಯ). ಪ್ರತಿಯೊಬ್ಬರೂ, ಕಾಳವ್ವೆಯೂ ಸೇರಿದಂತೆ ಅವರೆಲ್ಲರನ್ನೂ ಕಾಡುತ್ತಿದ್ದ ಜಾತಿ ಸಮಸ್ಯೆಯನ್ನು ಕೆಲವೊಮ್ಮೆ ಸ್ಪಷ್ಟವಾಗಿ

---

239. ಬ್ರಾಹ್ಮಣನ ಶೌಚ, ಹೊಲೆಯನ ಅಶೌಚ ತಾತ್ವಿಕವಾಗಿ ಅಭಿನ್ನ – ಅವೆರಡೂ ಒಟ್ಟಿಗೆ ಹುಟ್ಟಿದುವು ಎನ್ನುವ ಡ್ಯುಮಾಂಟ್, ಒಂದು ಹೋಗಬೇಕಾದರೆ ಇನ್ನೊಂದು ತನ್ನ ಬೆಲೆಯನ್ನು ಕಳೆದುಕೊಳ್ಳಬೇಕು ಎನ್ನುತ್ತಾರೆ. – "In particular, untouchability will not truly disappear until the purity of the Brahman is itself radically devalued" (Homeo Hierachicus, p. 54).

ಕೆಲವೊಮ್ಮೆ ಸೂಚ್ಯವಾಗಿ ಪ್ರಸ್ತಾಪಿಸಿದ್ದಾರೆ. ತಮ್ಮಂತೆಯೇ ತಮ್ಮ ಜನರೂ ಸಾಮಾಜಿಕವಾಗಿ ಮೇಲೆ ಬರಬೇಕೆಂಬ ತಮ್ಮ ತೀವ್ರ ಭಾವನೆಯನ್ನು ವ್ಯಕ್ತಪಡಿಸಿರುವುದು ಮಾತ್ರವಲ್ಲದೆ, ಮತ್ತೆ ಹಿಂದಿನ ಆಚಾರ ಆಹಾರ ಪದ್ಧತಿಗಳಿಗೆ ಹೋಗುವಂತೆ ಮಾಡುವ ಮನಸ್ಸಿನ ದೌರ್ಬಲ್ಯದ ಬಗ್ಗೆ ಎಚ್ಚರದಿಂದಿರಲು ಹೇಳಿದ್ದಾರೆ. ಅವರ ವಚನಗಳಲ್ಲಿ ಒಂದು ಸಾಮಾಜಿಕ ಎಚ್ಚರವಿದೆ, ತಮ್ಮಂತೆಯೇ ಸಮಾಜವೂ ಒಂದು ವಾಸ್ತವ ಎಂಬ ಅರಿವಿದೆ. ಸಾಮಾಜಿಕ ಅನ್ಯಾಯದ ಬಗ್ಗೆ ಪ್ರತಿಭಟನೆಯನ್ನು ಹಲವು ಬಾರಿ ಅನಾಗರಿಕವಾಗಿ ವ್ಯಕ್ತಪಡಿಸಿರುವುದು ಮೆಚ್ಚಬೇಕಾದ ಸಂಗತಿ. ಏಕೆಂದರೆ ಆ ಅನಾಗರಿಕತೆಯೇ ಅವರನ್ನು ಪ್ರಾಮಾಣಿಕತೆಯ ನೆಲೆಯಲ್ಲಿ ಇಡುತ್ತದೆ. (ಉದಾ: ಕಾಳವ್ವೆ, ಉರಿಲಿಂಗಪೆದ್ದಿ). ಅವರ ಧೈರ್ಯದ ಮಾತುಗಳಿಗೆ ಅಂದಿನ ಭಕ್ತಸಮಾಜದ ನೈತಿಕ ಬೆಂಬಲವಿದ್ದರೂ ಸಾಮಾಜಿಕವಾಗಿ ಧಾರ್ಮಿಕವಾಗಿ ಮತ್ತು ರಾಜಕೀಯವಾಗಿ ಕೂಡ ಪ್ರಬಲವಾಗಿದ್ದ ಬ್ರಾಹ್ಮಣನನ್ನು ಟೀಕಿಸುವುದು ಸಣ್ಣ ಸಂಗತಿಯಾಗಿ ಕಾಣಿಸುವುದಿಲ್ಲ. ಅವರ ಒಡಲಾಳದ ನಿರಾಸೆ ಕೋಪ ದುಃಖಗಳು ವ್ಯಕ್ತವಾಗಲು ಬ್ರಾಹ್ಮಣ ನಿಮಿತ್ತನಾಗಿದ್ದಾನೆ. ಅವುಗಳಿಗೆ ಅವನು ಗುರಿಯಾಗಿದ್ದಾನೆ. ಏಕೆಂದರೆ ಅವನು ಅಂದಿನ ವ್ಯವಸ್ಥೆಯ ಸಂಕೇತವಾಗಿ ಪರಿಣಮಿಸಿದ್ದ.

ಹಾಗೆಯೇ ಅಸ್ಪೃಶ್ಯತೆ ಬಗ್ಗೆ (ಕಕ್ಕಯ್ಯ), ಹಸಿವಿನ ಬಗ್ಗೆ (ನಾಚಯ್ಯ) ಇವರ ಪ್ರತಿಸ್ಪಂದನಗಳನ್ನು ನಾವು ಕಾಣಬಹುದು. ಗಂಡು ಹೆಣ್ಣಿನ ಸಮಸ್ಯೆಗಳನ್ನು ಕಾಳವ್ವೆ ಚಿಂತಿಸಿ ಅವರಿಬ್ಬರೂ ಒಬ್ಬರ (ಮಾನಸಿಕ ಮತ್ತು ದೈಹಿಕ) ಆರೋಗ್ಯಕ್ಕೆ ಇನ್ನೊಬ್ಬರು ಕಾರಣರೆಂದೂ, ಅವರು (ಸಂಸಾರವೆಂಬ ವ್ಯಕ್ತಿಯ)ಎರಡು ಕಣ್ಣುಗಳೆಂದೂ ಪ್ರತಿಪಾದಿಸಿದ್ದಾಳೆ. ಬಸವಣ್ಣನಂತೆ ಆತ್ಮಶೋಧನೆ ಅವರಲ್ಲಿ ಕಾಣಿಸದು. ತಮ್ಮನ್ನು ವೈಯಕ್ತಿಕವಾಗಿ ವಿಮರ್ಶಿಸಿಕೊಂಡು ತಿದ್ದಿಕೊಳ್ಳುವ ಯತ್ನ ಅವರಲ್ಲಿ ಇಲ್ಲದಿದ್ದರೆ ಅದಕ್ಕೆ ಕಾರಣ ಉಂಟು. ಭಕ್ತಿಯನ್ನು ತೀವ್ರವಾಗಿ ಭಾವಿಸಿದವರಿಗೆ ಅಂತಹ ಆತ್ಮಶೋಧ ಸ್ವಾಭಾವಿಕ. ಅಸ್ಪೃಶ್ಯ ವಚನಕಾರರಿಗೆ ಅಂತಹ ಆತ್ಮಶೋಧ ಒಂದು ದುಬಾರಿ (luxury).

ಒಂದು ಮಾತು ನಿಜ, ಅಂದಿನ ಬಡತನದ ಬಗ್ಗೆ ತೀವ್ರವಾಗಿ ಪ್ರತಿಕ್ರಿಯಿಸಿರುವವರು ಒಟ್ಟು ವಚನಕಾರರಲ್ಲಿ ಇಲ್ಲವೇ ಇಲ್ಲ ಎನ್ನುವಷ್ಟು ಕಡಮೆ. ಬಡತನವನ್ನು ಒಮ್ಮೊಮ್ಮೆ ವೈಭವೀಕರಿಸಿರುವುದು ಕಾಣುವುದೇ ಹೊರತು,[240] ಸಾಮಾಜಿಕ ಅಸಮಾನತೆಯನ್ನು ಖಂಡಿಸಿದಂತೆ ಆರ್ಥಿಕ ಅಸಮಾನತೆಯನ್ನು ಖಂಡಿಸಲಿಲ್ಲ. ಟೀಕೆ, ಆಕ್ರೋಶ, ಕ್ರೋಧಗಳಿಗೆ ಬ್ರಾಹ್ಮಣ ಗುರಿಯಾದಂತೆ ವೈಶ್ಯನೋ ಬಣಜಿಗನೋ

---

240. "ಮನೆ ನೋಡಾ ಬಡವರು, ಮನವ ನೋಡಾ ಘನಸಂಪನ್ನರು..." (ಶೂನ್ಯ ಸಂಪಾದನೆ. ಸಂ: ಎಸ್.ಎಸ್. ಭೂಸನೂರಮಠ. 1958, ಪು. 273).

ಅಧಿಕಾರಿಯೋ ರಾಜನೋ ಗುರಿಯಾಗಲಿಲ್ಲ. ಇದಕ್ಕೆ ಅಂದಿನ ಚಳವಳಿಯ ಚೌಕಟ್ಟಿನ ಮಿತಿ ಕಾರಣ. ಈ ಆಕ್ಷೇಪಕ್ಕೆ ಅಸ್ಪೃಶ್ಯ ವಚನಕಾರರೂ ಗುರಿಯಾಗುತ್ತಾರೆ, ಅಂತಹ ಆಕ್ಷೇಪವೊಂದನ್ನು ಎತ್ತುವುದಾದರೆ.

ಅಸ್ಪೃಶ್ಯ ವಚನಕಾರರಿಗೆ ಇರುವ ಭಾಷೆಯ ಮೇಲಿನ ಹತೋಟಿ ಯಾರಿಗೂ ಕಡಮೆಯಾದುದಲ್ಲ. ಹಲವರು ಸಂಸ್ಕೃತದಿಂದ ಸರಿಯಾಗಿ ಉಲ್ಲೇಖಿಸಿರುವುದನ್ನು ನೋಡಿದರೆ ಅವರಲ್ಲಿ ಹಲವರು ಅಕ್ಷರಸ್ಥರೂ ವಿದ್ಯಾವಂತರೂ ಮಾತ್ರವಲ್ಲದೆ ವೇದ ವಿದ್ವಾಂಸರೂ ಆಗಿದ್ದರೆಂಬುದು ಗೊತ್ತಾಗುತ್ತದೆ. ಆಶ್ಚರ್ಯದ ಸಂಗತಿಯೆಂದರೆ, ಕಾಳವ್ವೆಯೂ ಸಂಸ್ಕೃತ ಉಲ್ಲೇಖಗಳನ್ನು ತಂದಿರುವುದು.



* ಮತಾಂತರದ ಬಗೆಗಿನ ಮಡಿವಾಳ ಮಾಚಿದೇವನ ವಚನದ ಪೂರ್ಣಪಾಠ–"ಹಣ ದಾಸೆಗೆ ಹದಿನೆಂಟು ಜಾತಿಯ ಭಕ್ತರ ಮಾಡಿ ಲಿಂಗವ ಕೊಟ್ಟು ಲಿಂಗದ್ರೋಹಿಯಾದ. ಪ್ರಸಾದವ ನೀಡಿ ಪ್ರಸಾದ ದ್ರೋಹಿಯಾದ. ಪಂಚಾಕ್ಷರಿಯ ಹೇಳಿ ಪಂಚ ಮಹಾಪಾತಕ ಕ್ಕೊಳಗಾದ. ಇಂತೀ ಹೊನ್ನ ಹಂದಿಯ ಕೊಂಡು ಬಿನ್ನಾಣದಲಿ ಕಡಿದುವೆಂಬ ಕುನ್ನಿಗಳನೇನೆಂಬೆ ಕಲಿದೇವರ ದೇವ॥ (ಮಡಿವಾಳ ಮಾಚಿದೇವರ ವಚನ. ಸಂ. : ಬಿ. ಆರ್. ಹಿರೇಮಠ. ಸಮಗ್ರಸಂಪುಟ. viii ಪು. 281).

(ಈ ಕೃತಿಯ ಪು. 85ರ 175ನೇ ಟಿಪ್ಪಣಿ ನೋಡಿ)

# ಉಪನ್ಯಾಸ – III*

## ಲಿಂಗಾಯತ ಚಳವಳಿಯ ಬಳಿಕ

ಲಿಂಗಾಯತ ಚಳವಳಿಯ ಕೊನೆಯಲ್ಲಿ ಕಲ್ಯಾಣದಲ್ಲಿ ನಡೆಯಿತೆಂದು ಹೇಳಲಾದ ಕ್ಷೋಭೆಯ ಪರಿಣಾಮವಾಗಿ ಕಲ್ಯಾಣದ ಸಂಘಟನೆ ಒಡೆಯಿತು. ಬಸವ ಮೊದಲಾದ ನಾಯಕರು ಮರೆಯಾದರು. ಅವರ ಮಾರ್ಗದರ್ಶನವಿಲ್ಲದ ಚಳವಳಿಯು ತನ್ನ ಮೊನಚನ್ನೂ ಸಾಮಾಜಿಕ ಉದ್ದೇಶವನ್ನೂ ಕ್ರಮೇಣ ಕಳೆದುಕೊಳ್ಳುತ್ತ ಬಂದಿತು. ಸಮಾಜದರ್ಶನದ ಸ್ವರೂಪದ ಚಿಂತನೆಯು ವ್ಯವಸ್ಥಿತ ಮತವಾಗಿ ತಿರುಗಲು ಆರಂಭವಾಯಿತು. ಹನ್ನೆರಡನೆಯ ಶತಮಾನದ ಮುಂದಿನ ಕಾಲದಲ್ಲಿ ಮಾತನಾಡಿದ್ದು ಕರ್ನಾಟಕದ ಲಿಂಗಾಯತ ಕವಿಗಳು ಮತ್ತು ವಿದ್ವಾಂಸರು. ಕವಿಗಳು ಲಿಂಗಾಯತ ಚಳವಳಿಯ ನೇತಾರರನ್ನು ಪವಾಡ ಕಟ್ಟುಕತೆ ವರ್ಣನೆ ಉತ್ಪ್ರೇಕ್ಷೆಗಳ ಮಧ್ಯೆ ಇಟ್ಟು ಮೆರವಣಿಗೆ ಮಾಡಿಸಿದರು. ಜಂಗಮ ವಿದ್ವಾಂಸರು ಸಾಮಾಜಿಕ ಉದ್ದೇಶದ ವಚನಗಳಿಗೂ ತಮ್ಮ ಮನಸ್ಸಿನ ಧಾರ್ಮಿಕ ಅಥವಾ ಆಧ್ಯಾತ್ಮಿಕ ಅರ್ಥವನ್ನು ತುಂಬಿದರು. ಎಲ್ಲ ಜಾತಿಯ ಜನ, ಗಂಡಸರು ಹೆಂಗಸರು ಎಲ್ಲರೂ ತಮ್ಮನ್ನು ತಾವು ಪೂರ್ಣವಾಗಿ ಭಾಷೆಯಲ್ಲಿ ಅಭಿವ್ಯಕ್ತಪಡಿಸಿಕೊಂಡ ಕಾಲ ಮತ್ತೆ ಬರಲಿಲ್ಲ. ಹೆಂಗಸರಾಗಲಿ ಅಸ್ಪೃಶ್ಯರಾಗಲಿ ಮತ್ತೆ ವಚನಗಳನ್ನು ಬರೆಯಲಿಲ್ಲ, ಕಾವ್ಯ ನಿರ್ಮಿತಿಗೆ ಕೈಹಾಕಲೂ ಇಲ್ಲ. ಅಸ್ಪೃಶ್ಯರ ಹೆಂಗಸರ ಮಾತಿರಲಿ, ಕೆಳಜಾತಿಯ ಯಾವುದೇ ಲಿಂಗಾಯತ ಕವಿಗಳೂ ಸಾಹಿತ್ಯಕ್ಷೇತ್ರದಲ್ಲಿ ಕಾಣಿಸಲಿಲ್ಲ. ಹನ್ನೆರಡನೆಯ ಶತಮಾನದ ಲಿಂಗಾಯತ ಚಳವಳಿ ಮುಂದೆ ಒಂದು ಲಿಂಗಾಯತ ಮತವಾಯಿತು; ಮತಕ್ಕೆ ಅಗತ್ಯವಾದ ಪುರೋಹಿತರು (ಜಂಗಮರು) ಪ್ರಬಲರಾದರು.

## ಹರಿಹರ, ರಾಘವಾಂಕ, ಭೀಮಕವಿ

ವಚನ ಸೃಷ್ಟಿಯುಗದ ತೀರ ಸಮೀಪದ ಕಾಲದಲ್ಲಿ ಹುಟ್ಟಿದ ಹರಿಹರ ರಾಘವಾಂಕರು ತಮಗಿಂತ ಹಿಂದೆ ಆಗಿ ಹೋದ ಚಳವಳಿಯಲ್ಲಿ ನೇರವಾಗಿ ಪಾಲುಗಾರರಲ್ಲದಿದ್ದರೂ ಆ ಚಳವಳಿ ಬದುಕಿನಲ್ಲಿ ಉಂಟುಮಾಡಿದ ಅಲ್ಲೋಲ

* 20.2.1982

ಕಲ್ಲೋಲಗಳ ಕೊನೆಯ ಸ್ಪಂದನಗಳನ್ನಾದರೂ ಕಂಡರು. ಇದರಿಂದ ಅವರ ಕಾವ್ಯದ ವಸ್ತು, ಶೈಲಿ, ಧೋರಣೆ, ಛಂದಸ್ಸುಗಳಲ್ಲಿ ತೀರ ಮಾರ್ಪಾಟುಗಳಾದುವು. ಅದರ ಇತಿಹಾಸ ನಮಗೆ ಪ್ರಸ್ತುತವಲ್ಲವಾದರೂ, ಭಕ್ತ ಕವಿ ಹರಿಹರನಲ್ಲಿ ಹೊಲೆಯ ಶಿವಭಕ್ತರನ್ನು ನೋಡುವ ದೃಷ್ಟಿ ವಾಸ್ತವವಾಗಿ ವಚನಕಾರರಿಂದ ರೂಪಿತವಾದುದು ಎಂಬುದು ಮುಖ್ಯವಾಗುತ್ತದೆ. ಅವನು ತನ್ನ ಬೇರೆ ಬೇರೆ ರಗಳೆಗಳಲ್ಲಿ ಹೊಲೆತನದ ಸಮಸ್ಯೆಯನ್ನು ಬಗೆಬಗೆಯಾಗಿ ನಿರೂಪಿಸಿದ್ದಾನೆ. ಅವನ ಕೃತಿಗಳಿಂದ ಹರಿಜನ ಶಿವಭಕ್ತರ ಬಗ್ಗೆ ಅವನ ಧೋರಣೆ ಏನಿತ್ತೆಂಬುದು ತಿಳಿಯಬಹುದೇ ಹೊರತು ಅದು ಅವನ ಕಾಲದ ಒಟ್ಟು ಸಮಾಜದ ಧೋರಣೆಯಾಗಿತ್ತೆಂದು ಭಾವಿಸುವುದು ಕಷ್ಟವಾಗುತ್ತದೆ. ಈ ಬಗ್ಗೆ ಮುಂದೆ ಚರ್ಚೆಯನ್ನು ಕೈಗೆತ್ತಿಕೊಳ್ಳುವುದರಿಂದ ಹದಿಮೂರು ಹದಿನಾಲ್ಕನೇ ಶತಮಾನದ ಮೂವರು ಕವಿಗಳಲ್ಲಿ ಹೊಲೆಯ ಭಕ್ತರ ಸಮಸ್ಯೆ ಬಂದಿರುವ ರೀತಿಯನ್ನು ಗಮನಿಸೋಣ.

## ಹರಿಹರನ ಬಸವರಾಜದೇವರ ರಗಳೆ

ಬಸವಣ್ಣನ ಜೀವನಚರಿತ್ರೆಯನ್ನರಿಯುವವರಿಗೆ ಮೊದಲ ಬಹು ಮುಖ್ಯ ಆಕರವಾದ ಹರಿಹರ ಕವಿಯ (ಸು. ಕ್ರಿ.ಶ. 1200–20) ಬಸವರಾಜದೇವರ ರಗಳೆಯಲ್ಲಿ ಸಂಬೋಳಿ ನಾಗಿದೇವನ ಪ್ರಸಂಗವು ಉಜ್ವಲವಾಗಿ ಚಿತ್ರಿತವಾಗಿದೆ. ಬಸವಣ್ಣ ಬಿಜ್ಜಳರಾಯನ ಮಂಗಳವಾಡಕ್ಕೆ ಹೋಗಲು ಶಿವ ಕನಸಿನಲ್ಲಿ ಸೂಚನೆ ನೀಡುವಾಗಲೇ ಭಕ್ತರ ಬಂಧುವಾಗು, "ಲೌಕಿಕ ಧರ್ಮಮಂ ಮೀಱು" ಎಂದು[1] ಅಪ್ಪಣೆ ಮಾಡುತ್ತಾನೆ. "ಜಂಗಮದಲ್ಲಿ ಜಾತಿಯನ್ನು ಹುಡುಕಕೂಡದೆ"ನ್ನುವುದು ಬಸವನ ಸಂಕಲ್ಪ. ಒಂದು ದಿನ ಬಸವ ಮಂಗಳವಾಡದ ಪಟ್ಟಣವನ್ನು ಬಿಟ್ಟು ಹೊರಗೆ ಬರುತ್ತಿರುವಾಗ ಹೊಲೆಯ ಶಿವಭಕ್ತರ ಕೇರಿಯಲ್ಲಿ ("ಹಿರಿಯ ಮಾಹೇಶ್ವರರ ಕೇರಿ") ಭಕ್ತಿಯ ಘೋಷಣೆ ಕೇಳಿಸಿ, ಸಂಬೋಳಿ ನಾಗಿದೇವನೆಂಬ ಭಕ್ತನ ಮನೆಗೆ ಹೋಗಿ ಅಲ್ಲಿ ಈಶ್ವರ ಪ್ರಸಾದವನ್ನು ಭಕ್ತನ ಪ್ರಸಾದದೊಡನೆ ಸ್ವೀಕರಿಸಿದ. ಅದನ್ನೇ ಕಾಯುತ್ತಿದ್ದ ವೈಷ್ಣವರು ಬಿಜ್ಜಳನಿಗೆ, ಬಸವನ ನಡೆವಳಿ ದಿನದಿನಕ್ಕೆ ವಿಪರೀತವಾಗುತ್ತಿದೆ, ಹೊಲೆಯನ ಮನೆಯಲ್ಲಿ–ಹೊಲೆಯ ಎಂದರೆ ಬಸವನಿಗೆ ಕೋಪ, ಹಿರಿಯ ಮಾಹೇಶ್ವರ ಎನ್ನಬೇಕಂತೆ[2]–ಉಂಡುದಲ್ಲದೆ ನಿನ್ನ ಆಸ್ಥಾನಕ್ಕೂ ಬಂದು ಮೈಲಿಗೆ ಮಾಡುತ್ತಾನೆ ಎಂದಾಗ ಬಿಜ್ಜಳ ಆಸ್ಥಾನದ ಹೊರಗೆ ಪೀಠ ಹಾಕಿಸಿಕೊಂಡು ಅಲ್ಲಿಗೆ ಬಸವನನ್ನು ಕರಸುತ್ತಾನೆ. ನೀನು ವಿಪ್ರಕುಲದವನಾಗಿ ಹುಟ್ಟಿ ಭಕ್ತನಾಗಿರುವುದು ಚಿನ್ನಕ್ಕೆ ಸುವಾಸನೆ ಬಂದಂತೆ; ನೀನು ಸುಖವಾಗಿರುವುದು ಬಿಟ್ಟು ಹೊಲೆಯರ ಮನೆಗೆ ನೀನೂ ಹೋಗಿ ಆಸ್ಥಾನವನ್ನೂ ಹೊಲೆಗೆಡಿಸುವೆಯಲ್ಲ ಎಂದು ಜಂಕಿಸುತ್ತಾನೆ.

---

1. ಬಸವರಾಜ ದೇವರ ರಗಳೆ. ಸಂ: ಟಿ.ಎಸ್. ವೆಂಕಣ್ಣಯ್ಯ, ಮೈಸೂರು. 1938, ಪು. 22.
2. ಅದೇ, ಪು. 67–9.

ವಿಪ್ರನಾಗಿರುವುದು ಎಲ್ಲ ಬಗೆಯ ಅನುಕೂಲಗಳನ್ನು ಅನುಭವಿಸಲು ಎಂಬುದು ಇಲ್ಲಿಯ ಧ್ವನಿತಾರ್ಥ. ಆಗ ಬಸವ, ಹರನನರಿಯದ ಹೊಲೆಯರ ಮನೆಯನ್ನು ಹೊಕ್ಕುದಿಲ್ಲ ಎಂದು ಪ್ರತಿಭಟಿಸಿ ಬ್ರಾಹ್ಮಣನ ಮೈಯಲ್ಲಿ ಕೀವೂ ರಕ್ತವೂ ನಾಗಿಮಯ್ಯನ ಮೈಯಲ್ಲಿ ಹಾಲೂ ಇರುವುದನ್ನು ಪವಾಡದ ಮೂಲಕ ತೋರಿಸುತ್ತಾನೆ. ರಕ್ತ, ಕೀವು ಮತ್ತು ಹಾಲುಗಳು ಅಂತರಂಗದ ಸ್ವರೂಪಕ್ಕೆ ಸಂಕೇತಗಳು. 'ವೇದಜಡ' ಎಂಬ ಮಾತಿನ ಮೂಲಕ ಬ್ರಾಹ್ಮಣರ ವೇದಾಧ್ಯಯನವು ಅವರನ್ನು ಕರ್ಮಠರನ್ನಾಗಿ ಮಾಡಿತ್ತೇ ಹೊರತು ಭಕ್ತರನ್ನಾಗಿ ಮಾಡಿರಲಿಲ್ಲ, ಎಂದರೆ ಎಲ್ಲರನ್ನೂ ಶಿವಭಕ್ತಿಯಲ್ಲಿ ಒಂದಾಗಿ ನೋಡುವ ಮನುಷ್ಯರನ್ನಾಗಿ ಮಾಡಿರಲಿಲ್ಲ ವೆಂದು ಹರಿಹರ ಸೂಚಿಸುತ್ತಾನೆ.

## ಕೆಂಭಾವಿ ಭೋಗಣ್ಣನ ರಗಳೆ

ಕೆಂಭಾವಿ ಭೋಗಣ್ಣನ ರಗಳೆಯಲ್ಲಿಯೂ ಮೇಲುಜಾತಿಯ ವ್ಯಕ್ತಿಯಾದ ಭೋಗಣ್ಣ ಹೊಲೆಯ ಶಿವಭಕ್ತನನ್ನು ಮನೆಗೆ ಬರಮಾಡಿಕೊಂಡು ರಾಜನ ಅಸಮಾಧಾನಕ್ಕೆ ಗುರಿಯಾದ ಕತೆಯಿದೆ. ಭೋಗಣ್ಣ "ಶಿವಭಕ್ತರೊಳಗೆ ಜಾತಿಯ ವಿಚಾರಿಸುವುದಿಲ್ಲ"[3] ಎಂಬ ಪ್ರತಿಜ್ಞೆಯವನು. ಅವನ ಮನೆಗೆ ಶಿವನು ಹೊಲೆಯ ವೇಷದಲ್ಲಿ ಬಂದಾಗ[4] ಅವನನ್ನು ಭೋಗಣ್ಣ ಸತ್ಕರಿಸಿದ. ಬ್ರಾಹ್ಮಣರು ಅದನ್ನು ಕಂಡು ಚಂದಿಮರಸನಿಗೆ ಮೊರೆಯಿಟ್ಟಾಗ, ಅವನ ಅಪ್ರೀತಿಗೆ ಪಾತ್ರನಾದ ಭೋಗಣ್ಣ ಊರು ಬಿಟ್ಟು ಹೊರ ಹೊರಟ. ಅವನ ಜೊತೆ ಆ ಊರ ಶಿವಲಿಂಗಗಳೂ ಹೊರಟವು (ಬ್ರಾಹ್ಮಣರೂ ರಾಜನೂ ಹೆದರಿ ಪಶ್ಚಾತ್ತಾಪಪಟ್ಟಾಗ ಭೋಗಣ್ಣ ಹಿಂದಕ್ಕೆ ಬಂದ, ಅವನ ಜೊತೆ ಶಿವಲಿಂಗಗಳೂ ಬಂದುವು.)

ಶಿವಲಿಂಗಗಳು ಭೋಗಣ್ಣನ ಜೊತೆ ಹೋದುದು ಸಾಂಕೇತಿಕವಾಗಿದೆಯೆಂಬು ದನ್ನು ಸುಲಭವಾಗಿ ಗುರುತಿಸಬಹುದು. ಹೊಲೆಯರ ವೇಷದಲ್ಲಿ ಶಿವ ಬಂದುದು ತೀರ ಕೆಳವರ್ಗದ ಜನರ ಅಂತರಂಗದಲ್ಲಿ ದೇವರು ನೆಲಸಿದ್ದಾನೆ ಎಂಬ ಅರ್ಥ ವನ್ನೂ ಕೊಡಬಹುದು.

ಬಸವಣ್ಣ ಭೋಗಣ್ಣರ ಕತೆಗಳಲ್ಲಿ ಒಂದು ಕಡೆ ರಾಜ ಮತ್ತು ಅವನ ಸುತ್ತಮುತ್ತಲಿನ ಬ್ರಾಹ್ಮಣ ವರ್ಗ, ಇನ್ನೊಂದು ಕಡೆ ಶಿವಭಕ್ತ ಮತ್ತು ಅವನ ಸುತ್ತಮುತ್ತಲಿನ ಅಸ್ಪೃಶ್ಯ ವರ್ಗ ಈ ಎರಡು ಪಕ್ಷಗಳನ್ನು ನೋಡುತ್ತೇವೆ. ಈ ಎರಡು ಪಕ್ಷಗಳ ಹೋರಾಟ ಹನ್ನೆರಡನೆಯ ಶತಮಾನದ ಕರ್ನಾಟಕದ ಜನಜೀವನದ

---

3. ಹರಿಹರನ ರಗಳೆಗಳು. ಸಂ: ಫ.ಗು. ಹಳಕಟ್ಟಿ. ಧಾರವಾಡ. 1938 ಪು. 272–79.

4. ಅದೇ – "ಹೆಗಲಮಿಣಿ ಕೆಯ್ಯ ಸಂಬಳಿಗೋಲಿನೀಶ್ವರಂ । ಸೊಗಯಿಪ ವಿಭೂತಿ ರುದ್ರಾಕ್ಷಿಯ ಕೃಪಾಕರಂ । ಪಿರಿಯ ವೇಷಂಗೊಂಡು..."

ವೈಲಕ್ಷಣ್ಯ. ಜಡ ಸಂಪ್ರದಾಯ ಮತ್ತು ಮನುಷ್ಯತ್ವಗಳಿಗೆ ಈ ಎರಡು ಪಕ್ಷಗಳು ಅರ್ಥಪೂರ್ಣ ಎರಡು ಸಂಕೇತಗಳು. ಹರಿಹರ ಭಕ್ತನಾದುದರಿಂದ ಅವನ ಕತೆಗಳಲ್ಲಿ ಭಕ್ತನ ಪಕ್ಷಕ್ಕೇ ಜಯ ಕಟ್ಟಿಟ್ಟದ್ದು.

## ಕೇಶಿರಾಜ ಜೊಮ್ಮಣ್ಣರ ಕತೆಗಳು

ಕೇಶಿರಾಜ ಮತ್ತು ತೆಲುಗು ಜೊಮ್ಮಯ್ಯಗಳ ಕತೆಯಲ್ಲೂ ಭಕ್ತರು ಒಂದು ಪಕ್ಷದಲ್ಲಿದ್ದರೆ ರಾಜ ಇನ್ನೊಂದು ಪಕ್ಷದಲ್ಲಿ ಕಾಣಿಸಿಕೊಳ್ಳುತ್ತಾನೆ. ಶಿವನನ್ನು ಬಿಟ್ಟು ರಾಜನಿಗೆ ತನ್ನ ನಿಜವಾದ ನಿಷ್ಠೆಯನ್ನು ತೋರಿಸಲು ಒಪ್ಪದ ಕೇಶೀರಾಜ ತನ್ನ ಮಂತ್ರಿ ಪದವಿಗೆ ತಿಲಾಂಜಲಿ ಕೊಟ್ಟು ರಾಜಧಾನಿಯ ಊರ ಹೊರಗಿನ ವಂಶರ್ಧನನೆಂಬ ಮೇದಾರನ ಮನೆಗೆ – 'ಮಹಾಮಾಹೇಶ್ವರ'ನ ಮನೆಗೆ – ಬರುತ್ತಾನೆ. ಕೊಂಡಗುಳಿ ಕೇಶಿರಾಜನ ಬದುಕಿನಲ್ಲಿ ನಡೆದ ಈ ಘಟನೆ ಐತಿಹಾಸಿಕವಾದುದಾದರೆ, ಲಿಂಗಾಯತ ಚಳವಳಿ ಅರಮನೆ ಅಧಿಕಾರಗಳನ್ನು ಪ್ರತಿಭಟಿಸಿ ನಿಂತು ಅವನ್ನು ತ್ಯಜಿಸಿ ಜನ ಸಾಮಾನ್ಯರತ್ತ ತೆರಳಿದುದಕ್ಕೆ ಸಂಕೇತವಾಗಿದೆ. ಮೇದರವನು ತನ್ನ ಮನೆಗೆ ಬಂದ ಕೇಶಿರಾಜನಿಗೆ ತನ್ನ ಗುಡಿಸಲ ಮುಂದಿನ ಮಾವಿನಮರದ ಕೆಳಗೆ ಹುಲ್ಲಮೇಲೆ ಬಿದಿರನ ಚಾಪೆ ಹಾಕಿ ಕುಳ್ಳಿರಿಸಿದನೆಂಬ ಕತೆ[5] ಹರಿಹರನಲ್ಲಿದೆ. ಕೇಶಿರಾಜ ತನ್ನ ಕಾಲದ ಶಿವಭಕ್ತ ಜೊಮ್ಮಣ್ಣನನ್ನು ನೋಡಲು ಹೋದ ಕತೆಯೂ ಸ್ವಾರಸ್ಯವಾಗಿದೆ. ಜೊಮ್ಮಣ್ಣ ನಿಷ್ಠಾವಂತ ಶಿವಭಕ್ತ, ಶಿವನ ಮೇಲ್ಮೆಯನ್ನು ಸ್ಥಾಪಿಸಲು ವೈಷ್ಣವ ಬ್ರಾಹ್ಮಣನೊಬ್ಬನನ್ನು ಕೊಲ್ಲಲೂ ಹಿಂಜರಿಯಲಿಲ್ಲ. ಸ್ವತಃ ಬೇಟೆಗಾರ ಜೊಮ್ಮಣ್ಣನನ್ನು ಕೇಶಿರಾಜ ಭೇಟಿಯಾಗಲು ಮನೆಗೆ ಹೋದಾಗ ಅವನ ಮನೆಯ ತುಂಬ ಮಾಂಸ ವನ್ನು ನೋಡಿ ಹೇಸಿ ಹಿಂದಕ್ಕೆ ಬಂದನೆಂದೂ, ಕೇಶಿರಾಜನ ದೈವ ಅದಕ್ಕಾಗಿ ಮುನಿಸಿಕೊಂಡು ಮೇಲೇಳಲಿಲ್ಲವೆಂದೂ ಕತೆಯಿದೆ.[6] ಶಿವ ತನ್ನ ಭಕ್ತನ ಮಾಂಸಾ ಹಾರಕ್ಕೆ ಅಡ್ಡಿ ಬಂದಿರಲಿಲ್ಲ; ಮಾಂಸದ ಕಾರಣಕ್ಕೆ ಯಾರಾದರೂ ಅಸಹ್ಯಪಟ್ಟರೆ ಸಹಿಸುತ್ತಿರಲಿಲ್ಲ. ಮಂತ್ರಿ ಕೇಶಿರಾಜನೂ ಶಿವಭಕ್ತನೇ; ಆದರೆ ಅವನಿಗಿಂತ ತೀರ ಕೆಳವರ್ಗದ ಶಿವಭಕ್ತನಾದ ಜೊಮ್ಮಯ್ಯನ ಬಗ್ಗೆ ಶಿವನಿಗೆ ಇಲ್ಲದ ಪಕ್ಷಪಾತ (ಇಂತಹುದೇ ಕತೆ ಮಾದಾರ ಚನ್ನಯ್ಯನ ಕತೆಯಲ್ಲೂ ಬರುತ್ತದೆ.)

ಮೇಲಿನ ನಾಲ್ಕೂ ಐತಿಹಾಸಿಕ ಪುರುಷರ ಕತೆಗಳಲ್ಲಿ – ಈ ಕತೆಗಳಲ್ಲಿ ಇತಿಹಾಸೇತರ ಅಂಶಗಳು ಸ್ವಲ್ಪ ಸೇರಿರಬಹುದು–, ಸಂಪ್ರದಾಯದ ಸಂರಕ್ಷಣೆಗಾಗಿ, ಜಾತಿ ನಿಯಮಗಳನ್ನು ಉಳಿಸುವಲ್ಲಿ ಬ್ರಾಹ್ಮಣನ ಜೊತೆ ರಾಜ ಶಾಮೀಲಾಗಿದ್ದಾನೆ. ರಾಜನಿಗೆ ಬ್ರಾಹ್ಮಣನ ಅಗತ್ಯವಿದೆ, ಏಕೆಂದರೆ ಬ್ರಾಹ್ಮಣನ ಶ್ರೇಷ್ಠತೆಯನ್ನೂ ಮತೀಯ

5. ಕೇಶಿರಾಜ ದಣ್ಣಾಯಕರ ರಗಳೆ, ಹರಿಹರನ ರಗಳೆಗಳು. ಸಂ: ಫ.ಗು. ಹಳಕಟ್ಟಿ. 1968. ಪು. 303.

6. ತೆಲುಗು ಜೊಮ್ಮಯ್ಯನ ರಗಳೆ. ಅದೇ, ಪು. 330.

ಯಾಜಮಾನ್ಯವನ್ನೂ ಒಪ್ಪಿಕೊಂಡ ಜನತೆಯನ್ನು ಅವನ ಮೂಲಕ ನಿಯಂತ್ರಿಸುವುದು ರಾಜನಿಗೆ ಸುಲಭವಾಗುತ್ತದೆ. ಬ್ರಾಹ್ಮಣನಿಗೆ ರಾಜನ ಅಗತ್ಯವಿದೆ; ಏಕೆಂದರೆ ಅವನಿಂದ ತನ್ನ ಲೌಕಿಕ ಹಿತಾಸಕ್ತಿಗಳು ಪೂರ್ಣಗೊಳ್ಳುತ್ತವೆ. ಬ್ರಾಹ್ಮಣ ಅಬ್ರಾಹ್ಮಣರ ಕೂಗುಗಳಲ್ಲಿ ರಾಜನಿಗೆ ಕೇಳಿಸುವುದು ಬ್ರಾಹ್ಮಣನ ಕೂಗು, ಅವನು ಓಗೊಡುವುದು ಬ್ರಾಹ್ಮಣನ ಪ್ರಾರ್ಥನೆಗೆ. ಏಕೆಂದರೆ, ವರ್ಣಾಶ್ರಮ ಪರಿಪಾಲನೆ ಎಂಬುದು ಕ್ಷತ್ರಿಯ ಧರ್ಮದ ಬಹುಮುಖ್ಯ ಭಾಗವೆಂದು ಎಲ್ಲ ಶಾಸ್ತ್ರಗಳೂ ಹೇಳುತ್ತ ಬಂದಿವೆಯಲ್ಲವೆ! ರಾಜ ಮತ್ತು ಬ್ರಾಹ್ಮಣ ಇಬ್ಬರೂ ಸೇರಿ ವ್ಯವಸ್ಥೆಯ (Establishment) ಸಾಕಾರ ರೂಪವಾಗಿರುವುದರಿಂದ ಅವರಿಬ್ಬರನ್ನೂ ಭಕ್ತಿ ಎದುರಿಸಿ ನಿಂತಿತು ಎಂಬುದನ್ನು ಹರಿಹರ ಮೇಲಿನ ನಾಲ್ಕೂ ಕತೆಗಳಲ್ಲಿ ಚಿತ್ರಿಸಿದ್ದಾನೆ.

## ಮಾದಾರ ಚೆನ್ನಯ್ಯನ ಕತೆ

ಹರಿಹರನಲ್ಲಿ ಬಂದಿರುವ ಮಾದಾರ ಚೆನ್ನಯ್ಯ ಐತಿಹಾಸಿಕ ಪುರುಷನಾಗಿ ಕಾಣಿಸಿಕೊಳ್ಳುತ್ತಾನೆ. ಅಪ್ಪಟ ಜೈನ ವಂಶ ಚೋಳರ ವಿಕ್ರಮ ಚೋಳ (1118–35) ಅಥವಾ ಅವನ ಮಗ ಕುಲೋತ್ತುಂಗ ಚೋಳ ಎಂದು ಊಹಿಸಬಹುದಾದ ಕರಿಕಾಲ ಚೋಳನ ಕಾಲದಲ್ಲಿ ಅವನನ್ನು ಕವಿ ಇಡುತ್ತಾನೆ (ಅವನನ್ನು ಬಸವನ ಕಾಲದ ಕನ್ನಡ ವಚನಕಾರ ಮಾದಾರ ಚೆನ್ನಯ್ಯನ ಜೊತೆ ಸಮೀಕರಿಸಬಹುದು). ಹರಿಹರನ ಶ್ರೇಷ್ಠ ಕಿರುರಗಳೆಗಳಲ್ಲಿ ಒಂದಾಗಿರುವ ಇದರ ಆರಂಭದಲ್ಲಿ ಬರುವ ಎರಡು ಪದ್ಯಗಳಲ್ಲಿ ಶಿವಭಕ್ತಿಯ ಮುಂದೆ ಜಾತಿ ಎಷ್ಟು ಕ್ಷುದ್ರವೆಂಬುದನ್ನು ಕವಿ ಸೂಚಿಸುತ್ತಾನೆ.[7]

**ಸನ್ನುತಾಗಮನಿಕರ ತಲ್ಲಣಂಗೊಳೆ ತನ್ನ**
**ಜಿಹ್ವೆಯೊಳು ಸವಿದು ಪನ್ನಂಗಧರಗಿತ್ತ**
**ಚೆನ್ನಯ್ಯನೆನ್ನಯ್ಯನೆಂಬೆ ॥**

**ವೃತ್ತ : (?) ವೇದದ ಡಂಗುರಂ ಹೆದರಿ ಸೈವೆರಗಾದುವು ಶಾಸ್ತ್ರ ಸಂಭ್ರಮಂ**
**ಪೋಮವು ನಿಚ್ಚಲೋದುವ ಪುರಾಣದ ಮಾಲೆಗಳೆಂಬುವೆಲ್ಲ ಹಾ**
**ಳಾದುವು ಜಪ ತಪ ನೇಮ ಸಂಧ್ಯಾಸಮಾಧಿಗಳೆಂಬಿವೆಲ್ಲ ನುಚ್ಚು ನೂ**
**ರಾದವು ಹಂಪೆಯಾಳ್ದ ವರಚೆನ್ನನ ಕೂಡೊಲಿದುಂಡ ಕಾರಣ(ಂ) ॥**

(ಪಾಠ ಹಳಕಟ್ಟಿಯವರ ಆವೃತ್ತಿಯಲ್ಲಿನಂತೆ; ವೃತ್ತದ ನಾಲ್ಕನೇ ಸಾಲಿನ ಅಂತ್ಯ ಬಿಂದು ನಾನು ಸೇರಿಸಿದ್ದು.)

ಹೊಲೆಯನಾದ ಚೆನ್ನನ ಮನೆಯಲ್ಲಿ ಅವನ ಎಂಜಲನ್ನು ಶಿವ ಉಂಡುದರಿಂದ ಆಗಮಗಳು ನಡುಗಿಹೋದುವು; ವೇದ ಪುರಾಣ ಶಾಸ್ತ್ರ ಜಪ ತಪ ಸಂಧ್ಯಾವಂದನೆ ಸಮಾಧಿ ಇವೆಲ್ಲ ಸಾವಿರಾರು ವರ್ಷಗಳಿಂದ ಯಾವ ನಿಯಮಗಳನ್ನು ಕಟ್ಟಿಕೊಂಡಿದ್ದುವೋ, ಕಟ್ಟಿದ್ದ ಅವು ಗಟ್ಟಿಯೆಂದು ಭಾವಿಸಿದ್ದುವೋ ಅವೆಲ್ಲ ನಿಮಿಷಾರ್ಧ

7. ಮಾದಾರ ಚೆನ್ನಯ್ಯಗಳ ಮಹಾತ್ಮೆ, ಹರಿಹರನ ರಗಳೆಗಳು. ಪು. 348.

ದಲ್ಲಿ ಸಿಡಿದು ಗಾಳಿಗೆ ತೂರಿ ಹೋದುವು. ಇಡೀ ಕನ್ನಡ ಸಾಹಿತ್ಯದಲ್ಲಿ ಇದಕ್ಕಿಂತ ಧೀರವಾದ ಬರವಣಿಗೆ ಮತ್ತೊಂದು ದೊರಕಲಾರದು.

ಹೊಲೆಯರ ಮನೆಯಲ್ಲಿ ಉಣ್ಣಬಾರದು–ಅದು ಒಂದು ನಿಯಮ. ಹರಿಹರನ ಪ್ರಕಾರ ಈ ನಿಯಮ ದೈವ ಸೃಷ್ಟಿಯಲ್ಲ; ಅದು ಹಿತಾಸಕ್ತಿಗಳು ಮಾಡಿಕೊಂಡದ್ದು, ಮನುಷ್ಯನ ಕೃತಕ ನಿರ್ಮಾಣ. ಅದನ್ನು ವೇದ ಶಾಸ್ತ್ರ ಆಗಮ ಗ್ರಂಥಗಳು, ಜಪ ತಪ ಸಂಧ್ಯಾವಂದನೆ ಇತ್ಯಾದಿ ಆಚರಣೆಗಳು ಅನಾದಿ ಕಾಲದಿಂದ ಘೋಷಿಸಿ ಬೆಳಸಿ ಒಂದು ನಿಜವನ್ನಾಗಿ ಮಾಡಿಬಿಟ್ಟಿದ್ದುವು. ಈ ಭ್ರಾಂತಿಯನ್ನು ಒಂದೇ ಒಂದು ನಿಮಿಷ ದಲ್ಲಿ, ತನ್ನ ಒಂದೇ ಒಂದು ಕಾರ್ಯದಿಂದ ಬಯಲು ಮಾಡಿದವನು ಬೇರೆ ಯಾರೂ ಅಲ್ಲ, ಶಿವ. ಜಾತಿಯ ಕಟ್ಟುಪಾಡುಗಳು ಶಿವನಿಗೆ ಒಪ್ಪಿತವಲ್ಲ. ಅವನ ಕಟ್ಟುಪಾಡು ಸರಳ ಜೀವನಕ್ಕೆ, ಹೃದಯಶುದ್ಧಿಗೆ ಸಂಬಂಧಿಸಿದೆ.

ಮತೀಯ ಅಥವಾ ಜಾತೀಯ ಸಂಪ್ರದಾಯದ ನಿಯಮಗಳನ್ನು ಶಿವ ಮುರಿದ ವಿಷಯವನ್ನು ಹೇಳುವ ಮೇಲಿನ ಎರಡೂ ಪದ್ಯಗಳಲ್ಲಿ ಹರಿಹರ ಕವಿ ಬೇಕೆಂದೇ ಛಂಮೋನಿಯಮಗಳನ್ನು ಮೀರಿದ್ದಾನೆ. ಮೊದಲ ಪದ್ಯ ತ್ರಿಪದಿಯಾದರೂ ಅಲ್ಲಿ ಪ್ರಾಸ ನಿಯದೋಲ್ಲಂಘನೆಯಾಗಿದೆ. ಎರಡನೆಯ ಪದ್ಯ ಉತ್ಪಲಮಾಲೆಯಲ್ಲಿ ಪ್ರಾಸನಿಯಮವಿದೆ, ಗಣನಿಯಮ ಗಾಳಿಗೆ ತೂರಿ ಹೋಗಿದೆ.[8] ಛಂಮೋಭಂಗವು ಈ ಪದ್ಯಗಳ ದೋಷ ಅಲ್ಲ, ಗುಣ. ಛಂದಸ್ಸಿನ ನಿಯಮಗಳನ್ನು ಮುರಿದ ಪದ್ಯಗಳ ಮೂಲಕ ಲೋಕದ ನಿಯಮಗಳನ್ನು ಶಿವ ಮುರಿದುದನ್ನು ಪರಿಣಾಮಕಾರಿಯಾಗಿ ಕವಿ ಧ್ವನಿಸಿರುವ ರೀತಿ ಅನನ್ಯವಾದುದು.

ಕರಿಕಾಲ ಚೋಳನ ಬಳಿ ಲಾಯಕ್ಕೆ ಹುಲ್ಲನ್ನು ಹೊತ್ತು ಹಾಕುವ ಕೆಲಸಕ್ಕಿದ್ದ ಚೆನ್ನಯ್ಯನ ("ಜಾತಿ ಮಾದರ, ಚೆನ್ನನೆಂಬ ನಾಮಂ") ಅರವತ್ತು ವರ್ಷಗಳವರೆಗೆ ತನ್ನ ಶಿವಭಕ್ತಿಯನ್ನು ಗುಪ್ತವಾಗಿ ಉಳಿಸಿಕೊಂಡಿದ್ದ. ಒಂದು ದಿನ ಎಂದಿನಂತೆ ಕರಿಕಾಲ ಚೋಳನು ಶಿವನಿಗೆ ಭೋಜನವನ್ನು ಒಪ್ಪಿಸಿದಾಗ, ತನಗೆ ಹಸಿವಿಲ್ಲವೆಂದೂ ಚೆನ್ನಯ್ಯನ ಮನೆಯ ಅಂಬಲಿ ಕುಡಿದು ತೃಪ್ತಿಯಾಗಿದೆಯೆಂದೂ ಶಿವ ಹೇಳಿಬಿಡು ತ್ತಾನೆ. ಆ ಭಕ್ತ ತನ್ನ ರಾಜಧಾನಿಯಲ್ಲಿರುವ ಸಂಗತಿ ತಿಳಿದು ಅವನ ದರ್ಶನಕ್ಕೆ 'ಹಿರಿಯ ಕೇರಿ'ಗೆ (ಹೊಲೆಗೇರಿ) ರಾಜ ಬರುತ್ತಾನೆ. ಗಾಬರಿಗೊಂಡಿದ್ದ ಚೆನ್ನಯ್ಯನ ಪಾದಗಳಿಗೆ ತನ್ನ ಹಣೆಯನ್ನು ಚಾಚುತ್ತಾನೆ, ದೀರ್ಘದಂಡ ನಮಸ್ಕಾರವನ್ನು ಮಾಡುತ್ತಾನೆ ("ಇಳಿಪಿದಂ ಸರ್ವಾಂಗಮಂ ಚೆನ್ನನಂಘ್ರಿಯೊಳ್"). ತಾನು ಹೊಲೆಮನೆಯ ಚೆನ್ನಯ್ಯ ಎಂದು ಹೇಳಿ ಕೊಂಡದ್ದಕ್ಕೆ, ಶಿವ ಒಲಿದವನ ಕುಲವೇ ಸತ್ಕುಲವೆಂದೂ, ಆ ಶಿವಭಕ್ತನ ಪಾದರಕ್ಷೆಗೆ ತನ್ನ ಶಿರಸ್ಸು ಸಮ ಅಲ್ಲವೆಂದೂ ರಾಜ

8. ವಿವರಗಳಿಗೆ, ನೋಡಿ – ಎಂ. ಚಿದಾನಂದಮೂರ್ತಿ: 'ಹರಿಹರನ ಎರಡು ಪದ್ಯಗಳ ಬಗ್ಗೆ (ಕಲ್ಪನಾವಿಲಾಸದ) ಒಂದು ಟಿಪ್ಪಣಿ.' ಸಾಧನೆ, 5.1, ಪು. 145–7.

ಹೇಳುತ್ತಾನೆ. ("ದೇವದೇವನೊಲ್ದನ ಕುಲಂ ಸತ್ಕುಲಂ... ಸರ್ವಜ್ಞ, ನಿಮ್ಮ ಕೆರವಿಂಗೆನ್ನ ಶಿರ ಸರಿಯೆ"). ತನ್ನ ಭಕ್ತಿ ಬಯಲಾದುದಕ್ಕೆ ಚೆನ್ನಯ್ಯ ಬಹಳವಾಗಿ ಚಡಪಡಿಸಿದರೂ ಅಂತ್ಯದಲ್ಲಿ ಚೆನ್ನಯ್ಯನಿಗೆ ಶಿವಸಾನ್ನಿಧ್ಯ ದೊರೆಯುತ್ತದೆ, 'ಕುಲಹೀನ'ನು ಶಿವನನ್ನು ಸೇರುತ್ತಾನೆ. ಶಿವ ತನ್ನನ್ನು ಮೈಲಿಗೆ ಮಾಡಿಕೊಂಡು ಅಸ್ಪೃಶ್ಯ ಭಕ್ತರಲ್ಲಿ ನೆಲಸಿದ ಎಂದು ಕವಿ ವರ್ಣಿಸುತ್ತಾನೆ.[9]

**ಪರಮನೊಪ್ಪಿದನತುಳವರಹಸ್ತನೊಪ್ಪಿದಂ**
**ಕುಲತಿಲಕನೊಪ್ಪಿದಂ ಕುಲಹೀನನೊಪ್ಪಿದಂ**
**ಹೊಲೆಗಲಸಿ ಭಕ್ತರೊಳ್ ನೆಲಸಿರ್ಪನೊಪ್ಪಿದಂ**

ಹರಿಹರನು ಚೆನ್ನಯ್ಯನಂತೆಯೇ ಶಿವನನ್ನೂ ಕುಲಹೀನನೆಂದು ಕರೆದಿರುವುದು ಗಮನಾರ್ಹ. ಅವನು ಕುಲಹೀನನಾದುದರಿಂದಲೇ ಕುಲಹೀನನ ಪಕ್ಷವನ್ನು ಹಿಡಿದ. ಹೊಲೆಮಾಡಿಕೊಂಡಾದರೂ ತನ್ನ ಭಕ್ತರಲ್ಲಿಯೇ ಶಿವನು ನೆಲಸಿರುತ್ತಾನೆ.

ಈ ಕತೆಯಲ್ಲಿ ರಾಜನು ಪ್ರತಿಪಕ್ಷದಲ್ಲಿ ನಿಂತಿಲ್ಲ, ಭಕ್ತ ಪಕ್ಷದಲ್ಲಿಯೇ ಇದ್ದಾನೆ. ಅವನು ಚಕ್ರವರ್ತಿ, ಭಕ್ತಿಯಲ್ಲಿ ಏನೂ ಕಡಮೆಯಿಲ್ಲ, ಶಿವನಿಗೆ ಅವನು ಮಾಡುವ ಭಕ್ತಿಯಲ್ಲಿ ಕುಂದು ಕೊರತೆಯಿಲ್ಲ. ಆದರೂ ಶಿವ ನೀಚಕುಲದ ದರಿದ್ರನನ್ನು ಒಲಿದ. ಇಲ್ಲಿ ಇಬ್ಬರದೂ ಸಮಾನ ಭಕ್ತಿಯಾದರೂ, ಮಾದಾರ ಚೆನ್ನಯ್ಯನಿಗೆ ಶಿವನನ್ನು ತನ್ನತ್ತ ಸೆಳೆಯಲು ಇದ್ದ ವಿಶೇಷ ಶಕ್ತಿ ಕರಿಕಾಲ ಚೋಳನಲ್ಲಿ ಇಲ್ಲದ್ದು–ಅವನ ಹೀನಕುಲ, ದಾರಿದ್ರ್ಯ, ಗುಪ್ತಭಕ್ತಿ. ಶಿವ ವೈಭವಾಡಂಬರಗಳಿಗಿಂತ ಹೃದಯ ಶುದ್ಧಿಯನ್ನು ಸಿರಿವಂತಿಕೆಗಿಂತ ಬಡತನವನ್ನು, ಶ್ರೇಷ್ಠ ಕುಲಕ್ಕಿಂತ ಹೀನಕುಲವನ್ನು ಬೆಂಬಲಿಸುತ್ತಾನೆ ಎಂಬುದನ್ನು ಅತ್ಯಂತ ಪರಿಣಾಮಕಾರಿಯಾಗಿ ಕವಿ ಚಿತ್ರಿಸುತ್ತಾನೆ. ಚಕ್ರವರ್ತಿಯೊಬ್ಬ ಎಲ್ಲರ ಎದುರಿಗೆ ತನ್ನ ತಲೆಯನ್ನು ಹೊಲೆಯನ ಪಾದಗಳತ್ತ ಚಾಚುವ ಘಟನೆ ಭಾರತೀಯ ಸಾಹಿತ್ಯದಲ್ಲೇ ಅತ್ಯಂತ ಸ್ಮರಣೀಯ. ಭಕ್ತಿಯ ಮುಂದೆ ರಾಜತ್ವವು ಕ್ಷುದ್ರವಾಗಿ ಕಾಣುವಂತೆ ಕವಿ ಮಾಡಿದ್ದಾನೆ.

## ಶ್ವಪಚಯ್ಯನ ಕತೆ

ಉನ್ನತ ಕುಲ ಮತ್ತು ವಿದ್ಯೆಗಳ ಅಹಂಕಾರದ ನಿರಸನದ ಕತೆ 'ಸಾಮವೇದಿಗಳ ಮಹಾತ್ಮೆ'ಯಲ್ಲಿ ಬಂದಿದೆ.[10] ಸಾಮವೇದಿ ಪಾಪರಹಿತ, ಸಾಮವೇದದ ವಿದ್ವಾಂಸ, ಬ್ರಾಹ್ಮಣ, ಮೂರು ಸಾವಿರ ಶಿಷ್ಯರಿಗೆ ಗುರು. ಒಂದು ದಿನ ಕಾಡಿಗೆ ಬಂದು ಯಾರೂ ಇರದ ಜಾಗದಲ್ಲಿ ಎಲ್ಲರೂ ಸೇರಿ ವೇದವನ್ನು ಪಠಿಸಿದರು (ಶೂದ್ರರಿಗೆ ವೇದ ಕೇಳಿಸೀತೆಂಬ ಅಳುಕು ಅವರು ಕಾಡಿಗೆ ಬರುವಂತೆ ಮಾಡಿತು).

9. ಹರಿಹರನ ರಗಳೆಗಳು, ಪು. 348.

10. ಅದೇ, ಪು. 237.

ಬಳಿಕ ಸಾಮವೇದಿ ಆಕಾಶದಲ್ಲಿ ಹಾರಿ ಬರುತ್ತಿರುವಾಗ ದಾರಿಯಲ್ಲಿ ಶಿವಭಕ್ತ ಶ್ವಪಚಯ್ಯ ಕಾಣಿಸಿದ. ಕಾಡಿನಲ್ಲಿ ಶಿವಪೂಜೆ ಮಾಡಿದರೆ ಭವಿಗಳ ಕಣ್ಣಿಗೆ ಕಾಣಿಸುವುದಿಲ್ಲ ಎಂಬ ವಿಶ್ವಾಸ ಶ್ವಪಚಯ್ಯನದು. ಮನುಷ್ಯರ ತಲೆಯೋಡಿನಲ್ಲಿ ಹೆಂಡ ನಾಯಿ ಮಾಂಸವನ್ನು ಹಾಕಿ ಅಡುಗೆಮಾಡುತ್ತಿದ್ದವನು (ಅದು ಅವನ "ಜಾತಿ ಧರ್ಮದ ಓಗರ") ಸಾಮವೇದಿ ಆಕಾಶದಲ್ಲಿ ಕಾಣಿಸಿದೊಡನೆ ಪಾತ್ರೆಯನ್ನು ತನ್ನ ಕೆರದಿಂದ ಮುಚ್ಚಿದ, ಭವಿಯ ಕಣ್ಣಿಗೆ ಬಿದ್ದೀತೆಂದು. ಬ್ರಾಹ್ಮಣನಾಗಿದ್ದ ಸಾಮವೇದಿಗೆ ಆಶ್ಚರ್ಯವಾಗಿ, "ಕುಲವಿಂತು, ಅಡಿಗೆ ಇಂತು, ಮುಚ್ಚುವುದು ತಾನಿಂತು" ಎಂದುಕೊಂಡು ಇಳಿದು ಬಂದು ಏಕೆ ಮುಚ್ಚಿದೆ ಎಂದು ಪ್ರಶ್ನಿಸಿದ. ಶ್ವಪಚಯ್ಯ ಮಾತನಾಡಲಿಲ್ಲ. ಸಾಮವೇದಿಯ ಕನಸಲ್ಲಿ ಶಿವ ಬಂದು ಶ್ವಪಚಯ್ಯ ಬೇರೆ ಅಲ್ಲ, ನಾನು ಬೇರೆ ಅಲ್ಲವೆಂದು ಹೇಳಿದ್ದಲ್ಲದೆ ಇತ್ತ ಶ್ವಪಚಯ್ಯನಿಗೆ ನಿನ್ನ ಬಳಿ ಬರುವ ಸಾಮವೇದಿಗೆ ಉಪದೇಶ ನೀಡು ಎನ್ನುತ್ತಾನೆ. ಗಿಡ, ಮರ, ಬಳ್ಳಿಗಳೂ ಕಾಡಿನ ಬೇಡರೂ ಚಂಡಾಲರೂ ಭಕ್ತರೇ? ಅವರು ನೋಡಿದರೆ ಮೈಲಿಗೆಯಾಗಲಿಲ್ಲ, ನಾನು ಮಾತ್ರ ಭವಿಯೇ ಎಂದು ಸಾಮವೇದಿ ಕೇಳಿದ್ದಕ್ಕೆ ಉತ್ತರವಾಗಿ ಶ್ವಪಚಯ್ಯ "ಗಿಡ ಮರಗಳು ಪತ್ರೆ ಕೊಡುವುವು. ಮರಕ್ಕೆ ಕಾಮ ಕ್ರೋಧ ಇಲ್ಲ, ಮೃಗಗಳು ಹುಲ್ಲು ಮೇದು ನೀರು ಕುಡಿದು ಮುಗ್ಧವಾಗಿ ಬದುಕುತ್ತವೆ. ಬೇಡರಿಗೆ ವೇದ ತಿಳಿಯದು, ಬೇಟೆ ತಮ್ಮ ಜಾತಿಧರ್ಮ ಎಂದು ಅವರು ತಿಳಿದಿದ್ದಾರೆ. ಅವರು ಬರಿಯ ಜಾತಿ ಚಂಡಾಲರು, ನೀನು ಕರ್ಮಚಂಡಾಲ. ನೀನು ಇದೆಲ್ಲ ತಿಳಿದೂ ಶಿವನನ್ನು ಪೂಜಿಸುವುದಿಲ್ಲ. ನಿನಗೆ ಗಗನ ಸಾಮರ್ಥ್ಯವಿದ್ದರೆ ಎಲೆ ಹುಲ್ಲುಗಳಿಗೂ ಆ ಸಾಮರ್ಥ್ಯವಿದೆ, ನಿನ್ನದೇನು ಹೆಚ್ಚಳ" ಎನ್ನುತ್ತಾನೆ. ಸಾಮವೇದಿಗೆ ಜ್ಞಾನೋದಯವಾಗಿ ಶಿವಭಕ್ತನಾಗುತ್ತಾನೆ. ಅವನ ಊರಾದ ಛತ್ತೀಸಪುರದ ಜನರೂ ಭಕ್ತರಾಗುತ್ತಾರೆ.

ಮುಂದೆ, ಸಾಮವೇದಿ ತನ್ನ ತಂದೆಯ ಶ್ರಾದ್ಧವನ್ನು ಮಾಡಲು ವಿಶ್ವೇದೇವರಾಗಿ ಬಾ ಎಂದು ಶ್ವಪಚಯ್ಯನನ್ನು ಕರೆದಾಗ, "ಪಿತೃದಿವಸ ನನ್ನ ವೇಷದಲ್ಲಿ ವಿಶ್ವೇದೇವರೆ ಬರುತ್ತಾನೆ" ಎಂದ. ಕೈಯಲ್ಲಿ ಸಂಬಳಿಗೋಲು ಹಿಡಿದು ಕರು ಹೊತ್ತ ಈಶ್ವರ ಹೊಲೆಯ ವೇಷದಲ್ಲಿ ("ಬರುತಿರ್ದನೀಶ್ವರ ಪಿರಿಯ ವೇಷಂಗೊಂಡು") ಬಂದು ಎಲ್ಲವನ್ನೂ ನೆರವೇರಿಸಿದ. ಮುಂದೆ ಶ್ವಪಚ, ಸಾಮವೇದಿಗಳಿಬ್ಬರನ್ನೂ ಶಿವ ಕೈಲಾಸಕ್ಕೆ ಒಯ್ದ.

ಇಲ್ಲಿ ಬರುವ ವಿರುದ್ಧ ಪಾತ್ರಗಳು ಸಮಾಜದ ಎರಡು ಧ್ರುವಗಳಿಗೆ ಸೇರಿವೆ. ಬಹುಸಂಖ್ಯೆಯ ಶಿಷ್ಯರೊಡಗೂಡಿದ, ಸಾಮವೇದವನ್ನು ಸಿದ್ಧಿ ಮಾಡಿಕೊಂಡ ಗಗನ ಸಾಮರ್ಥ್ಯದ ಬ್ರಾಹ್ಮಣ ಒಂದು ಕಡೆ; ಹೀನರ ಕಿವಿಗೆ ವೇದ ಬಿದ್ದೀತೆಂದು ಅವನು ಕಾಡಲ್ಲಿ ವೇದಪಠನ ಮಾಡಿಸುತ್ತಾನೆ ಶಿಷ್ಯರ ಕೈಲಿ. ಮನುಷ್ಯರ ತಲೆಯೋಡಿನಲ್ಲಿ ನಾಯಿ ಮಾಂಸವನ್ನು ಬೇಯಿಸುವ ಶ್ವಪಚಯ್ಯ ಅನಾಗರಿಕ ಬೇಡರಿಂದ ಚಂಡಾಲ

ರಿಂದ ಸುತ್ತವರಿದಿದ್ದಾನೆ, ಭವಿಗಳಿಗೆ ತನ್ನ ಶಿವಭಕ್ತಿ ಕಾಣಿಸೀತೆಂದು ಅವನೂ ಕಾಡಿಗೆ ಬಂದಿದ್ದಾನೆ. ಕಾಡಲ್ಲಿ ಒಂದು ಕಡೆ ವೇದಘೋಷ, ಇನ್ನೊಂದೆಡೆ ನಾಯಿಮಾಂಸದ ಅಡುಗೆ. ಶ್ವಪಚಯ್ಯ ತನ್ನ ಅಡುಗೆ ಪಾತ್ರೆಯನ್ನು ಎಕ್ಕಡದಿಂದ ಮುಚ್ಚುವ ಮೂಲಕ ಇಡೀ ಬ್ರಾಹ್ಮಣ್ಯದ ಬಗ್ಗೆ ಇರುವ ತಿರಸ್ಕಾರವನ್ನು ವ್ಯಕ್ತಪಡಿಸಿದ್ದಾನೆ. ಶಿವಭಕ್ತಿಯಿಲ್ಲದ ಪಾಂಡಿತ್ಯ ವ್ಯರ್ಥ. ಗಿಡ ಮರ ಬಳ್ಳಿ ಪ್ರಾಣಿಗಳ ಮಾತು ಇರಲಿ, ಬೇಟೆಯಲ್ಲಿ ಪ್ರಾಣಿಗಳನ್ನು ಕೊಲ್ಲುವ ಚಂಡಾಲರ ದೃಷ್ಟಿ ಬಿದ್ದರೂ ಅವನ ಅಡುಗೆ ಅಪವಿತ್ರವಾಗುವುದಿಲ್ಲ; ಬ್ರಾಹ್ಮಣರ ದೃಷ್ಟಿ ಬಿದ್ದರೆ ಮಾತ್ರ ಅಪವಿತ್ರವಾಗುತ್ತದೆ. ಗಗನದಲ್ಲಿ ಹಾರುವ ಸಾಮರ್ಥ್ಯವೂ ಸಾಂಕೇತಿಕವೇ : ಉಳಿದೆಲ್ಲ ಜನ ನೆಲಕ್ಕೆ ಅಂಟಿದವರು, ಬ್ರಾಹ್ಮಣರು ಮಾತ್ರ ಸದಾ ಮೇಲಿರುವವರು, ಎಲ್ಲದರಲ್ಲಿಯೂ. ಆ ಅಹಂಕಾರಕ್ಕೆ ಮದ್ದು ಅದನ್ನು ಮೀರಿಸುವಂತಹ ತಿರಸ್ಕಾರವೊಂದೇ. ಕೊನೆಗೆ ಶಿವಭಕ್ತನಾಗಿ ಪರಿವರ್ತನೆ ಹೊಂದಿದ ಸಾಮವೇದಿಯ ಪಿತೃದಿನವನ್ನು ಹೊಲೆಯನೊಬ್ಬನಿಂದ ಹರಿಹರ ಮಾಡಿಸುತ್ತಾನೆ. ಬ್ರಾಹ್ಮಣ್ಯದ ಶ್ರೇಷ್ಠತೆಯನ್ನು ಒಡೆದಿರುವ ವಿಧಾನ ಇದು.

'ಶ್ವಪಚ' ಮಾತಿಗೆ ನಾಯಿಯ ಮಾಂಸವನ್ನು ಅಡುಗೆ ಮಾಡುವವನು ಎಂದರ್ಥ. ಹರಿಹರನಿಗಿಂತ ಹಿಂದೆ ಶ್ವಪಚಯ್ಯನ ಕತೆ ಬಸವಣ್ಣನಲ್ಲಿ[11] ಬಂದಿತ್ತು. ಈ ಕತೆ ಚನ್ನಬಸವಣ್ಣ,[12] ಅಂಬಿಗರ ಚೌಡಯ್ಯನಿಗೂ ತಿಳಿದಿತ್ತು.[13] ಅವರಿಗಿಂತ ಎಷ್ಟು ಪ್ರಾಚೀನ ಈ ಕತೆ ತಿಳಿಯದು.

ಕ್ರಿ.ಶ. 980ರ ಬೆಳಗಾವಿ ಜಿಲ್ಲೆ ಸವದತ್ತಿ ತಾಲೂಕಿನ ಸೊಗಲ ಶಾಸನದ ಫಲಶ್ರುತಿಯಲ್ಲಿ ಎರಡು ಕಂದಪದ್ಯಗಳಿವೆ :

---

11. "ಹಿರಿಯಯ್ಯ ಶ್ವಪಚಯ್ಯ"; "ದೇವ ಶ್ವಪಚನ ಮೆಱೆದಡೆ ಜಾತಿ ಭೇದವ ಮಾಡಲಮ್ಮವು"; "ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ ಭಕ್ತಿಯ ಸದ್ಗುಣವ ನಾನಱಿವೆ ನಯ್ಯಾ", "ನೆಱೆ ನಂಬೋ ನೆಱೆ ನಂಬೋ ಧರಧುರವಿಲ್ಲದೆ ಸಾಮವೇದಿಗಳಂತೆ." (–ಬಸವಣ್ಣನವರ ಷಟ್‌ಸ್ಥಲದ ವಚನಗಳು, ವಚನ 350, 81, 342, 149). "ಪಾಕವ ಮಾಡುವ ಭಾಂಡ ಸೊಣಗನ ಡವಿಗೆಯಯ್ಯ, ಕೆರಹಿನಲ್ಲಿ ಮುಚ್ಚುವುದು ಆವ ಆಗಮವಯ್ಯಾ" (ಅದೇ, ವಚನ 602). ಇಲ್ಲೂ ಶ್ವಪಚಯ್ಯನ ಕತೆಯ ಸೂಚನೆ ಇದೆ.

12. "ಚನ್ನಯ್ಯನ ಕೈಯಲ್ಲಿ ಹಾಗವ ಕೊಟ್ಟು ಕಂಕಣವ ಕೈಯ ಕಂಡು ಧನ್ಯರಾಗಿರೆ ನೀವು. ಮಾತಂಗಿಯ ಮಕ್ಕಳೆಂದು ಗಗನದಲ್ಲಿ ಸ್ನಾನವನೆ ಮಾಡಿ ಆಕಾಶದಲ್ಲಿ ಧೋತ್ರವ ಹರಡಿ ಹೋಗಲಾಗಿ ನಮ್ಮ ಶ್ವಪಚಯ್ಯಂಗಳ ಕೈಯಲ್ಲಿ ಉಪದೇಶವ ಪಡೆದು ಒಕ್ಕುದ ಕೊಂಡು ಧನ್ಯರಾಗರೆ ಸಾಮವೇದಿಗಳಂದು..." – ಚನ್ನಬಸವಣ್ಣನವರ ವಚನಗಳು, ವಚನ 508.

13. "ಸಾಮವೇದಿ ಹೋಗುತ್ತಿರಲು ಶ್ವಪಚಯ್ಯಗಳು ತಮ್ಮ ಪಾದುಕದಿಂದ ಪಾಕವ ಮುಚ್ಚಿದರು" – ಅಂಬಿಗರ ಚೌಡಯ್ಯನ ವಚನಗಳು, ವಚನ 140.

**ಮೇಳಿಸಿ ನಾಯಡಗಂ ಚಾಂ**
**ಡಾಳೆ ಕಪಾಳದೊಳೆ ಕಳ್ಳನೆಱಿದಡುತುಂ ತ**
**ತ್ಕಾಳದೆ ಕೆರ್ಪಿಂ ಮುಚ್ಚಿ ಸ**
**ಮಾಳೋಕದೊಳಿಂದ್ರನಾಕೆಯಂ ಬೆಸಗೊಂಡಂ ॥**

**ದೇವಸ್ವಂ ಬ್ರಹ್ಮಸ್ವಮ**
**ನಾವು...ನ್ದ ಪಾತಕನ ಪಾದರಜದಿಂ**
**ಭಾವಿಸಲಭೋಜ್ಯಮೆನಲಾ**
**ದೇವಸ್ವಮನಳಿವನಿಂ ನಿಕೃಷ್ಟರುದೊಳರೇ ॥**[14]

ಇವುಗಳಿಗೆ ಬಹುಶಃ ಮೂಲ –

**ಇಂದ್ರಃ ಪೃಚ್ಛತಿ ಚಾಂಡಾಲೀ ಕಿಮಿದಂ ಪಚ್ಯತೇ ತ್ವಯಾ**
**ಶ್ವಮಾಂಸಂ ಸುರಯಾ ಸಿಕ್ತಂ ಕಪಾಲೇನ ಚಿತಾಗ್ನಿನಾ**
**ದೇವಬ್ರಾಹ್ಮಣವಿತ್ತಾನಾಂ ಬಲಾದಪಹರಂತಿ ಯೇ**
**ತೇಷಾಂ ಪಾದರಜೋ ಭೀತ್ಯಾ ಚರ್ಮಣಾ ಪಿಹಿತಂ ಮಯಾ ॥**

ಎಂಬ ದಕ್ಷಿಣ ಕನ್ನಡ ಜಿಲ್ಲೆಯ ಕೊಲ್ಲೂರಿನ ಕ್ರಿ.ಶ. 1481ರ ಶಾಸನದಲ್ಲಿ ಕಾಣಿಸಿಕೊಳ್ಳುವ ಸಂಸ್ಕೃತ ಶ್ಲೋಕಗಳು (ಇವು ವಾಸ್ತವವಾಗಿ ಇನ್ನೂ ಪ್ರಾಚೀನವೆಂಬುದು ಖಚಿತ). ಇಂದ್ರನು ಹೊಲತಿಯೊಬ್ಬಳನ್ನು "ನಾಯಮಾಂಸವನ್ನು ತಲೆಯೋಡಿನಲ್ಲಿ ಹಾಕಿ ಹೆಂಡ ಸುರಿದು ಹೆಣದ ಬೆಂಕಿಯ ಮೇಲೆ ಬೇಯಿಸುತ್ತ ಕಾಲ ಕೆರದಿಂದ ಏಕೆ ಮುಚ್ಚಿದ್ದೀಯೆ" ಎಂದು ಕೇಳಿದ್ದಕ್ಕೆ ಬ್ರಾಹ್ಮಣರ ಸ್ವತ್ತನ್ನು ಅಪಹರಿಸುವ ಪಾಪಿಗಳ ಕಾಲಧೂಳಿ ಬಿದ್ದು ಮಾಂಸ ಅಭೋಜ್ಯವಾದೀತೆಂದು ಹೆದರಿ ಮುಚ್ಚಿದುದಾಗಿ ಹೊಲತಿ ಉತ್ತರಿಸುತ್ತಾಳೆ.

ಈ ಶ್ಲೋಕಗಳ ಉದ್ದೇಶ ಬ್ರಾಹ್ಮಣನನ್ನು ವೈಭವೀಕರಿಸುವುದು, ಅವನ ಶ್ರೇಷ್ಠತೆಯನ್ನು ಕೊಂಡಾಡಿ ಅವನಿಗೆ ಕೊಟ್ಟ ದಾನವು ಕಿತ್ತುಕೊಳ್ಳತಕ್ಕದ್ದಲ್ಲವೆಂದು ಪ್ರತಿಪಾದಿಸುವುದು. ಹರಿಹರನ ಕತೆಯ ಉದ್ದೇಶ ಬ್ರಾಹ್ಮಣನನ್ನು ಕೆಳಗಿಳಿಸಿ ಹೊಲೆಯನ್ನು ಮೇಲೇರಿಸುವುದರ ಮೂಲಕ ಭಕ್ತಿಯ ಶ್ರೇಷ್ಠತೆಯನ್ನು ಸ್ಥಾಪಿಸುವುದು. ಹೀಗೆ ಪರಸ್ಪರ ತೀರ ವಿರುದ್ಧ ಉದ್ದೇಶಗಳನ್ನು ಹೊಂದಿರುವ ಎರಡು ಪ್ರಸಂಗಗಳೂ ಕೆಲವು ಸಮಾನ ಆಶಯಗಳನ್ನು (motifs) ಹೊಂದಿವೆ. ಇವು ಹೀಗಿವೆ:

1. ಹೆಂಡ, ಮನುಷ್ಯನ ತಲೆ ಬರುಡೆ, ನಾಯಿ ಮಾಂಸ, ಚಿತೆ, ಕೆರ, ಹೊಲೆಯ ಅಥವಾ ಹೊಲತಿ – ಇವುಗಳ ದೊತ್ತ (ಇವೆಲ್ಲ ಕೆಟ್ಟ ವಸ್ತುಗಳು)

---

14. ಶಾಸನ ಸಾಹಿತ್ಯ ಸಂಚಯ. ಸಂ: ಎ.ಎಂ. ಅಣ್ಣಿಗೇರಿ ಮತ್ತು ಮೇವುಂಡಿ ಮಲ್ಲಾರಿ. ಧಾರವಾಡ. 1961. ಪು. 23.

2. ಬ್ರಾಹ್ಮಣನ ಸ್ವತ್ತು ಕಿತ್ತುಕೊಳ್ಳತಕ್ಕದ್ದಲ್ಲ

3. ಭಕ್ತ ಹೊಲೆಯನು ಭವಿ ಬ್ರಾಹ್ಮಣನಿಗಿಂತ ಶ್ರೇಷ್ಠ

ಇವುಗಳಲ್ಲಿ (1) (2) ಸೇರಿ ಇಂದ್ರ ಹೊಲತಿಯರ ಸಂವಾದ ಸೃಷ್ಟಿಯಾದರೆ, (1) (3) ಸೇರಿ ಶ್ವಪಚಯ್ಯನ ಕತೆ ಹುಟ್ಟಿತು.[15] ಹೊಲೆಯನು ಬ್ರಾಹ್ಮಣನನ್ನು ಮೈಲಿಗೆಯಾಗಿ ಕಾಣುತ್ತಾನೆ (ಅಥವಾ ಬ್ರಾಹ್ಮಣನಿಗೆ ಹೊಲೆಯನ ಮನೆಯ ನೀರೂ ಬೆಂಕಿಯೂ ಪವಿತ್ರ) ಎಂಬ ನಂಬಿಕೆಯೂ ಶ್ವಪಚಯ್ಯನ ಕತೆಯ ನಿರ್ಮಾಣದಲ್ಲಿ ಪಾತ್ರ ವಹಿಸಿರಬಹುದು. ಯಾರಾದರೂ ನಿಜವಲ್ಲವೆಂದು ತೋರಿಸುವವರೆಗೆ, ಶ್ವಪಚಯ್ಯನ ಕತೆ ಕರ್ನಾಟಕದಲ್ಲಿ ಹುಟ್ಟಿದುದೆಂದು ನಾನು ನಂಬಿದ್ದೇನೆ.[16] ವಚನಕಾರರೂ ಹರಿಹರನೂ ಅದನ್ನು ತಮ್ಮ ಉದ್ದೇಶಕ್ಕೆ ಬಳಸಿಕೊಂಡರು.

## ತಿರುನಾಳ್ವೋವರನ ಕತೆ

ಹರಿಹರನಲ್ಲಿ ಬರುವ ಹೊಲೆಯ ತಿರುನಾಳ್ವೋವರನ ಕತೆ ತೀರ ಸರಳ ವಾದುದು. ಇಲ್ಲಿ ಬ್ರಾಹ್ಮಣ ಬಂದರೂ ಅವನು ಭಕ್ತನಿಗೆ ವಿರೋಧವಾಗಿಯೂ ಇಲ್ಲ, ಸಹಾಯಕನಾಗಿಯೂ ಇಲ್ಲ. ಆದರೆ ಅವನು ಹೊಲೆಯನಿಂದ ಬಿಟ್ಟಿ ಕೆಲಸಮಾಡಿಸಿ ಕೊಳ್ಳುವ ಪ್ರಭು. ತಿರುನಾಳ್ವೋವರ ಜಾತಿಯಲ್ಲಿ ಕಿರಿಯ, ಮನಸ್ಸಿನಲ್ಲಿ ಹಿರಿಯ ("ಕುಲದೊಳ್ ಕಿರಿಯಂ, ಮನಮೊಳ್ ಪಿರಿಯಂ"). ಬ್ರಾಹ್ಮಣನಲ್ಲಿ ಬಿಟ್ಟಿ ಕೆಲಸ ಮಾಡುತ್ತಿದ್ದ–ಹೊಲೆಯರ ಜಾತಿಯ ಕರ್ತವ್ಯ ಬಿಟ್ಟಿ ಕೆಲಸ ಮಾಡುವುದೆಂಬುದನ್ನು ಹಿಂದೆ ನೋಡಿದ್ದೇವೆ–ಅವನು ಪೊನ್ನಾಂಬಲದ (ಚಿದಂಬರದ) 'ತಿರುನಾಳ್' ಉತ್ಸವ ನೋಡುವ ಕನಸನ್ನು ಬಹುಕಾಲ ಹೊತ್ತಿದ್ದು ಹನ್ನೆರಡು ವರ್ಷಗಳ ಬಳಿಕ ಬ್ರಾಹ್ಮಣನ ಅಪ್ಪಣೆ ಪಡೆದು ತನ್ನ ಜೊತೆಯವರೊಡನೆ ಮೂಡೆಗಳನ್ನು ಹೊತ್ತು ಚಿದಂಬರಕ್ಕೆ ಬಂದು ನಟರಾಜನ ಉತ್ಸವವನ್ನು ನೋಡಿ ತಣಿದ. ಚಿದಂಬರದ ದೇವಾಲಯದ ಮೂಡಣ ಬಾಗಲಲ್ಲಿ ಹೊರಗೆ ಸೇರಿದ್ದ ಇತರ ಹೊಲೆಯರ ("ಪಿರಿಯರ್ಗಂ ಪಿರಿಯರ್") ಜೊತೆ ಸೇರಿ ತಾನೂ ಆನಂದದಿಂದ ಕುಣಿದ. ಅವನ ಭಕ್ತಿಗೆ ಸೋತು ಶಿವ ಅವನನ್ನು ಕರೆತರಲು ತನ್ನ ಪೂಜಾರಿಯನ್ನು ಕಳಿಸಿದ. ಅವನು ಬಂದು ಮುಟ್ಟಿದಾಗ ತಿರುನಾಳ್ವೋವರ್ ಹೆದರಿದ. ನಂದೀಶನೇ ಬಂದು ಅವನನ್ನು ಅಪ್ಪಿಕೊಂಡು ಬೆಂಕಿಯ ಕೊಂಡದಲ್ಲಿ ಮುಳುಗಿಸಿದಾಗ ಆ ಕರಿಬಣ್ಣದ ಹೊಲೆಯ ಶಿವಭಕ್ತನಿಗೆ ಹೊಂಬಣ್ಣದ ದಿವ್ಯ ಶರೀರ ಬಂದಿತು. ಮೋಕ್ಷವೂ ಲಭಿಸಿತು.[17]

---

15. ವಿವರಗಳಿಗೆ ನೋಡಿ – ಎಂ. ಚಿದಾನಂದಮೂರ್ತಿ: 'ಶ್ವಪಚಯ್ಯನ ಕತೆಯ ಆಶಯ.' ಅಂಕಣ. ಮಾರ್ಚ್, 1981.

16. ಈ ಕತೆ ಸಂಸ್ಕೃತದಲ್ಲಿ ಪ್ರಸಿದ್ಧವಾಗಿಲ್ಲವೆಂಬುದನ್ನು ಖಚಿತಪಡಿಸಿಕೊಂಡಿದ್ದೇನೆ.

17. ತಿರುನಾಳ್ವೋವರ ಮಹಾತ್ಮೆ. ಹರಿಹರನ ರಗಳೆಗಳು, ಪು. 103.

ಅಸ್ಪೃಶ್ಯ ಭಕ್ತನೊಬ್ಬ ಬಿಟ್ಟಿಯಾಳಾಗಿ ಬ್ರಾಹ್ಮಣನ ಬಳಿ ದುಡಿಯುತ್ತಿದ್ದು ಪೊನ್ನಾಂಬಲದ ನಟರಾಜನನ್ನು ನೋಡುವ ಏಕೈಕ ಚಿನ್ನದ ಕನಸೊಂದನ್ನು ಪೋಷಿಸಿ ಕೊಂಡು ಬಂದ ರೀತಿ, ಅದು ನೇರವೇರಿದಾಗ ನಟರಾಜನ ಊರಲ್ಲಿ ಮೂಡೆ (=ಬಟ್ಟೆ ಗಂಟು) ಹೊತ್ತುಕೊಂಡೇ ಕುಣಿದ ಬಗೆ ಇವನ್ನು ಹರಿಹರ ಸುಂದರವಾಗಿ ಚಿತ್ರಿಸಿದ್ದಾನೆ. ಹೊಲೆಯನ ಮುಗ್ಧ ಭಕ್ತಿ ಶಿವನನ್ನು ಎಳೆದುಕೊಂಡು ಬಂದಿತು, ದೇವಾಲಯವನ್ನು ಪ್ರವೇಶಿಸಲೂ ಅನರ್ಹನಾದ ಅವನು ನಂದೀಶನ ಅಪ್ಪುಗೆಗೆ ಪಾತ್ರನಾದ, ಕರಿಯ ಬಣ್ಣದವನು ಹೊಂಬಣ್ಣದವನಾದ. ಭಕ್ತಿ ಮತ್ತು ಶಿವಕೃಪೆಗಳಿಂದ ಹೊಲೆಯ ಪೂಜ್ಯನಾಗುತ್ತಾನೆ ಎಂಬುದನ್ನು ಇದಕ್ಕಿಂತ ಸೂಚ್ಯವಾಗಿ ಹೇಳಲು ಸಾಧ್ಯವಿಲ್ಲ.

## ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ

ರಾಘವಾಂಕನು (ಸು.ಕ್ರಿ.ಶ.1220) ಹರಿಶ್ಚಂದ್ರ ಕಾವ್ಯದ ಕತೆಯಲ್ಲಿ ಅಸ್ಪೃಶ್ಯತೆಯ ಸಮಸ್ಯೆಯನ್ನು ಚಿತ್ರಿಸಿರುವುದಲ್ಲದೆ ಹೊಲೆಯರ ಬದುಕಿನ ಕೆಲವು ವಿವರಗಳನ್ನೂ ಮಿಂಚಿಸಿದ್ದಾನೆ. ಇಲ್ಲಿ ಬರುವ ಹೊಲತಿಯರಾಗಲಿ ಹೊಲೆಯರಾಗಲಿ ಯಾರೂ ಶಿವಭಕ್ತರಲ್ಲ (ಶಿವಭಕ್ತ ಹರಿಶ್ಚಂದ್ರ ಮಾತ್ರ ಕೆಲ ಕಾಲ ಹೊಲೆಯರ ವೇಷದಲ್ಲಿದ್ದು ಹೊಲೆಯರ ವೃತ್ತಿಯನ್ನು ಕೈಗೊಳ್ಳುತ್ತಾನೆ).

ರಾಘವಾಂಕನಲ್ಲಿ ಬರುವ ಹೊಲತಿಯರ ಪ್ರಸಂಗ ದೇವೀಭಾಗವತ, ಮಾರ್ಕಂಡೇಯ ಪುರಾಣಗಳಲ್ಲಿ ಇಲ್ಲ. ಬಹುಶಃ ಅದು ಅವನದೇ ಸೃಷ್ಟಿ.[18] ರಾಘವಾಂಕನಲ್ಲಿ ಹೊಲತಿಯರು ಕೋಪಿಸಿಕೊಂಡು ಉರಿಯುತ್ತಿದ್ದ ವಿಶ್ವಾಮಿತ್ರನ ಹೂಂಕಾರದಲ್ಲಿ ಹುಟ್ಟುತ್ತಾರೆ. ಹೊಲೆಯರು ಪಾಪದ, ತಾಮಸ ಕರ್ಮದ, ಕ್ರೂರ ಪ್ರವೃತ್ತಿಯ ಫಲ ಎಂಬ ಸಾಂಪ್ರದಾಯಕ ದೃಷ್ಟಿ[19] ಕವಿಯದು. ಅವರಿಗೂ ಹರಿಶ್ಚಂದ್ರನಿಗೂ ನಡೆದ ಸಂವಾದದಲ್ಲಿ ಇದು ಎದ್ದು ಕಾಣುತ್ತದೆ. ಅವರ ಸಂಗವನ್ನು ಪಡೆದವರೆಲ್ಲರ ಕುಲ ಹಾಳಾಗಿ ಹೋಗುತ್ತದೆ ಎನ್ನುತ್ತಾನೆ ಕವಿ[20] ("ಅವಗುಣಗಳ ಸಂಗದಿಂ ಕುಲಂ ಹಸಗೆಟ್ಟ ಅನಾಮಿಕೆಯರಾದರಲ್ಲದೆ ಸಂಗವಾರ ಕುಲಮಂ ಕೆಡಿಸದು"). ಅವರನ್ನು ವರಿಸಲು ಅವರ ಕುಲ ಅಡ್ಡಿ ಎಂದು ಹರಿಶ್ಚಂದ್ರನೆಂದರೆ "ಎಮ್ಮ ರೂಪು ಜವ್ವನವಿರಲು ಕುಲದ ಮಾತೇಕೆ" ಎನ್ನುತ್ತಾರೆ ಅವರು. ಹರಿಶ್ಚಂದ್ರನ ದೃಷ್ಟಿಯಲ್ಲಿ ಅವರು ತಿಳಿಗೊಂಡ ಬಚ್ಚಲ ನೀರು; ನೋಡಲು ಶುದ್ಧ, ಆದರೆ ಸ್ನಾನಕ್ಕೆ

18. ಹರಿಶ್ಚಂದ್ರ ಕಾವ್ಯಂ. ಸಂ: ಎನ್. ಬಸವಾರಾಧ್ಯ ಮತ್ತು ಎಸ್. ಬಸಪ್ಪ. ಮೈಸೂರು, 1975. ಪೀಠಿಕೆ, ಪು. 25.

19. ಅದೇ, 7.2 – "ಮುನಿಗೆ ಹೊಲೆ ಯಾವುದತಿ ಕೋಪ ಬದ್ಧದ್ವೇಷವನಿಮಿತ್ತ ವೈರವದಱಿಂದ ಹುಟ್ಟಿದರಾಗಿ । ವನಿತೆಯರು ಕಡೆಗೆ ಹೊಲತಿಯರಾಗಿ ಕೆಲಸಾರಿ ನಿಂದು ಬೆಸನಾವುದೆನಲು..."

20. ಅದೇ, 7.3.

ಅಯೋಗ್ಯ.[21] ಏನಾದರೂ ಸರಿಯೇ, ಉತ್ತಮ ಕುಲಜರು ಹೊಲತಿಯನ್ನು ನೋಡುವುದಾಗಲಿ ನುಡಿಸುವುದಾಗಲಿ ಮನ್ನಿಸುವುದಾಗಲಿ ಅವರಿಗೆ ಬಹುಮಾನ ಕೊಡುವುದಾಗಲಿ ಅನುಚಿತವಾದುದು.[22] ಶಾಪದಿಂದ ನಮಗೆ ಬಂದ ಕೆಟ್ಟ ಕುಲವು ನಿನ್ನ ಸಂಗದಿಂದ ಪರಿಹಾರವಾಗುತ್ತದೆ ಎಂದು ಹೊಲತಿಯರು ಹೇಳಿದರೆ, ಅದರಿಂದ ತನ್ನ ಕುಲ ಹಾಳಾಗುತ್ತದೆಯೆಂದು ಹರಿಶ್ಚಂದ್ರನ ಪ್ರತಿಕ್ರಿಯೆ. ಅವರ ಸಂಗ ತನ್ನನ್ನು ನರಕಕ್ಕೆ ತಳ್ಳುವುದೆಂಬ ಭಯ ಅವನಿಗೆ ("ಹೊಲೆಯರ ಸಂಗಮಂ ಮಾಡಿ ನಿಷ್ಕಾರಣಂ ಘೋರ ನರಕಾಳಿಯೊಳು ಬಿದ್ದು ಹೊರಳುವವನಲ್ಲ").[23] ತಮಾಷೆ ಯೆಂದರೆ, ವಸಿಷ್ಠನ ಶಾಪದಿಂದ ಜಾತಿಭ್ರಷ್ಟನಾಗಿ ರಾಜ್ಯಭ್ರಷ್ಟನಾಗಿ ಚಂಡಾಲನಾದ ತ್ರಿಶಂಕುವೇ ಹರಿಶ್ಚಂದ್ರನ ತಂದೆ. ಅವನನ್ನು ಉದ್ಧರಿಸಿದವನು ವಿಶ್ವಾಮಿತ್ರ. ವಿಶ್ವಾಮಿತ್ರನ ಹೂಂಕಾರ ಸೃಷ್ಟಿ ಹೊಲತಿಯರು. ಚಂಡಾಲನ ಮಗನು ಚಾಂಡಾಲಿಯ ರನ್ನು ಚಾಂಡಾಲಿಯರೆಂದು ನಿಂದಿಸುತ್ತಿದ್ದಾನೆ. ಇದನ್ನು ವಿಶ್ವಾಮಿತ್ರ ಆಡಿ ತೋರಿಸಿಯೇ ಬಿಡುತ್ತಾನೆ.[24]

ದೇವೀಭಾಗವತದಲ್ಲಿ ಹರಿಶ್ಚಂದ್ರ ತಾನು ನೇರವಾಗಿ ಹೊಲೆಯ ವೀರಬಾಹು ವಿಗೆ ಅಳಾಗದೆ ವಿಶ್ವಾಮಿತ್ರನಿಗೆ ಅಳಾಗುತ್ತಾನೆ; ವಿಶ್ವಾಮಿತ್ರ ಅವನನ್ನು ವೀರಬಾಹುವಿಗೆ ಮಾರುತ್ತಾನೆ.[25] ಕ್ಷತ್ರಿಯನು ಬ್ರಾಹ್ಮಣನಿಗೆ ಅಧೀನನಾದ್ದರಿಂದ ಬ್ರಾಹ್ಮಣ ತನಗೆ ಇಷ್ಟ ಬಂದವರಿಗೆ ಅವನನ್ನು ಮಾರಬಹುದು. ಕ್ಷತ್ರಿಯನೇ ನೇರವಾಗಿ ಹೊಲೆಯನಿಗೆ ಆಳಾಗುವುದು ವರ್ಣಪದ್ಧತಿಗೆ ವಿರುದ್ಧ–ಇದು ದೇವೀ ಭಾಗವತದ ನಿಲುವು. ಹರಿಶ್ಚಂದ್ರ ಕಾವ್ಯದಲ್ಲಿ ಹರಿಶ್ಚಂದ್ರನೇ ನೇರವಾಗಿ ವೀರಬಾಹುವಿಗೆ ಆಳಾಗುತ್ತಾನೆ. ವೀರಬಾಹು ತಾನು ಕೊಳ್ಳಲು ಸಿದ್ಧ ಎಂದಾಗ, ಜಾತಿಗಳಲ್ಲಿ ಕೊನೆಯವನಾದ

---

21. ಅದೇ, 7.18 – "ಅಕ್ಕಕ್ಕು ಬಚ್ಚಲುದಕಂ ತಿಳದಡಾರ ಮೀಹಕ್ಕೆ ಯೋಗ್ಯಂ... ಮಿಕ್ಕ ಹೊಲತಿಯರು ನೀವೆನೆ ನಿಮ್ಮ ಜವ್ವನದ ಸೊಕ್ಕು ರೂಪಿನ ಗಾಡಿ ಜಾಣತನದೊಪ್ಪ ವೇತಕ್ಕೆ ಯೋಗ್ಯಂ, ರಮಿಸಿದವರುಂಟೆ ಶಿವಶಿವೀ ಮಾತು ತಾ ಹೊಲೆಯೆಂದನು."

22. ಅದೇ, 7.21 – "ಏಗೆಯ್ದಡಂ ಕುಲಜರಧಮಸತಿಯರ ನೋಡಲಾಗದು, ನುಡಿಸ ಲಾಗದು, ಮನ್ನಿಸಲಾಗದು... ಕರೆದು ಕೊಡಲಾಗದು."

23. ಅದೇ. 8.25 – ಹೊಲತಿಯರನ್ನು ಕೈಯಾರೆ ಹೊಡೆದದ್ದರಿಂದ ಹರಿಶ್ಚಂದ್ರ ಸಚೇಲ ಸ್ನಾನವನ್ನು ಮಾಡಿದನೆಂದು ಈಚೆಗೆ ಕಲ್ಪಿಸಿ ಯಾರೋ ಒಂದು ಪದ್ಯವನ್ನು ಸೇರಿಸಿದ್ದಾರೆ (ಅದೇ, ಪರಿಶಿಷ್ಟ, ಪುಟ 217).

24. ಅದೇ, 8.39 – "ಮುಳಿದು ವಾಶಿಷ್ಠಮುನಿ ಕೊಟ್ಟ ಶಾಪದೊಳು ಕುಲವಳಿದು ರಾಜ್ಯ ಭ್ರಷ್ಟನಾಗಿ ಚಾಂಡಾಲತ್ವವಳವಟ್ಟ ನಿಮ್ಮಯ್ಯನೆನಿಸಿದ ತ್ರಿಶಂಕುವನು ನಾನಲ್ಲದುದ್ಧರಿಸಿದ ಬಲವಂತರಾರು."

25. ಅದೇ, ಪೀಠಿಕೆ, 25.6.

ಹೊಲೆಯ 'ಮೇರೆದಪ್ಪಿ' ತನ್ನನ್ನು ದಾಸನಾಗು ಎನ್ನುವುದು 'ಕಾಲಗುಣ'ವೋ ತನ್ನ ಕರ್ಮಫಲವೋ ಎನ್ನುತ್ತಾನೆ ಹರಿಶ್ಚಂದ್ರ. ಹೊಲೆಯರು ತಮ್ಮ ಮೇರೆ ಮೀರುವುದು ಹರಿಶ್ಚಂದ್ರನಿಗೂ ಸಮ್ಮತಿಯಿಲ್ಲ. ಕೆಟ್ಟುದಾದ ಸುಳ್ಳನ್ನು ಹೊರುವವನೇ ಹೊಲೆಯ ಎಂಬ ಮಾತನ್ನು ರಾಘವಾಂಕ ಅಡಿಸುತ್ತಾನೆ, ವೀರಬಾಹುವಿನ ಬಾಯಲ್ಲಿ; "ಅತಿ ಹುಸಿವ ಯತಿ ಹೊಲೆಯ ಹುಸಿಯದಿಹ ಹೊಲೆಯನುನ್ನತ ಯತಿವರನು" ಎಂಬ ಮಾತನ್ನು ಶಿವನ ಬಾಯಲ್ಲಿ[26] ಕವಿ ಆಡಿಸುತ್ತಾನೆ. ಆದರೂ ರಾಘವಾಂಕನದು ಕೇವಲ ತೋರಿಕೆಯ ಉದಾರ ಧೋರಣೆ ಮಾತ್ರ, ಮೇಲಿನಂತಹ ಮಾತುಗಳು ಕೇವಲ ಔಪಚಾರಿಕವೆನ್ನಿಸುತ್ತವೆ. ಭಕ್ತನೂ ಭಾವುಕನೂ ಆದ ಹರಿಹರ ಅಸ್ಪೃಶ್ಯರನ್ನು ತನ್ನ ಎರಡೂ ಕೈಗಳಲ್ಲಿ ಬಾಚಿ ತಬ್ಬಿಕೊಂಡಿದ್ದಾನೆ; ಬುದ್ಧಿಜೀವಿಯಾದ ರಾಘವಾಂಕ ಅವರನ್ನು ದೂರವೇ ನಿಲ್ಲಿಸಿದ್ದಾನೆ. ರಾಘವಾಂಕ ಅಂತರಂಗದಲ್ಲಿ ವರ್ಣವ್ಯವಸ್ಥೆಯ ಪೋಷಕನಾಗಿ ಕಾಣಿಸುತ್ತಾನೆ.[27]

## ಬಸವಪುರಾಣದಲ್ಲಿ

ಹದಿಮೂರನೇ ಶತಮಾನದ ತೆಲುಗು ಕವಿ ಪಾಲ್ಕುರಿಕೆ ಸೋಮನ ತೆಲುಗು ಬಸವಪುರಾಣದ ಭಾವಾನುವಾದವಾದ ಭೀಮಕವಿಯ (ಕ್ರಿ.ಶ. 1359) ಕನ್ನಡ ಬಸವಪುರಾಣದಲ್ಲಿ ಹಲವು ಅಸ್ಪೃಶ್ಯ ಶಿವಭಕ್ತರ ಕಥೆಗಳಿವೆ. ಶ್ವಪಚಯ್ಯ ತನ್ನನ್ನು ನೋಡಿ ಪಾತ್ರೆಯನ್ನು ಕೆರದಿಂದ ಮುಚ್ಚಿದುದನ್ನು ನೋಡಿದ ಸಾಮವೇದಿ ಶ್ವಪಚಯ್ಯನನ್ನು ನಿಂದಿಸಿಮೊಡನೆ ಅವನ ಗಗನಸಾಮರ್ಥ್ಯವೇ ಉಡುಗಿತೆಂದು ಭೀಮಕವಿಯ ನಿರೂಪಣೆ.[28] (ಹರಿಹರನಲ್ಲಿ ಅವನು ಆಕಾಶದಿಂದ ತಾನಾಗಿ ಇಳಿದು ಬರುತ್ತಾನೆ.) ಬಿಬ್ಬಿ ಬಾಚಯ್ಯ ಎಂಬಾತ ಗೊಬ್ಬೂರಿನ ಶಿವಭಕ್ತ. ಊರಿನ ಹೊಲೆಯರ ಮನೆಯ ಹಬ್ಬಕ್ಕೆ ಹೋಗಿ, ಅಲ್ಲಿಂದ ಆ ಹೊಲೆಯ ಭಕ್ತರ ಎಂಜಲನ್ನು ಹೆಡಗೆಯಲ್ಲಿ ತುಂಬಿ ಬಟ್ಟೆಯಿಂದ ಮುಚ್ಚಿ ಬಂಡಿದ ಮೇಲೆ ಹೇರಿಕೊಂಡು ಬರುತ್ತಾನೆ. "ಕುಲಹೀನರ ಅಧಮರ ಎಂಜಲನು" ತಂದುದಕ್ಕೆ ಬ್ರಾಹ್ಮಣರು ಆಕ್ಷೇಪಿಸಿದಾಗ, "ಇದು ಭಕ್ತರಿಗೆ ಪರಮಾಮೃತ, ಆಭಕ್ತರಿಗೆ ಲಯಾಗ್ನಿ" ಎಂದು ಹೇಳುತ್ತ, ತನ್ನ ಬಂಡಿಯತ್ತ ಧಾವಿಸಿದ ಬ್ರಾಹ್ಮಣರತ್ತ ಆ ಹೊಲೆಯರ ಎಂಜಲನ್ನು ಎಸೆಯುತ್ತಾನೆ. ಅದು ಬೆಂಕಿಯಾಗಿ ಊರನ್ನು ಸುಡುತ್ತದೆ.[29] ಹರಿಹರನಲ್ಲಿ ಬರುವ ನಾಗಿಮಯ್ಯನ ಕತೆ

---

26. ಅದೇ, 14.10.

27. ಹರಿಶ್ಚಂದ್ರ ಕಾವ್ಯದಲ್ಲಿ ಹೊಲೆಯರ ಬದುಕಿಗೆ ಸಂಬಂಧಿಸಿದ ವಿವರಗಳನ್ನು ಹಿಂದೆ ಆಗಲೇ ಸೂಕ್ತವಾದ ಜಾಗದಲ್ಲಿ ಬಳಸಿಕೊಳ್ಳಲಾಗಿದೆ.

28. ಬಸವಪುರಾಣ. ಧಾರವಾಡ, 1969. ಪು. 297.

29. ಅದೇ, ಪುಟ 293.

ಇಲ್ಲಿಯೂ ಬಂದಿದೆ. ಅಲ್ಲಿಯ ಸಂಬೋಳಿ ನಾಗಿದೇವ ಇಲ್ಲಿ ಶಿವನಾಗಮಯ್ಯ ನಾಗುತ್ತಾನೆ. ಬ್ರಾಹ್ಮಣರು ಬಿಜ್ಜಳನಿಗೆ ಬಸವನನ್ನು ಕುರಿತು, "ಹಿರಿಯ ಭಕ್ತರು ಎಂದು ಬಸವ ಹೊಲೆಯರ ಕಾಲಿಗೆ ಬೀಳುವುದಲ್ಲದೆ ಅವರ ಎಂಜಲನ್ನೂ ತಿನ್ನುತ್ತಿದ್ದಾನೆ.[30] ಇದರಿಂದ ಹೆಚ್ಚಿಕೊಂಡ ಶಿವನಾಗಿಮಯ್ಯ ನಮಗೆ ಹೆದರುತ್ತಿಲ್ಲ. ಊರಲ್ಲಿ ಸಂಬೋಳಿ ಎಂದು ಕೂಗ;[31] ಕಲ್ಯಾಣವೆಲ್ಲ ಮೈಲಿಗೆಯಾಗಿ ಹೋಯ್ತು. ರಾಷ್ಟ್ರದ ಪಾಪ ಮೊದಲು ರಾಜನನ್ನೂ ಬಳಿಕ ಪುರೋಹಿತರನ್ನೂ ತಟ್ಟುವುದು" ಎಂದು ತಮ್ಮ ಆಕ್ಷೇಪಗಳನ್ನು ಸಲ್ಲಿಸುತ್ತಾರೆ. ಬಿಜ್ಜಳನಿಗೂ ಬಸವನಿಗೂ ವರ್ಣದ ಬಗ್ಗೆ ಚರ್ಚೆ ನಡೆಯುತ್ತದೆ. "ಹದಿನೆಂಟು ವರ್ಣಗಳು ಬಹು ಹಿಂದೆಯೇ ಆದುವು. ಹೊಲೆ ಮಾಡಿ ಕುಲಸಂಕರಕ್ಕೆ ಕೈ ಹಾಕಿದರೆ ಕಲ್ಯಾಣ ಹಾಳಾಗಿ ಮಳೆ ಬೆಳೆಗಳು ಆಗುವುದಿಲ್ಲ" ಎನ್ನುತ್ತಾನೆ ಬಿಜ್ಜಳ. ಬಸವನ ಪ್ರಕಾರ, ಹದಿನೆಂಟು ಜಾತಿಗಳೆಂಬುವು ಸುಳ್ಳು : ವೇದೋಕ್ತ ಜಾತಿಗಳಿರುವುದು ಎರಡೇ : 'ವರ್ತಕ' (=ಭವಕರ್ಮ ಸಂಸ್ಕಾರ ಪ್ರವರ್ತಕ) ಮತ್ತು 'ವಿವರ್ತಕ' (=ಆದಿಶಿವಸಂಸ್ಕಾರವಾದಾತ). ಒಂದು ಭವಿ ಜಾತಿ, ಇನ್ನೊಂದು ಭಕ್ತ ಜಾತಿ. ಹಸುವನ್ನು ಉಬ್ಬಸಗೊಳಿಸಿ ಕೊಲ್ಲುವ ಬ್ರಾಹ್ಮಣನೇ ಹಸಿಯ ಹೊಲೆಯ, ನೇಣುಹೊಲೆಯನೆಂದು (ನೇಣು=ಜನಿವಾರ) ಬಸವ ನಿಂದಿಸುತ್ತಾನೆ. ಭೂಸುರರಾದ ಬ್ರಾಹ್ಮಣರನ್ನು ಕನಿಷ್ಠಕುಲದ ಹೊಲೆಯರಿಗೆ ("ಕನಿಷ್ಠ ಕುಲದ ಮನುಜರಿಗೆ") ಮುಟ್ಟಿಸಬಾರದು, ಏಕೆಂದರೆ ಹೊಲೆಯರೇ ಶ್ರೇಷ್ಠ. ಹೊಲೆಯ ನಾದರೂ ನಾಗಿಮಯ್ಯ ಶಿವನನ್ನು ಅರ್ಚಿಸಿ ಕುಲಜನಾಗಿದ್ದಾನೆ. ಕೆಸರಿನಿಂದ ಹುಟ್ಟಿದ ಕಮಲ, ಕಟ್ಟಿಗೆಯಿಂದ ಹುಟ್ಟಿದ ಬೆಂಕಿ ಎರಡೂ ಪೂಜ್ಯ. "ದುರ್ಜಾತಿ ವೇಷ"ದಿಂದ ಯೋಗ್ಯತೆ ಹಾಳಾಗದು ಎಂಬುದಕ್ಕೆ ಹಲವಾರು 'ಹಿರಿಯ ಭಕ್ತರ' ಕತೆಗಳನ್ನು ಹೇಳಿ, ಕೊನೆಗೆ ಶಿವನಾಗಮಯ್ಯನ ಕೈಯನ್ನು ಚಿವುಟಿ ಹಾಲು ಬರಿಸಿ ಹೊಲೆಯ ಭಕ್ತನ ಶ್ರೇಷ್ಠತೆಯನ್ನು ಸ್ಥಾಪಿಸಿದ.[32] ವರದಾನಿ ಗುಡ್ಡವ್ವೆ ಕಕ್ಕಯ್ಯನ ಮೊಮ್ಮಗಳೆಂದೂ ಮಾದಾರ ಧೂಳಯ್ಯನ ಮಗಳೆಂದೂ ಈಚಿನ ಒಂದು ಆಧಾರವಿಲ್ಲದ ಕತೆಯಿದೆ. ಆಕೆ, ಭೀಮಕವಿ ಪ್ರಕಾರ ನಾವದಿಗೆ ಎಂಬ ಊರಿನ 'ಹಿರಿಯ ಭಕ್ತೆ' (ಹೊಲತಿ ಶಿವಭಕ್ತೆ). ಅವಳ ತೊನ್ನು ರೋಗ ನೋಡಿದ ಬ್ರಾಹ್ಮಣ 'ದೊದಲೇ ಬಡ ಹೊಲತಿ, ತೊನ್ನು ಹಿಡಿದವಳು, ಊರೊಳಗೆ ಬರಬೇಡ' ಎಂದು ಬೈದುದರಿಂದ ಸೌರಾಷ್ಟ್ರಕ್ಕೆ

30. ಅದೇ, 55.4 – "ಹಿರಿಯ ಭಕ್ತರು ಹಿರಿಯ ಭಕ್ತರು ಹಿರಿಯ ಭಕ್ತರುರೆನುತ್ತವವರಂ ಹಿರಿದು ಮನ್ನಿಪನವರ ಕಾಲ್ಗಳ ಮೇಲೆ ಬೀಳುವನು, ಮರಳಿ ತಾನವರುಂಡು ಮಿಕ್ಕು ದನಿರಬೆ ಕೊಂಬನು ಕೈಯನಾಂತು. ಓಸರಿಸದೆ ಅನುದಿನವು ಅವರನೇ ಕೊಂಡಾ ಡುವಂ."

31. ಅದೇ. 55.5 – "ಭಕ್ತನು ಮದಿಸಿ ಪುರವೀಧಿಯಲ್ಲಿ ಬರುತಂ ಬೆದಱಿ, ಸಂಬೋಳಿ ಯೆನ್ನನು, ಎಮ್ಮುವನಿನಿತು ಬಗೆಗೊಳ್ಳ."

32. ಅದೇ, ಪು. 296.

ನಡೆದು, ಕಾಲಲ್ಲಿ ರಕ್ತ ಸೋರಿದರೂ ಸಹಿಸಿ ಸೋಮೇಶ್ವರನ ದರ್ಶನ ಮಾಡಿ ದಿವ್ಯಾಂಗವನ್ನು ಪಡೆದಳು. ಅವಳಿಗಾಗಿ ಸೌರಾಷ್ಟ್ರದ ಸೋಮೇಶ್ವರನು ನಾವದಿಗೆಯಲ್ಲಿ ನೆಲಸಿದ. ಅವಳನ್ನು ತೊನ್ನುರೋಗದವಳೆಂದು ಬೈದ ಬ್ರಾಹ್ಮಣನಿಗೆ ಕುಷ್ಟರೋಗ ಬಂದಿತು.[33] ಲಿಂಗಾಯತ ಚಳವಳಿಯ ಮುಖ್ಯ ಘಟನೆಯಾದ ಹರಳಯ್ಯ ಮಧುವಯ್ಯ ಪ್ರಸಂಗವನ್ನು ಭೀಮಕವಿ ಚಿತ್ರಿಸಿದ್ದಾನೆ. "ಉತ್ತಮಾಚಾರಬ್ರತನಿಯಮ ಚಿತ್ತರಾದ" ಅವರ ಬಗ್ಗೆ ಅವರಿವರ ಚಾಡಿ ಕೇಳಿ ಬಿಜ್ಜಳ ಅವರ ಕಣ್ಣು ಕೀಳಿಸಿದಾಗ, ಅದೇ ಬಿಜ್ಜಳನಿಗೆ ವಿಪತ್ತಾಯಿತು.[34] ಕೆರಳಿದ ಶರಣರು ಅವನನ್ನು ಕೊಂದರು. ಅವರಿಬ್ಬರ ಮಧ್ಯೆ ಜಾತಿಸಂಕರ ಉಂಟುಮಾಡಿದ ವಿವಾಹಸಂಬಂಧವು ಏರ್ಪಾಟಾಯಿತೆಂದು ಭೀಮಕವಿಯಲ್ಲಿ ಬಂದಿಲ್ಲವಾದರೂ, ಅಂತಹ ಘಟನೆ ಕವಿಯ ಮನಸ್ಸಿನಲ್ಲಿ ಇತ್ತೆಂದು ಕಾಣುತ್ತದೆ. ಬಸವಪುರಾಣದಲ್ಲಿ ಮಾದಾರ ದೂಡಿ ದೇವಯ್ಯ (ದೂಳಯ್ಯ), ಡೋಹರ ಕಕ್ಕಿದೇವಯ್ಯ ಮುಂತಾದ ಹಲವು ಅಸ್ಪೃಶ್ಯ ಶಿವಭಕ್ತರ ಉಲ್ಲೇಖಗಳು ಹಲವು ಬಾರಿ ಕಾಣಿಸಿಕೊಂಡಿವೆ.

ಭೀಮಕವಿಯ (ಸೋಮನಾಥನ) ದೃಷ್ಟಿ ಹರಿಹರನ ದೃಷ್ಟಿ ಎರಡೂ ಒಂದೇ ಆಗಿದೆ.

## ದೀಕ್ಷಾಬೋಧೆಯಲ್ಲಿ

ಹರಿಹರ ರಾಘವಾಂಕರ ಸಮಕಾಲೀನನಾದ ಕೆರೆಯ ಪದ್ಮರಸನ (ಸು. 1220) ದೀಕ್ಷಾಬೋಧೆ ಆ ಶತಮಾನದ ಲಿಂಗಾಯತ ಮತ ಸಮಾಜಗಳ ಸ್ವರೂಪ ವನ್ನು ತಿಳಿಯುವವರಿಗೆ ಒಂದು ಒಳ್ಳೆಯ ಆಕರ. ಶಿವಭಕ್ತರಲ್ಲದವರೇ, ಅವನ ಪ್ರಕಾರ, ಅಂತ್ಯಜರು ("ಕಳೆವುದಂತ್ಯಜರೆಂದು ಶಿವಭಕ್ತರಲ್ಲದರ").[35] ವೀರಶೈವರಿಗೆ "ಸೂತಕಗಳಿಲ್ಲಾಗಿ ಜಾತಿದೋಷಗಳಿಲ್ಲ". ಈಶ್ವರ ಬ್ರಾಹ್ಮಣ, ವಿಷ್ಣು ಕ್ಷತ್ರಿಯ, ಬ್ರಹ್ಮ ವೈಶ್ಯ. ಇಂದ್ರ ಶೂದ್ರನೆಂಬ ಅವನ ಕಾಲದ ನಂಬಿಗೆಯನ್ನು[36] ಕುಮಾರ ಪದ್ಮರಸನೂ ಪ್ರತಿಧ್ವನಿಸಿದ್ದಾನೆ.[37] ಈ ಮಾತು ಪರಾಶರನಲ್ಲಿದೆಯೆಂದು ಸಂಸ್ಕೃತ ಉಲ್ಲೇಖವನ್ನು

---

33. ಅದೇ, ಪು. 302–ಇವಳು ಷೋಡಶಗಣದಲ್ಲಿ ಒಬ್ಬಳು. ವೈಷ್ಣವರು ಹಾಳುಮಾಡಿದ ಅಣಂಪೂರಿನ ಶಿವಲಿಂಗವನ್ನು ತನ್ನ ಷೋಡಶಗಣದ ಸಹಾಯದಿಂದ ಪ್ರತಿಷ್ಠಾಪಿಸಿದ ದಿಟ್ಟ ಹೆಣ್ಣು ಎಂದು ಕತೆಗಳಿವೆ. ಆಕೆ ಹುಟ್ಟಿನಿಂದ ಪಾಂಚಾಲಳು ಎಂದು ಈಚಿನ ಕೃತಿ ಯೊಂದು ಕಲ್ಪಿಸುತ್ತದೆ. ಆದರೆ ಆಧಾರಗಳು ಸಾಲವು. ದಾನಮ್ಮನ ಹೆಸರು ಶಾಸನ ಗಳಲ್ಲಿ ಉಲ್ಲೇಖವಾಗಿದೆ. (ಬಿ.ಸಿ. ಜವಳಿ: 'ವರದಾನಿ ಗುಡ್ಡವ್ವೆ', ಸಾಧನೆ 6.4. ಪು. 72).
34. ಬಸವಪುರಾಣ, ಪು. 324.
35. ದೀಕ್ಷಾಬೋಧೆ, ಸಂ: ಎಸ್. ಬಸಪ್ಪ. ಮೈಸೂರು. 1972. ಪು. 23.
36. ಅದೇ, ಪು. 50.
37. ಸಾನಂದ ಚರಿತೆ, ಸಂ: ಎಸ್. ಬಸಪ್ಪ. ಮೈಸೂರು. 1975. ಪು. 54.

ಕುಮಾರ ಪದ್ಮರಸ ಕೊಟ್ಟಿದ್ದಾನೆ. 'ಸಾನಂದ ಚರಿತೆ'ಯ ಮೂಲ ಕೆರೆಯ ಪದ್ಮರಸನ ಸಂಸ್ಕೃತ ಕೃತಿ. ಅವನ ಮಗ ಕುಮಾರ ಪದ್ಮರಸ ಅದನ್ನು ಕನ್ನಡಿಸಿದ್ದಾನೆ; ಮೂಲ ಸಂಸ್ಕೃತ ಕೃತಿ ದೊರಕಿಲ್ಲವಾದರೂ ಸಾನಂದ ಚರಿತೆಯ ಅಭಿಪ್ರಾಯಗಳು ಕೆರೆಯ ಪದ್ಮರಸನವೆಂದೇ ಭಾವಿಸಬೇಕು. ಬಾಯ ಎಂಜಲನ್ನು ಶಿವನಿಗೆ ತಿನ್ನಿಸಿದ ಚನ್ನಯ್ಯನು ಕವಿಯ ಕುಲಾಭಿಮಾನಕ್ಕೆ ಒಡೆಯನಂತೆ ("ಎನ್ನ ಕುಲಾಭಿ ಮಾನಕ್ಕೆಱೆಯ").[38] ನಾಯಿ ಮಾಂಸದ ಪಾತ್ರೆಯನ್ನು ಕೆರದಿಂದ ಮುಚ್ಚಿ ಭವಿಯಿಂದ ಮೈಲಿಗೆ ಆಗುವುದನ್ನು ತಪ್ಪಿಸಿ ಶ್ವಪಚಯ್ಯ ಶಿವಧರ್ಮದ ಗೌರವವನ್ನು ಮೇಲೆ ಎತ್ತಿದ್ದಾನೆಂದು ಹೊಗಳಿದ್ದಾನೆ.[39]

## 13, 14ನೇ ಶ.ಗಳಲ್ಲಿ ದಲಿತ ಭಕ್ತರ ಸಾಮಾಜಿಕ ಸ್ಥಾನ

ಬಸವನ ಬಳಿಕ ಬಂದ ಹರಿಹರ ರಾಘವಾಂಕರ ಕಾಲದಲ್ಲಿ ಅಸ್ಪೃಶ್ಯ ಶಿವಭಕ್ತರ ಸಾಮಾಜಿಕ ಸ್ಥಾನ ಲಿಂಗಾಯತ ಪರಿಸರದಲ್ಲಿ ಗೌರವಾರ್ಹವಾಗಿದ್ದಿರ ಬೇಕು. ಹೊಲೆಯರು ಎಂದೆಂದಿಗೂ ಹೊಲೆಯರೇ ಆದುದರಿಂದ ಅವರು ಶಿವಭಕ್ತ ರಾಗಿರಲಿ ಆಗಿರದಿರಲಿ ಉಳಿದವರ ದೃಷ್ಟಿಯಲ್ಲಿ ಅವರು ನೀಚಕುಲದವರೇ ಆಗಿದ್ದರೂ, ಲಿಂಗಾಯತರಿಗೆ ಅವರು ತಮಗೆ ಸಮಾನರು ಮಾತ್ರವೇ ಅಲ್ಲ, ಒಂದು ರೀತಿಯಲ್ಲಿ ಅವರು ತಮಗಿಂತ ಹೆಚ್ಚು ಮಾನ್ಯರೂ ಆಗಿದ್ದರು. (ವಾಸ್ತವದಲ್ಲಿ, ಲಿಂಗಾಯತ ಸಮಾಜದಲ್ಲೂ ಇದಕ್ಕೆ ಅಪವಾದವಾಗಿ ಕೆಲವರು ಅಸ್ಪೃಶ್ಯ ಭಕ್ತರನ್ನು ಹೀನವಾಗಿ ಕಂಡಿರಲು ಸಾಧ್ಯ.) ಲಿಂಗಾಯತರು ಉಳಿದ ಅಸ್ಪೃಶ್ಯರ ವಿಷಯದಲ್ಲಿ ತೀವ್ರ ತಿರಸ್ಕಾರವನ್ನು ಅಲ್ಲದಿದ್ದರೂ ಅನಾದರ ಉಪೇಕ್ಷೆಗಳನ್ನು ಬೆಳೆಸಿಕೊಂಡಿರ ಬಹುದು, ಅವರು ಭವಿಗಳ ಗುಂಪಿಗೆ ಸೇರಿದವರಾದ್ದರಿಂದ; ಅಥವಾ ಅವರನ್ನು ಇತರ ಮತೀಯರಂತೆ, ತುಚ್ಛವಾಗಿ ಕಂಡಿರಲೂ ಸಾಧ್ಯ. (ರಾಘವಾಂಕನಲ್ಲಿ ಕಾಣುವ ದೃಷ್ಟಿ ಅದನ್ನು ಸೂಚಿಸುವಂತಿದೆ). ಬಸವಣ್ಣನ ಕಾಲದಲ್ಲಿ ಅಸ್ಪೃಶ್ಯ ಭಕ್ತರ ಬಗ್ಗೆ ಕಾಣಿಸಿದ ಆದರವು ಅವನ ಜೊತೆಗೇ ಆರಿಹೋಯಿತೆಂದು ಕಲ್ಪಿಸಿಕೊಳ್ಳುವುದು ಕಷ್ಟ. ಅಸ್ಪೃಶ್ಯ ಶಿವಭಕ್ತರ ಕತೆಗಳನ್ನು ಹರಿಹರ, ಪಾಲ್ಕುರಿಕೆ ಸೋಮರು (ಅಥವಾ ಭೀಮಕವಿ) ಅಷ್ಟೊಂದು ಆತ್ಮೀಯವಾಗಿ ಉಬ್ಬಿ ವರ್ಣಿಸಿರುವುದು ಅಂದಿನ ಸಮಾಜದ ಧೋರಣೆಯನ್ನೂ ಸ್ವಲ್ಪ ಮಟ್ಟಿಗೆ ಸೂಚಿಸಬಹುದು. ಕವಿಗಳೇನೋ ಅಸ್ಪೃಶ್ಯ ಭಕ್ತರ ಕತೆಗಳನ್ನು ಹೇಳುವುದರ ಮೂಲಕ ಜಾತಿ ಮತ್ತು ಆಚರಣೆಗಳಲ್ಲಿದ್ದ ಮಡಿ ಮೈಲಿಗೆ ಭಾವನೆಗಳನ್ನು ಹೋಗಲಾಡಿಸಲು ಯತ್ನಿಸಿದರು. ಇದರ ಫಲವಾಗಿ ಮೂಡಿ ಬಂದ ಕಲ್ಪನೆಯೇ ಹಿರಿಯ ಕುಲ ಅಥವಾ ಹಿರಿಯ ಮಾಹೇಶ್ವರ. ಇದರ ಇತಿಹಾಸ ಬಸವನಿಗಿಂತ ಸ್ವಲ್ಪ ಹಿಂದೆ ಹೋದರೂ ಮುಂದೆ ಹರಿಹರ ಭೀಮಕವಿಗಳ

38. ಅದೇ, ಪು.299.

39. ಅದೇ, ಪು. 299 – "ಶಿವಧರ್ಮದ ಘನತೆಯಂ ಮೆಱೆದ."

ಮೂಲಕ ಅದು ಅದ್ಭುತ ಪ್ರಚಾರವನ್ನು ಪಡೆಯಿತು, ಆ ಶಬ್ದದ ಬಳಕೆ ಹದಿನೆಂಟನೇ ಶತಮಾನದವರೆಗೆ ಉಳಿದು ಬಂದಿತು. ಅದರ ಇತಿಹಾಸ ನಮ್ಮ ಮುಂದಿನ ಚರ್ಚೆಯ ವಿಷಯವಾಗಿದೆ.

## ಹಿರಿಯ ಕುಲ–ಹಿರಿಯ ಮಾಹೇಶ್ವರ–ಹಿರಿಯ ಭಕ್ತ

ಬಸವಣ್ಣನ ಕಾಲದಲ್ಲಿ ಮತ್ತು ಅದಕ್ಕೆ ಸ್ವಲ್ಪ ಮುಂದೆ ಅಸ್ಪೃಶ್ಯ ಶಿವಭಕ್ತರಿಗೆ ಇದ್ದ ಸಾಮಾಜಿಕ ಸ್ಥಾನವನ್ನು ಹಿಂದೆ ನೋಡಿದ್ದೇವೆ. ಅವರನ್ನು ಇತರ ಭಕ್ತರಿಂದ ಪ್ರತ್ಯೇಕಿಸಲು ಹಿರಿಯ ಭಕ್ತರೆಂದೂ ಹಿರಿಯ ಮಾಹೇಶ್ವರರೆಂದೂ, ಅವರ ಕುಲವನ್ನು 'ಹಿರಿಯ ಕುಲ'ವೆಂದೂ ನಿರ್ದೇಶಿಸುತ್ತಿದ್ದರು. ಲಿಂಗಾಯತ ಪರಿಸರದಲ್ಲಿ ಹೊಲೆಯ ಭಕ್ತರನ್ನು ಹಿರಿಯ ಭಕ್ತರೆಂದು ನಿರ್ದೇಶಿಸುವ ಇತಿಹಾಸದ ವ್ಯಾಪ್ತಿ ಕ್ರಿ.ಶ. 1140ರಿಂದ ಹದಿನೆಂಟನೇ ಶತಮಾನದವರೆಗೆ ವ್ಯಾಪಿಸಿದೆ. ಆ ಉಕ್ತಿ ಬಹಳ ಅರ್ಥಪೂರ್ಣ ವಾಗಿರುವುದರಿಂದ ಆ ಉಕ್ತಿ ಬರುವ ಎಲ್ಲ ಉಲ್ಲೇಖಗಳನ್ನೂ ಕಾಲಾನುಕ್ರಮವಾಗಿ ಕೆಳಗೆ ಕೊಡುತ್ತೇನೆ.

1. ಬಸವಣ್ಣನ ಹಿರಿಯ ಸಮಕಾಲೀನನಾಗಿದ್ದ ಶ್ರೀ ರಾಮಾನುಜರ ಸಮಕಾಲೀನ ನಾಗಿದ್ದ ಕ್ರಿ.ಶ. 1130–40ರ ಸಕಲೇಶ ಮಾದರಸನ ವಚನವೊಂದರಲ್ಲಿ ಮೊತ್ತ ಮೊದಲ ಬಾರಿಗೆ 'ಹಿರಿಯ ಮಾಹೇಶ್ವರ' ಮಾತು ಕಂಡುಬರುತ್ತದೆ. ಆ ವಚನ ಹೀಗಿದೆ[40] :

**ಅಜಾತನ ಜಾತನ ಜಾತನೆಂಬೆನು**
**ಅಜಾತಂಗೆ ಕುಲ ಹೊಲೆ ಇಲ್ಲೆಂಬೆನು**
**ಹಿರಿಯ ಮಾಹೇಶ್ವರನೆಂಬೆನು**
**ಸಮಯಾಚಾರವ ಬೆಱಸಲಮ್ಮೆನು**
**ನಿಚ್ಚ ಪೂಜಿಸುವ ಪೂಜಕ ನಾನು**
**ಸಕಳೇಶ್ವರ ದೇವಾ ಎನ್ನ ನಾಚಿಸಬೇಡಾ,**

ಅಜಾತ (ಕೀಳು ಕುಲದವ) ಜಾತ (ಮೇಲು ಕುಲದವ) ಇಬ್ಬರಿಗೂ ಕುಲ ಹೊಲೆ ಇಲ್ಲವೆಂದೂ ಅಜಾತನನ್ನು ತಾನು ಹಿರಿಯ ಮಾಹೇಶ್ವರನೆಂದು ಭಾವಿಸುತ್ತೇನೆಂದೂ, ಅಜಾತರು 'ಜಾತನ ಜಾತ' ನಾಗಿರುವನೆಂದೂ (ಮೇಲು ಕುಲದವನಿಗಿಂತ ಮೇಲು ಕುಲದವ) ಹೇಳಿರುವುದು ಗಮನಾರ್ಹ. ಅಸ್ಪೃಶ್ಯ ಶಿವಭಕ್ತರನ್ನು ಹಿರಿಯ ಮಾಹೇಶ್ವರ (ಮಾಹೇಶ್ವರ=ಶಿವಭಕ್ತ, ಶೈವ)ನೆಂದು ಕರೆಯುವ ಪದ್ಧತಿಯ ಇತಿಹಾಸ ಕ್ರಿ.ಶ. 1100 ರಷ್ಟು ಹಿಂದಕ್ಕೆ ಹೋದರೂ ಆಶ್ಚರ್ಯವಿಲ್ಲ.

---

40. ಸಕಳೇಶ ಮಾದರಸನ ವಚನಗಳು. ಸಂ: ಎನ್. ಉಮಾಪತಿ. ದಾವಣಗೆರೆ. 1976. ವಚನ 48.

2. ಹದಿಮೂರನೇ ಶತಮಾನದ ಹರಿಹರನ ಬಸವರಾಜದೇವರರಗಳೆ ಕಾವ್ಯದಲ್ಲಿ (1979. ಪು. 52–3) "ಹಿರಿಯ ಮಾಹೇಶ್ವರರ ಕೇರಿ" ಎಂಬ ಮಾತು ಬರುತ್ತದೆ. ಊರ ಹೊರಗಿನ ದಲಿತರ ಕೇರಿ ಅದು. ಅಲ್ಲಿ "ಸಂಬೋಳಿಯ ನಾಗಿದೇವ" ನೆಂಬ "ಹಿರಿಯ ಮಾಹೇಶ್ವರ" ವಾಸವಾಗಿದ್ದ. ಎಲ್ಲೋ ಹೋಗುತ್ತಿದ್ದ ಬಸವಣ್ಣನಿಗೆ ಈ ಶಿವಭಕ್ತ ಹರಿಜನನ ಮನೆಯಿಂದ ಭಕ್ತಿಯ ಮಾತುಗಳು ಬರುತ್ತಿದ್ದುದನ್ನು ಕೇಳಿ, ಪಲ್ಲಕ್ಕಿಯಿಂದ ಇಳಿದು ಆ "ಹಿರಿಯ ಮಾಹೇಶ್ವರನ ಮನೆಯಂ ಪೊಕ್ಕು ಸಂಗಪ್ರಸಾದವನವರ ಪ್ರಸಾದವೆರಸಿ" ತೆಗೆದುಕೊಂಡ. ಎಂದರೆ ಅವನು ಆ ದಲಿತನ ಮನೆಯೊಳಕ್ಕೆ ಹೋದುದಲ್ಲದೆ ಅವನ ಮನೆಯಲ್ಲಿ ಊಟ ಮಾಡಿದ. ಆ ದಲಿತಭಕ್ತನ ಶೇಷಪ್ರಸಾದವನ್ನೂ ಸ್ವೀಕರಿಸಿದ. ಇದನ್ನೇ ಕಾಯುತ್ತಿದ್ದ ಮೇಲ್ಜಾತಿಯ ಜನ ಬಿಜ್ಜಳ ದೊರೆಗೆ ಚಾಡಿ ಹೇಳುತ್ತಾರೆ. ಆ ಭಾಗ ಹೀಗಿದೆ: "ಎಲೆಲೆಲೆ ಬಿಜ್ಜಳ, ಬಸವನ ನಡೆವಳಿ ದಿನದಿನಕ್ಕೆ ವಿಪರೀತಮಾಗಿರ್ಪುದು. ಹಿರಿಯ ಮಾಹೇಶ್ವರರೆಂದು ಬೆಸಕೊಂಡಿಪ್ಪುದಲ್ಲದೆ ಇಂದೀ ಗಳಿಗೆಯೊಳು ಹೊಲಗೇರಿಯೊಳಗೋರ್ವಂ– ಪೊಲೆಯನೆಂದೊಡೆ ಕೋಪಂ–ಹಿರಿಯ ಭಕ್ತನ ಮನೆಯೊಳಗೆ ಉಂಡುದಲ್ಲದೆ ನಿನ್ನೋಲಗದೊಳು ಪೊಲೆಗಲಸಲುಂ ಬಂದಪಂ. ಇಂತಾದಡೆ ಎಮಗೆ ಇರಲ್ಬಾರದು." ಇಲ್ಲಿಯ ಕಟಕಿಯನ್ನು ಗಮನಿಸಿ. ನಾಗಿದೇವನನ್ನು "ಹಿರಿಯ ಭಕ್ತ"ನೆಂದೇ ಕರೆಯಬೇಕಂತೆ; ಇದು ಲಿಂಗಾಯತರಲ್ಲದ ಜನರ ಅಸಮಾಧಾನಕ್ಕೆ ಕಾರಣವಾಗಿದೆ. ಕೆಂಭಾವಿ ಭೋಗಣ್ಣನ ರಗಳೆಯಲ್ಲಿ ಶಿವ ಒಬ್ಬ ಹೊಲೆಯನ ವೇಷದಲ್ಲಿ ಬಂದಾಗ ಅವನನ್ನು "ಹಿರಿಯ ಭಕ್ತ"ನೆಂದೇ ಹರಿಹರ ಕವಿ ವರ್ಣಿಸಿದ್ದಾನೆ. ಲಿಂಗಾಯತ ಜನ ಶಿವಭಕ್ತ ಅಸ್ಪೃಶ್ಯರನ್ನು ಹಿರಿಯ ಭಕ್ತರೆಂದು ಕರೆಯುತ್ತಿದ್ದರೆ, ಉಳಿದವರು ಅವರನ್ನು ಹೊಲೆಯ ಇತ್ಯಾದಿ ತುಚ್ಛ ಹೆಸರುಗಳಿಂದಲೇ ಕರೆಯುತ್ತಿದ್ದರು. ಹರಿಹರನಲ್ಲಿ 'ಹಿರಿಯ ಕೇರಿ' ಎಂದರೆ ಅಸ್ಪೃಶ್ಯ ಭಕ್ತರ ಕೇರಿಯೆಂದೂ (ಮಾದಾರ ಚನ್ನಯ್ಯನ ರಗಳೆ), 'ಪಿರಿಯ ವೇಷ' ಎಂದರೆ ಅಸ್ಪೃಶ್ಯರ ವೇಷವೆಂದೂ (ಕೆಂಭಾವಿ ಭೋಗಣ್ಣನ ರಗಳೆ) ಅರ್ಥವಾಗುತ್ತದೆ. ಹಿರಿಯ ಮಾಹೇಶ್ವರ ಎಂಬುದರ ಸಂಸ್ಕೃತ ರೂಪವೇ 'ಮಹಾಮಾಹೇಶ್ವರ' (ಕೇಶಿರಾಜ ದಣ್ಣಾಯಕರ ರಗಳೆ). 'ಪಿರಿಯ ವೇಷ' (=ಅಸ್ಪೃಶ್ಯ ಶಿವಭಕ್ತನ ವೇಷ) ಎಂಬ ಮಾತು ಸಾಮವೇದಿಗಳ ಮಹಾತ್ಮೆ ರಗಳೆಯಲ್ಲೂ ಬರುತ್ತದೆ.

3. ಹದಿನಾಲ್ಕನೇ ಶತಮಾನದ ಭೀಮಕವಿಯ ಬಸವಪುರಾಣದಲ್ಲಿ ಶಿವನಾಗಿ ಮಯ್ಯನ (ಅಥವಾ ಸಂಬೋಳಿ ನಾಗಿದೇವನ) ಮನೆಗೆ ಬಸವಣ್ಣ ಹೋಗಿ ಊಟ ಮಾಡಿದ ಬಗ್ಗೆ ರಾಜ ಬಿಜ್ಜಳನಿಗೆ ಬಸವಣ್ಣನವರ ವಿರೋಧಿಗಳು ಸಲ್ಲಿಸಿದ ಅಹವಾಲು ಹೀಗಿದೆ: "ಹಿರಿಯ ಭಕ್ತರು ಹಿರಿಯ ಭಕ್ತರೆನ್ನುತ್ತವವರಂ

ಹಿರಿದು ಮನ್ನಿಪನು, ಅವರ ಕಾಲ್ಗಳ ಮೇಲೆ ಬೀಳುವನು, ಮರಳಿ ತಾನು ಅವರು ಉಂಡು ಮಿಕ್ಕುದನ್ನು ಇರದೆ ಕೊಂಬನು ಕೈಯನಾಂತು, ಓಸರಿಸದೆ ಅನುದಿನವು ಅವರನೇ ಕೊಂಡಾಡುವಂ" (ಸಂಧಿ 55, ಪದ್ಯ 4). ಭಕ್ತದಲಿತರ ಎಂಜಲನ್ನು ಶೇಷಪ್ರಸಾದವಾಗಿ ಬಸವಣ್ಣನವರು ಭಕ್ತಿಯಿಂದ ಸ್ವೀಕರಿಸುತ್ತಿದ್ದರು. ವರದಾನಿ ಗುಡ್ಡವ್ವೆ ಎಂಬ ಹೊಲೆಯ ಶಿವಭಕ್ತೆಯನ್ನು ಹಿರಿಯ ಭಕ್ತೆ ಎಂದು ಭೀಮ ಕವಿ ಕರೆದಿದ್ದಾನೆ. (58.1) ಬಿಬ್ಬಿ ಬಾಚಯ್ಯ 'ಹಿರಿಯ ಭಕ್ತನ ಮನೆಯ ಪರ್ವಕ್ಕೆ' ಹೋದ ಸಂಗತಿ ಅದೇ ಕೃತಿಯಲ್ಲಿದೆ (56.11).

4. ಹದಿನೈದನೆಯ ಶತಮಾನದ ನೀಲಕಂಠಾಚಾರ್ಯನ 'ಆರಾಧ್ಯಚಾರಿತ್ರ'ದಲ್ಲಿ (ಇದು ಹದಿಮೂರನೇ ಶತಮಾನದ ಪಾಲ್ಕುರಿಕೆ ಸೋಮನಾಥನ ಅದೇ ಹೆಸರಿನ ತೆಲುಗು ಕಾವ್ಯದ ಕನ್ನಡಾನುವಾದ) ಇಡೀ ಒಂಬತ್ತನೆಯ ಸಂಧಿ "ಹಿರಿಯ ಭಕ್ತರ ಕಥೆ" ಎಂಬ ಹೆಸರನ್ನು ಪಡೆದಿದೆ.

   ಆ ಹಿರಿಯ ಭಕ್ತರೆಲ್ಲರೂ ದಲಿತರು. ತಿರುನಾಳ್ವೋವರ್, ಡೋಹರ ಕಕ್ಕಯ್ಯ, ಶಿವನಾಗಯ್ಯ (ಅಥವಾ ಸಂಬೋಳಿ ನಾಗಿದೇವ), ಶ್ವಪಚಯ್ಯ, ಮಾದರ ಚೆನ್ನಯ್ಯ, ಮಾದರ ಧೂಳಯ್ಯ, ಗುಡ್ಡವ್ವೆ ಇತ್ಯಾದಿ ಜನಗಳ ಕತೆ ಆ ಅಧ್ಯಾಯದಲ್ಲಿ ಬಂದಿದೆ. ಮೂಲ ತೆಲುಗು ಕೃತಿಯಲ್ಲಿ ಹಿರಿಯ ಭಕ್ತರೆನ್ನುವ ಮಾತು ಬಂದಿಲ್ಲವಾದುದರಿಂದ ಆ ಮಾತು ಕರ್ನಾಟಕದಲ್ಲಿ ಮಾತ್ರ ಪ್ರಚುರವಾಗಿತ್ತೆಂದು ತಿಳಿಯಬೇಕಾಗುತ್ತದೆ.

5. ಹದಿನೈದು ಹದಿನಾರನೇ ಶತಮಾನದ ಸಿಂಗಿರಾಜನ ಸಿಂಗಿರಾಜ ಪುರಾಣದಲ್ಲಿ (ಸಂಧಿ 28, ಪದ್ಯ 8) ಶಿವನಾಗಮಯ್ಯನನ್ನು 'ಹಿರಿಯ ಮಹೇಶ್ವರ'ನೆಂದೂ ಅವನ ಕುಲವನ್ನು 'ಹಿರಿಯನ್ವಯ'(ಅನ್ವಯ=ಕುಲ)ವೆಂದೂ ಕರೆಯಲಾಗಿದೆ. ಶಿವನಾಗಮಯ್ಯ ಒಬ್ಬ ದಲಿತ ಭಕ್ತನೆಂದು ಈಗಾಗಲೇ ಹೇಳಿದೆ.

6. ಸಿದ್ಧನಂಜೇಶನ ರಾಘವಾಂಕ ಚಾರಿತ್ರದಲ್ಲಿ (ಹದಿನೇಳನೇ ಶತಮಾನ) 'ಸೂರಸಾನಿಯ ಮನೆಗೆ ಪಿರಿಯ ಭಕ್ತನ ತೆರದಿ ಮಾರಾರಿ ಬರೆ' ಎಂದಿದೆ (ಸಂಧಿ 8, ಪದ್ಯ 19). ಶಿವ ಬಂದುದು ಒಬ್ಬ ಅಸ್ಪೃಶ್ಯನ ವೇಷದಲ್ಲಿ. ಅದೇ ಕೃತಿಯಲ್ಲಿ ಮಾದಾರ ಧೂಳಯ್ಯನನ್ನು 'ಹಿರಿಯ ಭಕ್ತಾಗ್ರಣಿ' ಎಂದಿದೆ. (11.37).

7. ಅದೇ ಶತಮಾನದ ಚೆನ್ನಯ್ಯ ಎಂಬ ಕವಿಯ "ಕೆಂಭಾವಿ ಭೋಗಣ್ಣನ ಸಾಂಗತ್ಯ" ಎಂಬ ಕೃತಿಯಲ್ಲಿ ಹೊಲೆಯರ ವೇಷದಲ್ಲಿದ್ದ ಶಿವನು ಭೋಗಣ್ಣನಿಗೆ ಹೀಗೆ ಹೇಳುತ್ತಾನೆ : "ಹಿರಿಯ ಭಕ್ತರು ನಾವು, ಕುಲವುಳ್ಳ ಭಕ್ತ ನೀ, ಬೆರಸಿ ನಮ್ಮನು ಮುಟ್ಟಬಹುದೆ?" (ಪದ್ಯ 14). ನಾನು ಅಸ್ಪೃಶ್ಯ, ನೀನು

ನನ್ನನ್ನು ಮುಟ್ಟಬಾರದು ಎಂದು ಅಸ್ಪೃಶ್ಯನ ವೇಷದಲ್ಲಿನ ಶಿವ ಹೇಳುವುದು ಗಮನಾರ್ಹ.

8. ಅದೇ ಶತಮಾನದ ಶಾಂತಲಿಂಗದೇಶಿಕನ "ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ" ಎಂಬ ಕೃತಿಯಲ್ಲಿ ಒಂದು ಕತೆ ಈ ರೀತಿ ಆರಂಭ ವಾಗುತ್ತದೆ; "ಬಂಗಾಳ ದೇಶದರಸು ಸುಯಿದಾರಿಯೆಂಬ ಕ್ಷತ್ರಿಯನು ಹಿರಿಯ ಕುಲದ ಭಕ್ತರಲ್ಲಿ ಊಟಕ್ಕೆ ವಿಭೂತಿಯ ಪಿಡಿದು ಉಣ್ಣಲೊಲ್ಲದೆ ಕುಲಸೂತಕ ದಿಂದ ತನ್ನ ಗುರುವಾದ ವಾಮನ ಮುನಿಯ ಕೇಳಲು ಉತ್ತಮ ಕುಲದ ಕ್ಷತ್ರಿಯರು ಶ್ವಪಚರಲ್ಲಿ ಉಂಬರೆ? ಉಣ್ಣಲಾಗದು ಎನಲು..." ಹಿರಿಯ ಕುಲದ ಭಕ್ತರೆಂದರೆ ಶಿವಭಕ್ತರಾದ ದಲಿತರು. ಅದೇ ಕೃತಿಯಲ್ಲಿ (2 ಪು. 435) 'ಭಕ್ತರು' ಎಂದರೆ ಹಿರಿಯ ಭಕ್ತರೆಂದೂ 'ಭಕ್ತರ ಕೇಙ' ಯೆಂದರೆ ಹೊಲೆಗೇರಿಯೆಂದೂ ಅರ್ಥವಾಗುತ್ತದೆ.

9. ವೀರಭದ್ರ ಕವಿಯ ಅರವತ್ತು ಮೂವರು ಪುರಾತನರ ಪುರಾಣ (19.21), ಸುರಂಗ ಕವಿಯ ತ್ರಿಷಷ್ಟಿ ಪುರಾತನ ಚಾರಿತ್ರಂ (1966, ಪು. 705) ಈ ಕೃತಿಗಳಲ್ಲೂ ಹಿರಿಯವೇಷ, ಪಿರಿಯ ಭಕ್ತ ಎಂಬ ಮಾತುಗಳಿವೆ.

10. ಬಸವಣ್ಣನ ಒಂದು ವಚನ ಹೀಗಿದೆ : "ದೂಷಕನವನೊಬ್ಬ ದೇಶವ ಕೊಟ್ಟಡೆ ಆಸೆಮಾಡಿ ಅವನ ಹೊರೆಯಲ್ಲಿರಬೇಡ; ಮಾದಾರ ಶಿವಭಕ್ತನಾದರೆ ಆತನ ಹೊರೆಯಲ್ಲಿ ಭೃತ್ಯಾಚಾರಿಯಾಗಿಪ್ಪುದು ಕರ ಲೇಸಯ್ಯಾ". ಇದಕ್ಕೆ ಹದಿನೆಂಟು ಹತ್ತೊಂಬತ್ತನೇ ಶತಮಾನದಷ್ಟು ತೀರ ಈಚಿನ ಕಾಲದ ಒಬ್ಬ ವ್ಯಾಖ್ಯಾನಕಾರ ವ್ಯಾಖ್ಯಾನವನ್ನು ಬರೆಯುತ್ತ "ಮಾದಾರ" ಎಂಬ ಮಾತಿಗೆ ಹೀಗೆ ಅರ್ಥ ವನ್ನು ಹೇಳುತ್ತಾನೆ: "ಮಾದಾರ–ಊರಿಂದ ಹೊರಗಣ ಕೇರಿಯಲ್ಲಿ ಮನೆಯ ಕಟ್ಟಿಕೊಂಡಿರುವಂಥ ಹಿರೇಕುಲದ ಭಕ್ತನು". ಅದೇ ವ್ಯಾಖ್ಯಾನಕಾರ ಇನ್ನೊಂದು ಕಡೆ "ಚತುರ್ವೇದಿಯಾದಡೇನು, ಲಿಂಗವಿಲ್ಲದವನೇ ಹೊಲೆಯ; ಶ್ವಪಚನಾದಡೇನು, ಲಿಂಗವಿದ್ದವನೇ ವಾರಣಾಸಿ. ಆತನ ನುಡಿ ಗಡಣವೇ ಲೇಸು, ಆತ ಜಗಕ್ಕೆ ಪಾವನ, ಆತನ ಪ್ರಸಾದವೆನಗೆ ಅಮೃತ ಸೇವನೆ" ಎಂಬ ಬಸವಣ್ಣನವರ ವಚನಕ್ಕೆ ಅರ್ಥ ಬರೆಯುತ್ತ "ಶ್ವಪಚನಾದಡೇನು–ಹಿರೇಕುಲದ ಭಕ್ತನಾದರೇನು" ಎಂದು ಹೇಳುತ್ತಾನೆ. "ಹೊಲೆಯ" "ಮಾದಾರ" ಎಂಬ ಮಾತುಗಳಿಗೆಲ್ಲ ಈ ವ್ಯಾಖ್ಯಾನಕಾರ ಬೇರೆ ಬೇರೆ ಕಡೆಗಳಲ್ಲೂ "ಹಿರೇಕುಲದ ಭಕ್ತನು" ಎಂದೇ ಅರ್ಥ ಹೇಳುತ್ತಾನೆ. (ನೋಡಿ–ಸಂ: ಎಂ.ಎಂ. ಕಲಬುರ್ಗಿ: ಬಸವಣ್ಣನವರ ಟೀಕಿನ ವಚನಗಳು. II ಪು. 41, 47, 79 ಇ.)

ಇವು ಆರಿಸಿಕೊಟ್ಟ ಕೆಲವೇ ಕೆಲವು ಉದಾಹರಣೆಗಳು. ಬಸವಣ್ಣ ಮತ್ತು ಅವನ ಸಮಕಾಲೀನರು ದಲಿತರು ಶಿವಭಕ್ತರಾಗಲು ಅವಕಾಶ ಮಾಡಿಕೊಟ್ಟುದು

ಮಾತ್ರವೇ ಅಲ್ಲ; ಅವರ ಆರ್ಥಿಕ ಸಾಮಾಜಿಕ ಪ್ರಗತಿಗೂ ಮನಃಪೂರ್ವಕವಾಗಿ ಶ್ರಮಿಸಿ ಅವರಿಗೆ ಒಂದು ಸ್ಥಾನವನ್ನು ತಂದುಕೊಟ್ಟರು. ಅವರ ಆ ಪ್ರಯತ್ನ ವ್ಯರ್ಥವಾಗಲಿಲ್ಲ. ಮುಂದೆ ಬಂದ ಲಿಂಗಾಯತ ಜನಾಂಗ ಆ ದಲಿತರನ್ನು ಹಿರಿಯ ಕುಲದ ಭಕ್ತರೆಂದು ಹೆಸರಿಸುವ ಮೂಲಕ ಅವರ ಬಗ್ಗೆ ಪ್ರೇಮ, ಆದರ, ಗೌರವಗಳನ್ನು ವ್ಯಕ್ತಪಡಿಸಿದರು. ಉಳಿದ ಸವರ್ಣೀಯ ಲಿಂಗಾಯತರು ಬರಿಯ "ಭಕ್ತರು" ಅಥವಾ "ಮಾಹೇಶ್ವರ"ರು ಎಂದು ಕರೆಸಿಕೊಂಡರೆ ಒಮ್ಮೆ ಅಸ್ಪೃಶ್ಯರಾಗಿದ್ದ ಭಕ್ತರು ಅವರಿಗಿಂತ ಹಿರಿಯರೆನ್ನಿಸಿಕೊಂಡರು, ಹಿರಿಯ ಭಕ್ತರಾದರು, ಹಿರಿಯ ಮಾಹೇಶ್ವರರಾದರು. ಉಳಿದವರ ಕಣ್ಣಿಗೆ ದಲಿತರು "ಕೆಳಕುಲ"ದವರಾದರೆ, ಹಾಗೆ ಕರೆಯುತ್ತಿದ್ದುದನ್ನು ತೀವ್ರವಾಗಿ ಪ್ರತಿಭಟಿಸಲೋ ಏನೋ ಎನ್ನುವಂತೆ ಲಿಂಗವಂತರು ಅವರನ್ನು "ಹಿರಿಯ ಕುಲ"ದವರೆಂದು ಕರೆದರು.[41] ಕೆಳವರ್ಗದವರಿಗೆ ಆತ್ಮವಿಶ್ವಾಸವನ್ನೂ ಆತ್ಮಗೌರವವನ್ನೂ ತಂದುಕೊಡಲು ಮೇಲುವರ್ಗದ ಪ್ರಜ್ಞಾವಂತ ಲಿಂಗಾಯತ ಜನ ಅನುಸರಿಸಿದ ರೀತಿ ಇದು. ಉಳಿದ ಲಿಂಗಾಯತರಿಗೂ ಶಿವಭಕ್ತ ಜನರಿಗೂ ಯಾವುದೇ ಸ್ಥಾನ ಭೇದವು ಇರಬಾರದೆಂಬುದೇ ಅವರ ಆಶಯವಾಗಿತ್ತು.

'ಹಿರಿಯ ಮಾಹೇಶ್ವರ' ಎಂಬುದು ಬರಿಯ ಸೌಮ್ಯೋಕ್ತಿಯಾಗಿ (euphemism) ಹುಟ್ಟಿಕೊಂಡ ಉಕ್ತಿಯಲ್ಲ. ಸೌಮ್ಯೋಕ್ತಿಯು ಅಮಂಗಳ ಅಥವಾ ಕೆಟ್ಟುದನ್ನು ಒಳ್ಳೆಯ ಮಾತಿನಲ್ಲಿ ಹೇಳುವ ಒಂದು ಪ್ರಯತ್ನ. ಅಲ್ಲಿ ಪದದ ಬಳಕೆಯಲ್ಲಿ ಉನ್ನತಿಯಿರುವುದೇ

---

41. ಹೀಗೆ ಹೇಳಲು ಆಧಾರವಿದೆ. ಈ ವಚನ ನೋಡಿ – "ಚಂಡಾಲನಾದರೆಯೂ ಶಿವಭಕ್ತನೇ ಕುಲಜನು. ಆತನೊಡನೆ ನುಡಿಗಡಣವ ಮಾಡಬೇಕೆಂಬುದು ವೇದ. ಕುಲವ ನೋಡಲು ಬೇಡ ಛಲವ ನೋಡಲು ಬೇಡ. ಆತನೆಲ್ಲರಿಗೆಯೂ ಹಿರಿಯನು. ಆತನಿರುತ್ತಿದ್ದಲ್ಲಿ ಶಿವನಿರುತ್ತಿಹನೆಂದು ವೇದ ನುಡಿಯುತ್ತಿದೆ. ಅಪಿ ವಾ ಯಶ್ಚ ಚಾಂಡಾಲಃ ಶಿವೇತಿ ವಾಚ್ಯಮವದತ್ತೇನ । ಸಹ ಸಂವಸೇತ್ತೇನ ಸಹ ಸಂವಿಸೇತ್ತೇನ ಸಹ ಭುಂಜೀತ ॥ ಹೀಗೆಂದು ಉಪನಿಷತ್ತು ನುಡಿಯುತ್ತಿದೆ. ಶಿವನೇ, ನಿಮ್ಮ ಸದ್ಭಕ್ತರನು ಅವರಿವರೆಂದು ಕುಲವನೆತ್ತಿ ನುಡಿದವಂಗೆ ಇಪ್ಪತ್ತೆಂಟು ಕೋಟಿ ನರಕ ತಪ್ಪದು ನೋಡಯ್ಯ ಬಸವಪ್ರೀಯ ಕೂಡಲ ಚೆನ್ನಸಂಗಮದೇವ್" (ಗಣಭಾಷಿತ ರತ್ನಮಾಲೆ. ಸಂ: ಶ್ರೀ ಪ್ರಭುಸ್ವಾಮಿಗಳು. ಧಾರವಾಡ. 1948, ಪು. 246–7) ಉತ್ತಮಸ್ಥಾನದ ಮೇಲುಜಾತಿಯ ಬ್ರಾಹ್ಮಣರಿಗಿಂತ ಚಾಂಡಾಲರು ಮೇಲುಜಾತಿಯವರು ಎಂಬುದನ್ನು ಸೂಚಿಸಲೂ ಈ ಪದ ಬಳಕೆಯಾಗಿರಬಹುದು. ಸಾನಂದಚರಿತೆಯ (ಪು. 158) ಈ ಮಾತುಗಳನ್ನು ನೋಡಿ – "ಶ್ವಪಚೋಪಿ ಮುನಿಶ್ರೇಷ್ಠಃ ಶಿವಭಕ್ತಾ ದ್ವಿಜಾಧಿಕಃ । ಶಿವಭಕ್ತಿ ವಿಹೀನಸ್ತು ದ್ವಿಜೋಪಿ ಶ್ವಪಚಾಧಮಃ." ಬ್ರಾಹ್ಮಣರನ್ನು ಕರ್ನಾಟಕದಲ್ಲಿ ಮಹಾಜನರೆಂದು (ತಮಿಳುನಾಡಿನಲ್ಲಿ, ಪೆರುಮಕ್ಕಳ್) ಕರೆಯುತ್ತಿದ್ದರು, ಮತ್ತು ಹಾಗೆ ಕರೆಯಲು ಕಾರಣ ಅವರದು ಎಲ್ಲರಿಗಿಂತ ಮೇಲು ಜಾತಿಯಾಗಿದ್ದುದೇ. ಬ್ರಾಹ್ಮಣರು ಮಹಾಜನರಾದರೆ ಹೊಲೆಯ ಶಿವಭಕ್ತರು ಅವರಿಗಿಂತ ಹಿರಿಯರು, ಹಿರಿಯ ಭಕ್ತರು ಅಥವಾ ಹಿರಿಯ ಮಾಹೇಶ್ವರರು.

ಹೊರತು ಧೋರಣೆಯಲ್ಲಿ ಬದಲಾದ ಔನ್ನತ್ಯವೆಂದು ಕಾಣಿಸದು. ಹಿರಿಯ ಭಕ್ತ ಎಂಬುದು ಆಂತಹ ಕೇವಲ ಸೌಮ್ಯೋಕ್ತಿಯಾಗಿದ್ದರೆ ಲಿಂಗಾಯತೇತರ ಸಾಹಿತ್ಯದಲ್ಲಿ ವ್ಯಂಗ್ಯದ ಅರ್ಥದಲ್ಲಿ ಕಾಣಿಸಿಕೊಳ್ಳುತ್ತಿತ್ತು. ಲಿಂಗಾಯತ ಸಾಹಿತ್ಯದಲ್ಲಿ ಮಾತ್ರ ಗಂಭೀರಾರ್ಥದಲ್ಲಿ ಅದು ಬಳಕೆಯಾಗುವುದನ್ನು ನೋಡಿದರೆ (ಲಿಂಗಾಯತೇತರ ಸಾಹಿತ್ಯದಲ್ಲಿ ಆ ಪದದ ಬಳಕೆಯಿಲ್ಲ) ಅಸ್ಪೃಶ್ಯ ಶಿವಭಕ್ತರನ್ನು ಲಿಂಗಾಯತ ಸಮಾಜ ಗಂಭೀರವಾಗಿ ತೆಗೆದುಕೊಂಡಿತ್ತೆಂದು ಹೇಳಬೇಕಾಗುತ್ತದೆ. ಹನ್ನೆರಡು ಹದಿಮೂರನೇ ಶತಮಾನಗಳಲ್ಲಿನಂತೆಯೇ ಮುಂದೆಯೂ ಅವರಿಗೆ ಅದೇ ಬಗೆಯ ಆದರ ಗೌರವ ದೊರಕಿದುವೆಂಬುದನ್ನು ಸಮರ್ಥಿಸಿಕೊಳ್ಳುವುದು ಕಷ್ಟವಾದರೂ ಲಿಂಗಾಯತ ಸಾಹಿತ್ಯ ತಾತ್ವಿಕವಾಗಿಯಾದರೂ ಧಾರ್ಮಿಕ ಲೋಕದ ಅಸ್ಪೃಶ್ಯ ಶಿವಭಕ್ತರನ್ನು ಈಚಿನವರೆಗೆ ಗೌರವದಿಂದ ಕಂಡಿತು ಎಂಬುದಂತೂ ನಿಜ: ಅದು ಲಿಂಗಾಯತ ಸಮಾಜದ ನಿಲುವೂ ಅಗಿದ್ದಿತು.

## ಹಿರಿಯ ಕುಲ ಮತ್ತು ತಿರುಕುಲ

ಹನ್ನೆರಡನೇ ಶತಮಾನದ ಪೂರ್ವಾರ್ಧದಲ್ಲಿ ರಾಮಾನುಜರು ಶೈವರಾದ ಚೋಳರ ಉಪಟಳವನ್ನು ತಾಳಲಾರದೆ ಕರ್ನಾಟಕಕ್ಕೆ ಬಂದಾಗ ಹೊಯ್ಸಳ ವಿಷ್ಣುವರ್ಧನನು ಅವರಿಗೆ ಆಶ್ರಯ ಕೊಟ್ಟನೆಂದು ಇತಿಹಾಸ ಹೇಳುತ್ತದೆ. ಅವರು ದೆಹಲಿ ಸುಲ್ತಾನನ ಬಳಿಯಿದ್ದ ಶ್ರೀರಾಮಪ್ರಿಯ ವಿಗ್ರಹವನ್ನು ತರುವಲ್ಲಿ ಸಹಾಯ ಮಾಡಿದ ಹೊಲೆಯರಿಗೆ ಕೃತಜ್ಞತೆಯ ರೂಪದಲ್ಲಿ 'ತಿರುಕುಲತ್ತಾರ್' (=ಶ್ರೀ ಕುಲದವರು, ದೊಡ್ಡ ಕುಲದವರು) ಎಂದು ಹೆಸರು ಕೊಟ್ಟು, ವರ್ಷದಲ್ಲಿ ಮೂರು ದಿನ ಮೇಲ್ಕೋಟೆ ಚೆಲುವನಾರಾಯಣ ಸ್ವಾಮಿಯ ದೇವಸ್ಥಾನಕ್ಕೆ (ಅಥವಾ ದೇವಾಲಯದ ಪ್ರಾಕಾರದೊಳಕ್ಕೆಯೋ) ಪ್ರವೇಶದ ಹಕ್ಕನ್ನು ಅನುಗ್ರಹಿಸಿದರೆಂದು ಕತೆಗಳಿವೆ. 'ಪಿರಿಯ (ಹಿರಿಯ) ಕುಲ' 'ತಿರುಕುಲ'ಗಳು ಅರ್ಥ, ರಚನೆಯಲ್ಲಿ ಎಷ್ಟು ಸಮೀಪವೆಂದರೆ ಒಂದು ಇನ್ನೊಂದರ ಅನುವಾದವೆಂಬಂತೆ ಮೇಲ್ನೋಟಕ್ಕೆ ತೋರುತ್ತದೆ. (ತಿರು=ಶ್ರೀ) ಈ ಬಗ್ಗೆ ಕೆಳಗಿನ ಸಂಗತಿಗಳನ್ನು ಗಮನಿಸಬೇಕು.

1. ರಾಮಾನುಜರು (ಕ್ರಿ.ಶ.1120–30) ದಿಲ್ಲಿ ಬಾದಶಹನ ಹತ್ತಿರ ಹೋಗಿ ಬಂದ ಕತೆಯ ಐತಿಹಾಸಿಕತೆಯನ್ನು ಪ್ರಶ್ನಿಸಿದವರಿದ್ದಾರೆ. ಏಕೆಂದರೆ ಅವರ ಕಾಲದಲ್ಲಿ ದಿಲ್ಲಿಯಲ್ಲಿ ಹಿಂದೂ ದೊರೆಯೊಬ್ಬ ಆಳುತ್ತಿದ್ದ. ಬಹುಶಃ ಹಿಂದೂ ದೊರೆಯ ಬಳಿಯಿದ್ದ ಒಬ್ಬ ಮುಸ್ಲಿಂ ದಳಪತಿಯ ಬಳಿಯಿದ್ದ ರಾಮಪ್ರಿಯ ವಿಗ್ರಹವನ್ನು ತಂದಿರಬಹುದೆಂದು ಸಮಾಧಾನ ಹೇಳಲಾಗಿದೆ. (ಎಚ್ಚೆಸ್ಕೆ ಅವರ 'ಶ್ರೀ ರಾಮಾನುಜ', ಪು.207).

2. ಈ ಕತೆ ತೆಂಗಲೈ, ವಡಗಲೈ, ಸಂಪ್ರದಾಯಗಳ ಶ್ರೀಗುರು ಪರಂಪರಾ ಮಹಿಮೆ ಎಂಬ ತಮಿಳು ಗ್ರಂಥಗಳಲ್ಲಿ ಬಂದಿದೆ. ಇವುಗಳ ಕಾಲ ಅನಿಶ್ಚಿತ.

ತೆಂಗಲೈ ಪಾಠವು ಹದಿಮೂರನೇ ಶತಮಾನದ್ದೆಂದು ಒಬ್ಬ ವಿದ್ವಾಂಸರು ಹೇಳಿದರೆ, ಇನ್ನೊಬ್ಬರು ಹದಿನಾರನೇ ಶತಮಾನದ ಅನಂತಾಚಾರ್ಯನ 'ಪ್ರಪನ್ನಾಮೃತ' ಎಂಬ ಸಂಸ್ಕೃತ ಕೃತಿಯ ತಮಿಳು ರೂಪವೇ ತೆಂಗಲೈ ಶ್ರೀ ಗುರುಪರಂಪರಾ ಮಹಿಮೆ ಎನ್ನುತ್ತಾರೆ. ಇಲ್ಲಿ 'ತಿರುಕುಲತ್ತಾರ್' ಎಂಬ ಹೆಸರು ಇಲ್ಲ. ಹದಿನಾಲ್ಕನೇ ಶತಮಾನದ್ದೆಂದು ಹೇಳಲಾದ ವಡಗಲೈ ಸಂಪ್ರದಾಯದ ಗುರುಪರಂಪರಾ ಮಹಿಮೆಯಲ್ಲಿ 'ತಿರುಕುಲತ್ತಾರ್' ಹೆಸರಿದೆ. ಕ್ರಿ.ಶ. 1130–40ರ ಸಕಲೇಶ ಮಾದರಸನ ವಚನದಲ್ಲಿ ಹಿರಿಯ ಮಾಹೇಶ್ವರ ಎಂದು ಬರುತ್ತದೆಯೆಂಬುದನ್ನು ಇಲ್ಲಿ ಗಮನಿಸಬೇಕು. ಕನ್ನಡದಲ್ಲಿ ಕ್ರಿ.ಶ. 1368ರ ಬುಕ್ಕನ ಶ್ರವಣಬೆಳ್ಗೊಳ ಶಾಸನದಲ್ಲಿ 'ತಿರಿಕುಲ' ಮಾತು ಬರುತ್ತದೆ. ಇದೇ 'ತಿರುಕುಲ'ದ ಪ್ರಪ್ರಾಚೀನ ಉಲ್ಲೇಖ, ಕನ್ನಡದಲ್ಲಿ. ಕನ್ನಡ ಬಸವ ಪುರಾಣದ ತಮಿಳು ಅನುವಾದ "ವಸವಪುರಾಣ'ದಲ್ಲಿ (17ನೇಶ.) ಎಲ್ಲೆಲ್ಲಿ ಮೂಲ ಕೃತಿಯಲ್ಲಿ ಹೊಲೆಯ, ಹಿರಿಯಕುಲ ಮಾತುಗಳು ಬರುತ್ತವೆಯೋ ಅಲ್ಲೆಲ್ಲಾ "ತಿರುಕುಲತ್ತಾನ್" ಬಂದಿದೆ.

3. ರಾಮಾನುಜರು, ಕತೆಯ ಪ್ರಕಾರ, ದಿಲ್ಲಿಯಿಂದ ಶ್ರೀರಾಮಪ್ರಿಯ ವಿಗ್ರಹ ವನ್ನು ತರಲು ತಮಗೆ ಸಹಾಯ ಮಾಡಿದ್ದಕ್ಕೆ ಪ್ರೀತಿಯಿಂದ ಹರಿಜನರನ್ನು 'ತಿರುಕುಲತ್ತಾರ್' ಎಂದು ಕರೆದು ಭಗವತ್ ಸಾನ್ನಿಧ್ಯಕ್ಕೆ ಅವಕಾಶ ಮಾಡಿದರು. ಈಗ ಮೇಲುಕೋಟೆಯಲ್ಲಿ ಇರುವ ಸಂಪ್ರದಾಯದಂತೆ ದಲಿತ ರನ್ನು ಬ್ರಹ್ಮೋತ್ಸವದ ಏಳು ಎಂಟು ಒಂಬತ್ತನೇ ದಿವಸ ದೇವಸ್ಥಾನದ ಒಳಕ್ಕೆ, ಎಂದರೆ ಪ್ರಾಕಾರದ ಒಳಗೆ ಧ್ವಜಸ್ತಂಭದವರೆಗೆ ಮಾತ್ರ ಬಿಡುತ್ತಾರೆ. ಕೊನೆಯ ದಿನ ದೇವಸ್ಥಾನದ ಆವರಣವನ್ನೆಲ್ಲ ಶುಭ್ರಗೊಳಿಸಿ, ಪಂಚಗವ್ಯದಿಂದ ಶುದ್ಧಿ ಗೊಳಿಸಿ ಬಳಿಕ ಅಭಿಷೇಕ ಮಾಡುತ್ತಾರೆ (1938ರ ಮೇಲ್ಕೋಟೆ ಮ್ಯಾನುಯಲ್. ಪು. 385). ಇದು ಮೈಲಿಗೆ ಹೋಗಲಾಡಿಸಲು ಎಂದು ಒಬ್ಬ ಶ್ರೀವೈಷ್ಣವ ವಿದ್ವಾಂಸರ ಸಂದೇಹ; ಹಾಗಲ್ಲ, ಅದು ಶಾಸ್ತ್ರೋಕ್ತ; ಮಹಾಭಿಷೇಕ ವಾದ್ದರಿಂದ ಶುದ್ಧೀಕರಣ ಎಂದು ಇನ್ನೊಬ್ಬರ ಅಭಿಪ್ರಾಯ. (ಆ ಮೂರು ದಿನ ಕೆಲವು ಸಾಂಪ್ರದಾಯಕ ಶ್ರೀವೈಷ್ಣವರು ದೇವಾಲಯದಿಂದ ದೂರವಿರು ತ್ತಾರಂತೆ).

4. ರಾಮಾನುಜರಿಗಿಂತ ನಿಶ್ಚಿತವಾಗಿಯೂ ಹಿಂದಿನ ಕೆಂಭಾವಿ ಭೋಗಣ್ಣ ಎಂಬ ಶಿವಭಕ್ತನ ಮನೆಗೆ ಶಿವ 'ಹಿರಿಯ ಭಕ್ತ'ನ ರೀತಿಯಲ್ಲಿ ಬಂದನೆಂದು ಕ್ರಿ.ಶ. 1220ರ ಹರಿಹರ ಕವಿಯ ಹೇಳಿಕೆ. ರಾಮಾನುಜರ ಸಮಕಾಲೀನನಾಗಿದ್ದ ಸಕಲೇಶ ಮಾದರಸನಲ್ಲಿ 'ಹಿರಿಯ ಮಾಹೇಶ್ವರ' ದೊರಕುವುದು ಗಮನಾರ್ಹ. ರಾಮಾನುಜರ ಬರಹಗಳಲ್ಲಿ ಎಲ್ಲೂ 'ತಿರುಕುಲ' ಬರುವುದಿಲ್ಲವಾದ್ದರಿಂದ, ಹದಿನಾಲ್ಕನೇ ಶತಮಾನದ ತಮಿಳು ದಾಖಲೆ ಮುಖ್ಯವಾಗುತ್ತದೆ. ಕನ್ನಡದಲ್ಲಿ

ಹಿರಿಯ ಭಕ್ತ, ಹಿರಿಯ ಕುಲ ಎಂಬ ಪದಗಳು ಪ್ರಾಚೀನವಾಗಿ ಸಿಗುವಷ್ಟು ಮತ್ತು ವ್ಯಾಪಕವಾಗಿರುವಷ್ಟು ತಿರುಕುಲ ಪದವು ತಮಿಳಿನಲ್ಲಿ ಇಲ್ಲ. 'ತಿರುಕುಲತ್ತಾರ್' ಎಂಬ ಪದ ಮೇಲ್ಕೋಟೆ ಸಂದರ್ಭದಲ್ಲಿ, ರಾಮಾನುಜರ ಕತೆಯಲ್ಲಿ ಮಾತ್ರ ಬರುತ್ತದೆ. (ಈಚಿನ ಇಂತಹುದೇ ಒಂದೆರಡು ಸಂಸ್ಕೃತ ಕೃತಿಗಳಲ್ಲಿ 'ಶ್ರೀಕುಲದಾಸ' ಎಂಬ ಮಾತು ಬರುತ್ತದೆ).

5. 'ಹಿರಿಯ ಕುಲ' 'ತಿರುಕುಲ'ಗಳು ಇಲ್ಲವೇ ಸ್ವತಂತ್ರವಾಗಿ ಮೂಡಿರಬಹುದು. ಅಥವಾ ತಮಿಳು ಕನ್ನಡದಿಂದ ತೆಗೆದುಕೊಂಡು ಅನುವಾದಿಸಿಕೊಂಡಿರ ಬಹುದು (ತಮಿಳಿನ 'ತೇವಾರ'ವು ಕನ್ನಡದ 'ದೇವಾರ'ದಿಂದ ಬಂದಿರು ವಂತೆ) ತಮಿಳಿನಿಂದ ನಿಶ್ಚಿತವಾಗಿಯೂ ಕನ್ನಡ ತೆಗೆದುಕೊಂಡಿಲ್ಲ. ಏಕೆಂದರೆ, ರಾಮಾನುಜರೇ 'ತಿರುಕುಲ'ಶಬ್ದವನ್ನು ದಲಿತರ ಬಗ್ಗೆ ಬಳಸಿದರೆಂಬುದೇ ಐತಿಹಾಸಿಕವಾಗಿ ಪ್ರಶ್ನಾರ್ಹವಾಗಿರುವಾಗ, ದಕ್ಷಿಣ ಕರ್ನಾಟಕದ ಮೇಲ್ಕೋಟೆ ಯಿಂದ 'ತಿರುಕುಲ' ಶಬ್ದ ಉತ್ತರ ಕರ್ನಾಟಕದ ತುದಿಗೆ ಹೋಗಿ ಅದೇ ಕಾಲದಲ್ಲಿ ಅದು 'ಹಿರಿಯ ಕುಲ'ವೆಂದು ಕನ್ನಡಕ್ಕೆ ಅನುವಾದಗೊಂಡಿತೆಂದು ವಾದಿಸುವುದು ಬಹಳ ಅಸಂಬದ್ಧವಾಗಿ ತೋರುತ್ತದೆ.

6. ತಮಿಳನ್ನೂ ಶ್ರೀವೈಷ್ಣವ ವಾಙ್ಮಯವನ್ನೂ ಬಲ್ಲವರಾದ ವಿದ್ವಾಂಸರು ತೇದಿಸಮೇತ ಮೂಲದಾಖಲೆಗಳನ್ನು ಕೊಟ್ಟು ವಾಸ್ತವವನ್ನು ತೋರಿಸುವು ದಾದರೆ ನಾನು ಸಂತೋಷಿಸುತ್ತೇನೆ. (ಈ ಭಾಗವನ್ನು ಸಿದ್ಧಪಡಿಸುವಲ್ಲಿ ತಿರುಪತಿ, ಮದ್ರಾಸ್, ಬೆಂಗಳೂರಿನ ನಾಲ್ವರು ಶ್ರೀವೈಷ್ಣವ ವಿದ್ವಾಂಸರ ಸಹಕಾರವನ್ನು ಸಹಾಯವನ್ನು ಪಡೆದಿದ್ದೇನೆ. ತಮಿಳು ಮೂಲದ ಎಷ್ಟೋ ಭಾಗಗಳನ್ನೂ ಅವರು ಓದಿ ವಿವರಿಸಿದ್ದಾರೆ. ಅವರಿಗೆಲ್ಲ ನಾನು ಕೃತಜ್ಞ).

## ಲಿಂಗಾಯತ ಚಳವಳಿಯ ಪರಿಣಾಮ–1 : ಮಡಿ, ಮೈಲಿಗೆ

ಲಿಂಗಾಯತ ಚಳವಳಿಯು ಮಡಿ–ಮೈಲಿಗೆ ಭೇದವನ್ನು ತೊಡೆದುದು ಮಾತ್ರವಲ್ಲ, ಮಾಹೇಶ್ವರ–ಹಿರಿಯ ಮಾಹೇಶ್ವರ (ಸ್ಪೃಶ್ಯ ಶಿವಭಕ್ತ–ಅಸ್ಪೃಶ್ಯ ಶಿವಭಕ್ತ)ರ ಮಧ್ಯೆ ಇದ್ದ ಭೇದವನ್ನೇ ತೊಡೆದುಹಾಕಿತು. ಭೇದ ಅಳಿಸಿಹೋದ ಆ ಎರಡೂ ವರ್ಗಗಳ ಮಧ್ಯೆ ವಿವಾಹಗಳು ನಡೆಯುವುದನ್ನು ಪ್ರೋತ್ಸಾಹಿಸಿದುದಂತೂ ಇಡೀ ಭಾರತೀಯ ಸಾಮಾಜಿಕ ಚರಿತ್ರೆಯಲ್ಲಿ ಅನನ್ಯವಾದುದು. ತಿಥಿ, ಗ್ರಹಣ, ಸಂಕ್ರಾಂತಿ, ಏಕಾದಶಿ ವ್ಯತೀಪಾತ, ಶುಭದಿನ, ಅಶುಭದಿನ, ತೀರ್ಥಕ್ಷೇತ್ರ ಇತ್ಯಾದಿಗಳನ್ನು ಯಾವುದನ್ನೂ ನೋಡಬೇಡಿ, ಶಿವನನ್ನು ನೆನೆದ ದಿನವೇ ಶುಭದಿನವೆಂದು ಬಸವಣ್ಣ ಬೋಧಿಸಿದ.[42] ಅವನಿಗಿಂತ ಮುಂಚೆಯೇ ಕೊಂಡಗುಳಿ ಕೇಶಿರಾಜ "ಜಾತಿಯ

42. ಬಸವಣ್ಣನವರ ಷಟ್‌ಸ್ಥಲದ ವಚನಗಳು, ವಚನ 609.

ಹೊಲೆ ಜನನದ ಹೊಲೆ ಪ್ರೇತದ ಹೊಲೆ"ಗಳನ್ನು ಬಿಡುವುದು ಇಪ್ಪತ್ತಾರನೆಯ ಶೀಲವೆಂದು ಬೋಧಿಸಿದ್ದ.[43] ಸೂತಕದ ಬಗ್ಗೆ ಎಲ್ಲ ವಚನಕಾರರೂ ವಿರೋಧ ವಾಗಿಯೇ ಮಾತನಾಡಿದ್ದಾರೆ.[44] ಶಿವಭಕ್ತರಿಗೆ ಸೂತಕಾದಿಗಳಿಲ್ಲವೆಂದು ಸಾನಂದ ಚರಿತ್ರೆ, ದೀಕ್ಷಾ ಬೋಧೆಗಳಲ್ಲೂ[45] ಹೇಳಿದೆ. ಮಡಿ ಮೈಲಿಗೆಗಳನ್ನು ಶಿವಭಕ್ತಿಯ ಎದುರಿನಲ್ಲಿ ತೀರ ಕ್ಷುಲ್ಲಕವೆಂದು ಭಾವಿಸಿದವರಿಗೆ ಸುಜಾತಿ ಅಜಾತಿಗಳ ಭೇದವನ್ನೂ ಕ್ಷುಲ್ಲಕವಾಗಿ ಭಾವಿಸುವುದು ಕಷ್ಟವಾಗಲಿಲ್ಲ.

ಸಾಹಿತ್ಯದ ಭಾಷೆಯೂ ಕೂಡ ಮಡಿ ಮೈಲಿಗೆಗಳಿಂದ ಮುಕ್ತಗೊಂಡದ್ದು ಬಹಳ ಮನನೀಯವಾದ ಸಂಗತಿ. ಶಿಷ್ಟಮಾನ್ಯ ಸಾಹಿತ್ಯದಲ್ಲಿಯೂ ಗಂಭೀರ ಪ್ರಸಂಗಗಳಲ್ಲಿಯೂ ನಿಷೇಧಗಳೆಂದು ಭಾವಿಸಲಾಗುತ್ತಿದ್ದ ಪ್ರತಿಮೆ, ಮಾತುಗಳನ್ನು ವಚನಕಾರರು ನಿಸ್ಸಂಕೋಚವಾಗಿ ಬಳಸಿ ಶಬ್ದ ಭಂಡಾರದಲ್ಲಿ ಮಡಿ ಮೈಲಿಗೆಗಳ ಭೇದವನ್ನು ಒಡೆದು ಹಾಕಿದರು. ಪಂಪನಲ್ಲಿ ಕುಡುಕರ ವಿನೋದ ಪ್ರಸಂಗದಲ್ಲಿ ಬರುವ ಹೆಂಡದ ಮಡಕೆಯ ಪ್ರತಿಮೆ ವಚನಕಾರರಲ್ಲಿ ಭಕ್ತಿಯ ಸಂದರ್ಭದಲ್ಲಿ ಬರಲು ಸಾಧ್ಯವಾಯಿತು. ಶಿವಭಕ್ತ ಮೈಲಿಗೆ ಎಂದು ಭಾವಿಸುವ ಹೆಂಡದ ಮಡಕೆಯ ಹೊರಭಾಗ ಶಿವಭಕ್ತನಾದರೆ, ಹೆಂಡತಿ ಅದೇ ಮಡಕೆಯ ಒಳಭಾಗವಿದ್ದಂತೆ. ಚೌಡಯ್ಯ,[46] ಮಾಚಯ್ಯ, ಉರಿಲಿಂಗ ಪೆದ್ದಿಗಳ ವಚನಗಳನ್ನಾಗಲಿ, ಅಕ್ಕಮ್ಮನ

43. ಕೊಂಡಗುಳಿ ಕೇಶಿರಾಜನ ಕೃತಿಗಳು, ಸಂ. : ಎಂ.ಎಂ. ಕಲಬುರ್ಗಿ, ಹುಬ್ಬಳ್ಳಿ. 1978. ಪು. 66.

44. ಬಸವಣ್ಣನವರ ಷಟ್‌ಸ್ಥಲದ ವಚನಗಳು, ವಚನ 417–"ಆಚಾರವಱಿಯಿರಿ ವಿಚಾರ ವಱಿಯಿರಿ, ಜಂಗಮಸ್ಥಲ ಲಿಂಗ ಕಾಣಿರಯ್ಯಾ. ಜಾತಿಭೇದವಿಲ್ಲ, ಸೂತಕವಿಲ್ಲ. ಅಜಾತಂಗೆ ಕುಲವಿಲ್ಲ..." ಸಕಳೇಶ ಮಾದರಸನ ವಚನಗಳು. ವಚನ 16–"ಶಿವಯೋಗಿ ಭಿಕ್ಷವ ಕೊಂಬಲ್ಲಿ ಜಾತಿ ಸೂತಕವಿಲ್ಲದಿರಬೇಕು."

45. ಸಾನಂದ ಚರಿತ್ರೆ, ಪು. 184; ದೀಕ್ಷಾ ಬೋಧೆ, ಪು. 44.

46. ನೋಡಿ : "ನಮ್ಮ ಮಾದಾರ ಹರಳಯ್ಯನ ಮನೆಯ ಹನ್ನೆರಡು ಜೋಡು ಹಳೆಯ ಪಾದರಕ್ಷೆಗಳನ್ನು ತಂದು ಮುದ್ದು ಮುಖದ ಮೇಲೆ ಶುದ್ಧವಾಗಿ ಹೊಡೆಯೆಂಬಾತ ನಮ್ಮ ಅಂಬಿಗರ ಚೌಡಯ್ಯ"; "ನಾಲ್ಕು ವೇದವನೋದಿದಂತವರ ಮನೆಯ ಬೋನವ ಶಿವ ಭಕ್ತರ ಮನೆಯಲ್ಲಿರುವ ನಾಯಿ ಮೂಸಿ ನೋಡಲಾಗದು. ಸಾಮವೇದಿ ಹೋಗು ತ್ತಿರಲು ಶ್ವಪಚಯ್ಯಗಳು ತಮ್ಮ ಪಾದುಕದಿಂದ 'ಶ್ವಾನೋ ಶ್ರೇಷ್ಠ'ವೆಂದು ಇಕ್ಕಿದೆನು ಮುಂಡಿಗೆಯ, ಎತ್ತಿರೋ ಜಗದ ಸಂತೆಯ ಸೂಳೆಯ ಮಕ್ಕಳು..." ಅಂಬಿಗರ ಚೌಡಯ್ಯನ ವಚನಗಳು, ವಚನ II, ವಚನ 14; "ಬತ್ತಲೆ ಇದ್ದವರೆಲ್ಲ ಕತ್ತೆಯ ಮಕ್ಕಳು, ತಲೆ ಬೋಳಾದವರೆಲ್ಲ ಮುಂಡೆಯ ಮಕ್ಕಳು, ತಲೆ ಜಡೆಗಟ್ಟಿದವರೆಲ್ಲ ಹೊಲೆಯರ ಸಂತಾನ. ಆವ ಪ್ರಕಾರವಾದಡೇನು? ಅಱಿವೆ ಮುಖ್ಯವಯ್ಯಾ, ಆಚಾರವೆ ಪ್ರಾಣವಾದ ರಾಮೇಶ್ವರ ಲಿಂಗದಲ್ಲಿ" – ಅಕ್ಕಮ್ಮ, ಶಿವಶರಣೆಯರ ವಚನಗಳು, ಪು. 528.

ವಚನಗಳನ್ನಾಗಲಿ ಓದಿದರೆ ಬೈಗುಳದ ಮಾತುಗಳ ಮತ್ತು ಮೈಲಿಗೆ ವಸ್ತುಗಳ ಸರಣಿಯನ್ನೇ ಎದುರಿಸುತ್ತೇವೆ. ಸೂಳೆಯ ಮಕ್ಕಳು, ಮುಂಡೆಯ ಮಕ್ಕಳು, ಚಪ್ಪಲಿಯಿಂದ ಹೊಡೆ ಇವೇ ಮೊದಲಾದ ಮಾತುಗಳ ಬಳಕೆಯಲ್ಲಿ ಹಲವರಿಗೆ ಸಂಕೋಚವೇ ಇಲ್ಲ. ಮಾದಿಗ, ಹೊಲೆಯ ಇತ್ಯಾದಿ ಮಾತುಗಳನ್ನು ಅವುಗಳ ಜಾತ್ಯರ್ಥದಲ್ಲಿ ಮಾತ್ರವಲ್ಲದೆ, ಸ್ವಾಭಾವಿಕವಾಗಿ ನಿಂದಾರ್ಥದಲ್ಲಿ ಮಾತ್ರವಲ್ಲದೆ ಅವುಗಳನ್ನು ಆಧ್ಯಾತ್ಮಿಕ ಅರ್ಥದಲ್ಲಿಯೂ ಬಳಸುವುದನ್ನು ನೋಡಬಹುದು. ಉದಾಹರಣೆಗೆ, ಮಧುವಯ್ಯಗಳ ವಚನವೊಂದಕ್ಕೆ ವ್ಯಾಖ್ಯಾನ ಮಾಡುತ್ತ ಮಾದಿಗನ ಮನೆ ಎಂಬ ಶಬ್ದಕ್ಕೆ "ಸರ್ವ ಸೂತಕ ರಹಿತವಾಗಿರ್ಪ" ಎಂದೂ ಅರಿವಿನ ಮಾರಿ ತಂದೆಯ ವಚನವೊಂದರ ಹೊಲತಿ ಶಬ್ದಕ್ಕೆ "ದೇಹ ಭಾವಕ್ಕೆ ಹೊರಗಾಗಿರ್ಪ ನಿಃಕಲ ಚಿಚ್ಛಕ್ತಿಯನೆಂಬುದೀಗ ಊರ ಹೊಱಗಣ ಹೊಲತಿಯ ಎಂಬ ಶಬ್ದಕ್ಕರ್ಥ" ಎಂದೂ ಮೋಳಿಗಯ್ಯನ ವಚನದ ಹೊಲೆಯ ಶಬ್ದಕ್ಕೆ "ಶಿವಾಂಶಿಕನಾದಾತ್ಮನು ಸರ್ವಸೂತಕಮೊಡನೆ ಕೂಡಿ ದೇಹ ಸಂಬಂಧಿಯಾಗಿರ್ದನೆಂಬುದೀಗ ಹೊಲೆಯ ಎಬ ಶಬ್ದಕ್ಕರ್ಥ" ಎಂದೂ ಸಿಂಗಳದ ಸಿದ್ಧಬಸವ ವ್ಯಾಖ್ಯಾನಿಸುವುದನ್ನು[47] ಇಲ್ಲಿ ಉಲ್ಲೇಖಿಸಬಹುದು.

ಸಾಹಿತ್ಯವು ಜೀವನ ಸಂಗಾತಿಯಾದಾಗ, ಪ್ರತಿಭಟನಾತ್ಮಕವಾದಾಗ, ಪ್ರಗತಿಪರವಾದಾಗ ಅನಿವಾರ್ಯವಾಗಿ ಉಂಟಾಗುವ ಪರಿಸ್ಥಿತಿ ಇದು. ಚಳವಳಿಯು ತನ್ನ ಕಕ್ಷೆಯಲ್ಲಿ ಹೊಲೆಯರನ್ನು ಒಳಗೊಂಡಿದ್ದುದು ಭಾಷಿಕ ಮಡಿ ಮೈಲಿಗೆ ಭೇದವನ್ನು ಒಡೆಯುವಲ್ಲಿ ಕಡಮೆ ಸಹಾಯವನ್ನೇನೂ ಮಾಡಿಲ್ಲ.

## ಚಳವಳಿಯ ಪರಿಣಾಮ–2 : ಜೈನಮತದ ಮೇಲೆ

ವಚನಕಾರರ ಕಾಲದಲ್ಲೋ ಅವರ ನೇರ ಬಳಿಕವೋ ಇದ್ದ ಬ್ರಹ್ಮಶಿವನಲ್ಲಿ ಅಂದಿನ ಲಿಂಗಾಯತ ಚಳವಳಿಯು ಜೈನಧರ್ಮದ ಪರಿಸರದಲ್ಲಿ ಎಬ್ಬಿಸಿದ ಅಲೆಗಳನ್ನು ಕಾಣುತ್ತೇವೆ. ಹೊಲೆಯ ಮಾದಿಗರು ಜೈನಧರ್ಮಕ್ಕೆ ಮತಾಂತರಗೊಳ್ಳುತ್ತಿದ್ದ ಸಂಗತಿಯನ್ನು ಬ್ರಹ್ಮಶಿವ ತನ್ನ ಕೃತಿಯಲ್ಲಿ ಹಿಡಿದಿಟ್ಟಿದ್ದಾನೆ. ಹೊಲೆಯ ಶ್ರಾವಕನಾದರೆ (ಜೈನನಾದರೆ) ಹಲವರಲ್ಲಿ ಮಾನ್ಯನಾಗುವಾಗ, ಉತ್ತಮ ಕುಲದವರು ಜೈನನಾದರಂತೂ ಚಿನ್ನಕ್ಕೆ ಕಂಪು ಬಂದಂತೆ ಎನ್ನುತ್ತಾನೆ.[48] ಹೊಲೆಯನು ಜೈನನಾದರೆ ವ್ರತನಿಷ್ಠೆ, ಶುಚಿತ್ವ, ಒಳ್ಳೆಯ ನಡತೆಗಳು ತಾವಾಗಿಯೇ ಬರುತ್ತವೆ.[49] ಮತಿಹೀನನಾದ

---

47. ಸಿಂಗಳದ ಸಿದ್ಧಬಸವನ ಸರ್ವಪುರಾತನರ ಬೆಡಗಿನ ವಚನಗಳು, ಸಂ: ಎಂ.ಎಸ್. ಸುಂಕಾಪುರ. ಧಾರವಾಡ, 1978. ಪು. 67, 103, 758.

48. ಸಮಯ ಪರೀಕ್ಷೆ, ಸಂ: ಬಿ.ಎಸ್. ಕುಲಕರ್ಣಿ. ಧಾರವಾಡ. 1958, 2.41–"ಪೊಲೆಯಂ ಶ್ರಾವಕನಾದೊಡೆ ಪಲರೊಳವಂ ಮಾನ್ಯನಪ್ಪನೆಂದೊಡೆ ಮತ್ತಿಂ ಕುಲಜಂ ಗಡ ಜೈನಂ ಗಡ ಬೆಲೆಯುಂಟೆ ಪೊಂಗೆ ಕಂಪು ದೊರೆಕೊಂಡ ತೆಱಂ."

49. ಅದೇ, 14.103.

ರಾಜನ ಮಗನಾಗಿ ಹುಟ್ಟುವುದಕ್ಕಿಂತ ವ್ರತನಿರತ (ಜೈನಮತವನ್ನು ಅಂಗೀಕರಿಸಿದ) ಹೊಲೆಯನ ಮಗ ಆಗುವುದು ಮೇಲು.[50] ಧರ್ಮದಲ್ಲಿ ಕುಲಹೀನನಿಗೆ ಒಂದು ಬಗೆಯ ಆಚಾರ, ಕುಲಹೀನನಿಗೆ ಇನ್ನೊಂದು ಬಗೆಯದು ಎಂಬುದಿಲ್ಲ.[51] ಹೊಲೆಯನ ಕೈಯ ಚಿನ್ನ ಹೇಗೆ ತಾಮ್ರವಾಗುವುದಿಲ್ಲವೋ ಅಂತೆಯೇ ಅವನು ಆಶ್ರಯಿಸಿದ ಧರ್ಮ (ಜೈನಮತ) ಹೀನವಾಗುವುದಿಲ್ಲ.[52] ಧರ್ಮವು ಚಂದ್ರನ ಕಿರಣದಂತೆ ಹಾಲಿನಂತೆ ಎಲ್ಲರಿಗೂ ತಂಪು, ಎಲ್ಲರಿಗೂ ಸಿಹಿ.[53] ಕುಲಹೀನನಿಗೆ ಮತ್ತು ಕುಲಜನಿಗೆ ಬೇರೆ ಬೇರೆ ರೀತಿಯ ಆಚಾರವನ್ನು ಹೇಳುವುದು ಠಕ್ಕಮತ.[54] ಕುಲಹೀನ, ತೊನ್ನ, ಪರದೇಶಿ, ಬಡವ ('ವಿತ್ತ ಹೀನ'), ಕೊಳಕ ('ಕಿಸಕುಳಿ'), ರೋಗಿ ('ಕುತ್ತಂಗುಳಿ') ಇವರು ಜೈನರಾದರೆ ಇವರನ್ನು ಬಸದಿಗೆ ಒಯ್ದು ಆದರಿಸಬೇಕು.[55] ವಿವೇಕಿಯಾದವನು ಕುಲ ಜಾತಿಯಲ್ಲಿ ನನಗೆ ಸಮನಾರು ಎಂಬ ಮದವನ್ನು ಬಿಟ್ಟು[56] ಎಲ್ಲರೂ ಸಮಾನವೆಂದು ಭಾವಿಸಬೇಕು.

ನಯಸೇನನಲ್ಲಾಗಲಿ ಆ ಮುಂಚಿನ ಇತರ ಜೈನಕೃತಿಗಳಲ್ಲಾಗಲಿ ಅಸ್ಪೃಶ್ಯರ ಮತಾಂತರದ ಸೂಚನೆಗಳಿಲ್ಲದೆ ಇದ್ದಕ್ಕಿದ್ದಂತೆ ಬ್ರಹ್ಮಶಿವನಲ್ಲಿ (ಸು. 1160–80?) ಅಸ್ಪೃಶ್ಯರು ಜೈನರಾಗುವ ಸಂಗತಿ ಕಾಣಿಸಿಕೊಂಡು ಮರೆಯಾಗುವುದು ಅದು ಲಿಂಗಾಯತ ಚಳವಳಿಯ ಪರಿಣಾಮವೆಂದು ಊಹಿಸಲವಕಾಶವಿದೆ. ಇದಕ್ಕೆ ಸೂಚನೆಗಳು ಬ್ರಹ್ಮಶಿವನಲ್ಲೇ ಇವೆ. ಶೈವಧರ್ಮಕ್ಕೆ ಸೇರಿದರೆ ಆಸ್ತಿ, ಧಾನ್ಯ, ಸಂಪತ್ತು ಎಲ್ಲ ದೊರಕುತ್ತವೆ ಎಂದು ಎಲ್ಲರೂ ಶೈವ ಮತವನ್ನು ಪಡೆದುಕೊಳ್ಳುತ್ತಾರೆ; ರಾಜರೂ ಸಾಮಂತರೂ ಶೈವ ಮತವನ್ನು ಮೆಚ್ಚುತ್ತಾರೆ. ಜೈನನಾದರೆ ಬಡತನ ರೋಗಗಳು ಬರುತ್ತವೆ, ಮೈ ಕೊಳಕಾಗುತ್ತದೆ, ಕೃಶವಾಗುತ್ತದೆ; ಮನುಷ್ಯನ ಆಯುಸ್ಸು ಕುಂದುತ್ತದೆ ಎಂದು ಜೈನಮತದತ್ತ ಹೆಚ್ಚು ಜನ ಸುಳಿಯುವುದಿಲ್ಲವೆಂಬ ಮಾತು ಅವನಲ್ಲಿದೆ.[57] ಜೈನಧರ್ಮ ಶೈವಧರ್ಮಗಳ ಪ್ರಶ್ನೆ ಬಂದಾಗ, ಜೈನಧರ್ಮ ಶ್ರೇಷ್ಠವಾದರೆ ಅದರತ್ತ ಜನ ಏಕೆ ಹೋಗುವುದಿಲ್ಲ, ಏಕೆ ಬಹಳ ಜನ ಶೈವರಾಗುತ್ತರೆ ಎಂದು ಹಲವರು

---

50. ಅದೇ, 14.105 – 'ವ್ರತ ಸಚ್ಚರಿತ್ರಹೀನನ್ ಕ್ಷಿತಿಪತಿಯಕ್ಕವನ ತನುಜನಪ್ಪುದರಿಂದಂ ಬ್ರತನಿರತನಪ್ಪ ಪೊಲೆಯನ ಸುತನಪ್ಪುದು ಪುಣ್ಯಮುಭಯಭವಮುಂ ಸಫಲಂ.'
51. ಅದೇ, 15.8.
52. ಅದೇ, 15.10.
53. ಅದೇ, 15.12–13.
54. ಅದೇ, 3.8.
55. ಅದೇ, 4.31 – ಈ ಮನಕಲಕುವ ಅಂಶವು ಬಹು ಗಮನಾರ್ಹ.
56. ಅದೇ, 4.104.
57. ಅದೇ, 13ನೇ ಅಧಿಕಾರ ನೋಡಿ. ಅದರಲ್ಲೂ – 13. 15; 13. 16; 13. 17; 13. 18.

(ಮೂರ್ಖರು) ಪ್ರಶ್ನಿಸುವುದನ್ನು ಬ್ರಹ್ಮಶಿವ ಹೇಳುತ್ತಾನೆ.[58] 'ಜನರಾಗ' (=ಜನಪ್ರಿಯತೆ) ಇರುವುದರಿಂದಲೇ ಶೈವದತ್ತ ಜನ ಹೋಗುತ್ತಿದ್ದಾರೆ. ಇಲ್ಲಿನ ಶೈವ ಧರ್ಮವೆಂದರೆ ಲಕುಲೀಶ–ಪಾಶುಪತ ಮತವೆಂದು ಭಾವಿಸುವುದಕ್ಕಿಂತ ವೀರಶೈವ ಮತವೆಂದು ಭಾವಿಸುವುದೇ ಹೆಚ್ಚು ಉಚಿತ. ಹನ್ನೆರಡನೆಯ ಶತಮಾನದಲ್ಲಿ ಅಸ್ಪೃಶ್ಯರೂ ಸೇರಿದಂತೆ ಬಹುಸಂಖ್ಯೆಯ ಜನ ಸೇರಿದ್ದು ಲಕುಲೀಶ–ಪಾಶುಪತಕ್ಕಲ್ಲ, ವೀರಶೈವಕ್ಕೆ (ಭಾರತೀಯ ಭಕ್ತಿಚಳವಳಿಯ ಸ್ಪರ್ಶಕ್ಕೆ ಒಳಗಾದುದು ವೀರಶೈವವೇ). ಹಾಗಿದ್ದರೆ, ತಮ್ಮ ಮತೀಯರ ಸಂಖ್ಯೆ ಕಡಮೆಯಾಗುತ್ತ ಬಂದುದನ್ನು ಕಂಡು ಅಳುಕಿದ ಜೈನರು ಅಸ್ಪೃಶ್ಯರನ್ನೂ ತಮ್ಮ ಮತಕ್ಕೆ ಸೇರಿಸಿಕೊಂಡರು ಎಂದು ಕಾಣುತ್ತದೆ. ಅಸ್ಪೃಶ್ಯ ಜೈನರು ಉಳಿದ ಜೈನರಿಗೆ ಎಲ್ಲ ರೀತಿಯಿಂದಲೂ ಸಮಾನ ರೆಂದು ಬ್ರಹ್ಮಶಿವ ಹೇಳಿದರೂ, ವಾಸ್ತವವಾಗಿ ಎಷ್ಟು ಜನ ಅಸ್ಪೃಶ್ಯರು ಜೈನರಾದರು, ಅವರನ್ನು ಅಂದಿನ ಜೈನಮತ ಎಷ್ಟರಮಟ್ಟಿಗೆ ಒಪ್ಪಿಕೊಂಡಿತು, ಅವರ ಸಾಮಾಜಿಕ ಸ್ಥಾನ ಎಷ್ಟು ಉತ್ತಮವಾಯಿತು ಎಂಬುದನ್ನು ಹೇಳಲು ಆಧಾರಗಳೊಂದೂ ಮೊರೆಯದಿರುವುದು ದುರದೃಷ್ಟ.

ವೈದಿಕರು ವೈಷ್ಣವರು ಪಾಶುಪತಾದಿಗಳೂ ಬೌದ್ಧ ಸೌರ ಶೈವರೂ ಜೈನ ರಾಗುತ್ತಾರೆಂಬ, ಆದರೆ ಜೈನರು ಮಾತ್ರ ತಮ್ಮ ಮತವನ್ನು ಬಿಟ್ಟು ಬೇರೆ ಬೇರೆ ಕಡೆ ಹೋಗುವುದಿಲ್ಲವೆಂಬ ಬ್ರಹ್ಮಶಿವನ ಮಾತನ್ನು[59] ಅವನಿಗಿಂತ ಹಿಂದಿನ ಮತ್ತು ಸಮಕಾಲೀನ ಶಾಸನಗಳೂ[60] ಅವನ ಕಾಲದ ಕತೆಗಳೂ ಸಮರ್ಥಿಸುವುದಿಲ್ಲ.

## ಲಿಂಗಾಯತ ಚಳವಳಿಯ ಪ್ರಭಾವ–3 : ಮಹಾರಾಷ್ಟದಲ್ಲಿ ಮಾನುಭಾವ ಪಂಥ ಮತ್ತು ಜ್ಞಾನೇಶ್ವರ ಪಂಥ

ಅಖಿಲ ಭಾರತೀಯವಾದ ಭಕ್ತಿ ಚಳವಳಿಯಿಂದ, ಅದರಲ್ಲೂ ತಮಿಳುನಾಡಿನ ಭಕ್ತಿ ಚಳವಳಿಯಿಂದ ಪ್ರೇರಿತವಾದ ಸಮಾಜೋಧಾರ್ಮಿಕ ಸ್ವರೂಪದ ಲಿಂಗಾಯತ ಚಳವಳಿ ಮುಂದಿನ ಶತಮಾನದಲ್ಲಿ ಮಹಾರಾಷ್ಟ್ರದಲ್ಲಿ ಚಕ್ರಧರ ಸ್ಥಾಪಿಸಿದ 'ಮಾನುಭಾವ' (ಮಹಾನುಭಾವ) ಚಳವಳಿಗೆ ಪ್ರೋತ್ಸಾಹ ನೀಡಿದುದು ಇಲ್ಲಿ ಉಲ್ಲೇಖನೀಯ. ಹದಿಮೂರನೇ ಶತಮಾನದ ಈ ಚಳವಳಿ ಜಾತಿಪದ್ಧತಿಯನ್ನು ನಿರಾಕರಿಸಿ, ವೇದಗಳನ್ನೂ ತಳ್ಳಿ ಹಾಕಿತು. ಯೌಗಿಕ ಸಾಧನೆಗೆ ಒತ್ತು ಕೊಡುವ

58. ಅದೇ, 13.16 – "ಜಿನಧರ್ಮದೊಳ್ಳಿತಪ್ಪೊಡೆ । ಜನಮೆಲ್ಲಂ ಪೊರ್ದದೇಕೆ ಮಾಣ್ಬರ್ ಪೇಳಿಂ । ಜನರಾಗಮುಳ್ಳ ಕತದಿಂ । ಜನಮೆಲ್ಲಂ ಶೈವರಪ್ಪರೆಂಬರ್ ಮೂರ್ಖರ್."

59. ಅದೇ, 15, 76–77.

60. ವಿವರಗಳಿಗೆ ನೋಡಿ – ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು. 1981, ಪು. 103–107.

ಇವರು ಕಪ್ಪು ಬಟ್ಟೆ ಧರಿಸಿ ಕೃಷ್ಣನನ್ನು ಪೂಜಿಸುತ್ತಾರೆ.[61] ಇವರು ಸಂಪತ್ತಿನ ಪರಸ್ಪರ ಹಂಚಿಕೆ, ಸರಳ ವಿವಾಹಗಳನ್ನು ಪ್ರತಿಪಾದಿಸಿದರು.

ಅದೇ ಶತಮಾನದ ಉತ್ತರಾರ್ಧದ ಜ್ಞಾನದೇವನು ವಿಠ್ಠಲ ಭಕ್ತಿಪರಂಪರೆಗೆ ಆದ್ಯನೆಂದು ಪರಿಗಣಿತನಾಗಿದ್ದಾನೆ. ಅವನ ಹಿರಿಯ ಸಮಕಾಲೀನನಾದ ನಾಮದೇವ ಒಬ್ಬ ಚಿಪ್ಪಿಗ , ಅವನ ಕಾಲದ ಗೋರಾ ಒಬ್ಬ ಕುಂಬಾರ, ಸಾಮ್ಯತಾ ಒಬ್ಬ ತೋಟಿ, ನರಹರಿ ಒಬ್ಬ ಅಕ್ಕಸಾಲಿ, ಚೋಖಾ ಒಬ್ಬ ಅಸ್ಪೃಶ್ಯ, ಜನಾಬಾಈ ಎಂಬುವಳು ನಾಮದೇವನ ಮನೆಯ ಒಬ್ಬ ಸೇವಕಿ ಇವರೆಲ್ಲರೂ ಶ್ರೇಷ್ಠ ವಿಷ್ಣುಭಕ್ತರು.[62] ತೋಟಿಕುಲದ ಸಾಮ್ಯತಾ ತಾನು ಹೀನಕುಲದವನೆಂದೂ ತನ್ನನ್ನು ಹೀನಕುಲದಿಂದ ಬಿಡುಗಡೆ ಮಾಡಬೇಕೆಂದೂ ವಿಠ್ಠಲನನ್ನು ಬೇಡಿದ್ದಾನೆ. ನಾನು ಬ್ರಾಹ್ಮಣನಲ್ಲ, ನಾನು ಬ್ರಾಹ್ಮಣನಾಗಿದ್ದರೆ ಸಂಧ್ಯಾವಂದನಾದಿಗಳಿಂದ ನಿನ್ನನ್ನು ಒಲಿಸಿಕೊಳ್ಳುತ್ತಿದ್ದೆ, ನನಗೆ ಸದ್ಯ ನಿನ್ನ ದಯೆಯೊಂದೇ ಆಧಾರವೆಂದು ಕಳಕಳಿಯಿಂದ ಕೇಳಿಕೊಂಡಿದ್ದಾನೆ. ಅಸ್ಪೃಶ್ಯ ಜಾತಿಯ ಚೋಖಾ ಮಂಗಳವೇಡೆಯವನು. ಫಂಡರಾಪುರದ ವಿಠ್ಠಲನ ಭಕ್ತನಾಗಿದ್ದರೂ ದೇವಾಲಯದ ಹೊರಗಿನಿಂದ ಮಾತ್ರ ಪ್ರಾರ್ಥಿಸಬಹುದಿತ್ತು. ಅವನು ತನ್ನ ಹೀನಕುಲದ ಬಗ್ಗೆ ತನಗಾದ ಅವಮಾನದ ಬಗ್ಗೆ ದೇವರಲ್ಲಿ ತನ್ನ ವೇದನೆಯನ್ನು ತೋಡಿಕೊಂಡಿದ್ದಾನೆ–"ಜನ ಹೇಳುವರು ಹೋಗು ಹೋಗು ಎಂದು, ದೇವರೆ ನಿನ್ನನ್ನು ಹೇಗೆ ನೋಡಲಿ?", "ದೇವರೇ ಬೇಗ ಬಂದು ಬಿಡಿಸು, ನನ್ನದಲ್ಲದ ತಪ್ಪಿಗೆ ಗುಡಿಯ ಜನ ನನ್ನನ್ನು ಹೊಡೆಯುತ್ತಾರೆ–ನಿನ್ನ ಹಾರವನ್ನು ಕದ್ದೆ ಎಂದು ಹೇಳುತ್ತಾರೆ"; "ನನ್ನ ದೇಹವೇ ಫಂಡರೀ, ಆತ್ಮವೇ ವಿಠ್ಠಲ, ಶಾಂತಿಯೇ ರುಕ್ಮಿಣಿ"; "ಕಬ್ಬು ಡೊಂಕು ಇರಬಹುದು, ರಸ ಡೊಂಕಲ್ಲ; ಬಿಲ್ಲು ಡೊಂಕಿರಬಹುದು, ಬಾಣ ಡೊಂಕು ಅಲ್ಲ; ನದಿ ಡೊಂಕು ಇರಬಹುದು, ನೀರು ಡೊಂಕು ಅಲ್ಲ; ಚೋಖಾ ಹೊಲೆಯನಿರಬಹುದು, ಹೃದಯ ಡೊಂಕು ಅಲ್ಲ".[63] ಚೋಖಾ ಕ್ರಿ.ಶ. 1338ರಲ್ಲಿ ತೀರಕೊಂಡನೆಂದು ಹೇಳುತ್ತಾರೆ. ಗೋಡೆ ಉರುಳಿ ಎಲ್ಲರ ಜೊತೆ ಅವನು ಸತ್ತು, ಅವನ ಎಲುಬುಗಳನ್ನು ಆರಿಸಿ ಫಂಡರಾಪುರಕ್ಕೆ ತರಲು ಅವು ಎಲ್ಲರ ಎಲುಬುಗಳೊಡನೆ ಮಿಶ್ರಣವಾಗಿ ಅವನ ಎಲುಬುಗಳನ್ನು ಬೇರ್ಪಡಿಸುವುದು ಕಷ್ಟವಾದಾಗ, ಒಳಗಿನಿಂದ ವಿಷ್ಣುನಾಮ ಕೇಳಿಬರುವ ಎಲುಬುಗಳನ್ನು ಮಾತ್ರ

---

61. ಮಹಾರಾಷ್ಟ್ರದ ಈಗಿನ 'ಮಾನುಭಾವ' ಪಂಥದ ಅನುಯಾಯಿಗಳು ವರ್ಣ ವ್ಯವಸ್ಥೆ, ವೇದ, ಆಶ್ರಮ ವ್ಯವಸ್ಥೆಗಳಿಗೆ ತಾವು ಬದ್ಧವೆಂದು ಹೇಳಿಕೊಳ್ಳುತ್ತಾರೆ. Ranade : Pathway to God in Marathi Literature.

62. ಅದೇ, ಪು. 159.

63. ಅದೇ, ಪು. 161 – ಬೇಂದ್ರೆಯವರ "ಕಬ್ಬಿನ ಗಣೆ ಡೊಂಕು..." ಎಂಬ ಪದ್ಯ ಇಲ್ಲಿಂದ ಪ್ರೇರಿತವೆಂಬುದು ಸ್ಪಷ್ಟ.

ಆರಿಸುವಂತೆ ಸೂಚನೆ ಬಂದು ಹಾಗೆ ಮಾಡಲಾಯಿತೆಂದು ಕತೆಗಳಿವೆ. ಹದಿನೈದನೇ ಶತಮಾನದ ಸೇನಾ ಎಂಬ ಕ್ಷೌರಿಕನೂ ಕನ್ಹೋಪಾತ್ರಾ ಎಂಬ ದೇವದಾಸಿ[64]ಯೂ ಅದೇ ಭಕ್ತಿ ಪಂಥಕ್ಕೆ ಸೇರಿದ್ದರು. ಒಟ್ಟು 'ಮಾನುಭಾವ' ಎಂಬ ಹೆಸರು (ವೀರಶೈವರ 'ಅನುಭಾವ' ಗಮನಿಸಿ), ಅದರ ಮತ್ತು ಜ್ಞಾನೇಶ್ವರ ಪಂಥದ ಭಕ್ತಿ ಚಳವಳಿಯಲ್ಲಿ ಎಲ್ಲ ವರ್ಗದ ಜನರು ತೊಡಗಿಸಿಕೊಂಡಿದ್ದು ಇವೆಲ್ಲ ಲಿಂಗಾಯತ ಚಳವಳಿಯ ಪ್ರಭಾವವನ್ನು ಸೂಚಿಸುತ್ತವೆ.

ಮಹಾರಾಷ್ಟ್ರದ ಭಕ್ತಿ ಸಂಪ್ರದಾಯದಲ್ಲಿ ಎಲ್ಲರ ಸಮಾನತೆ ಎಂಬುದು 'ಆಧ್ಯಾತ್ಮಿಕ ಸಮಾನತೆ'ಯೇ ಹೊರತು, 'ಸಾಮಾಜಿಕ ಸಮಾನತೆ' ಅಲ್ಲ. ಲಿಂಗಾಯತ ಚಳವಳಿ ಆಧ್ಯಾತ್ಮಿಕ ಸಮಾನತೆಯ ಜೊತೆಗೆ ಅಂತರ ಜಾತೀಯ ಮದುವೆಗಳ ಮೂಲಕ ಸಾಮಾಜಿಕ ಸಮಾನತೆಯನ್ನೂ ಸಾರಿತು, ಆಚರಿಸಲು ಯತ್ನಿಸಿತು; ಲಿಂಗಾಯತ ಚಳವಳಿ, ಆ ಕಾರಣಕ್ಕಾಗಿಯೇ ಸಮಾಜೋಧಾರ್ಮಿಕ ಚಳವಳಿ ಎಂದು ಕರೆಯಿಸಿಕೊಳ್ಳಲು ಅರ್ಹವಾಗುತ್ತದೆ.

## ಚಳವಳಿಯ ಪರಿಣಾಮ-ದೇವಾಲಯದ ನಿರಾಕರಣೆ

ಮತವು ಟೈಲರ್ ಪ್ರಕಾರ, "ಅಗೋಚರ ಶಕ್ತಿಗಳಲ್ಲಿ ನಂಬಿಕೆ" (the belief in spiritual beings). ಡುರ್ಕೈಮ್ ಪ್ರಕಾರ, ಮತದಿಂದಲೇ ಮನುಷ್ಯ ಜನಾಂಗದ ಎಲ್ಲ ಬದಲಾವಣೆಗಳು, ಸಾಮಾಜಿಕ ಚಟುವಟಿಕೆಯ ಎಲ್ಲ ಆವಿಷ್ಕಾರಗಳು, ಕಾನೂನು, ನೀತಿ, ಕಲೆ ವಿಜ್ಞಾನ, ಆಡಳಿತ ಪ್ರಕಾರಗಳು ಇತ್ಯಾದಿ. ಆರಂಭದಲ್ಲಿ ಎಲ್ಲವೂ ಮತೀಯ ವಾಗಿತ್ತು. ಏಕಪ್ರಕಾರವಾದ ಬಾಳನ್ನು ನಡಸುತ್ತ ಆಗಾಗ್ಗೆ ಒಟ್ಟು ಸೇರಿದ ಅನಾಗರಿಕ ಜನರ ಸಾಮೂಹಿಕ ಉದ್ರೇಕದಲ್ಲಿ (euphoria) ಮನುಷ್ಯನ ಮತಾನುಭವದ ಮೂಲವಿದೆ. ಮನುಷ್ಯ ಒಟ್ಟಿಗೆ ಸೇರಲು ಮತ ಸಹಾಯಕ. ರಿಚುಯಲ್ ಮತ್ತು ಇತರ ಆಚರಣೆಗಳ ಉದ್ದೇಶ ಸಾಮೂಹಿಕ ತೊಡಗುವಿಕೆಗೆ ಸಾಧಕವಾಗುವುದು ಮತ್ತು ಸಾಮೂಹಿಕ ನಡಾವಳಿಗೆ ಒಪ್ಪಿಗೆ ಮುದ್ರೆಯನ್ನು ಹಾಕುವುದು. ಮತಾನುಭವವು ಮನುಷ್ಯನ ಬದುಕಿನಲ್ಲಿ ತನ್ನ ನಡತೆಯನ್ನು ಹೊಂದಿಸಿಕೊಳ್ಳುವುದಕ್ಕೆ ಅನುಕೂಲ ವಾತಾವರಣವನ್ನು ನಿರ್ಮಿಸುತ್ತದೆ.[65] ಮನುಷ್ಯನು ಸಂಕೀರ್ಣವಾಗುತ್ತಾ ಹೋಗುವ

64. ಮಂಗಳವೇಢೆಯ ಈ ಸುಂದರಿಗೆ ವಿಠೋಬನಲ್ಲಿ ಮಾತ್ರ ಸೌಂದರ್ಯವು ಕಾಣಿಸಿತ್ತು. ಬೀದರಿನ ರಾಜ ತನ್ನ ಮುಂದೆ ನರ್ತಿಸಲು ಹೇಳಿಕಳುಹಿಸಿದಾಗ ದೇವರ ಅಡಿಯಲ್ಲಿ ಪ್ರಾಣ ಬಿಟ್ಟಳೇ ಹೊರತು ಮನುಷ್ಯನ ಮುಂದೆ ನರ್ತಿಸಲಿಲ್ಲ.

65. "The function of both ceremonialism and ritual is essentially to provide a collective group participation, in the solemnization of collective behaviour, to yield a collective sense of the importance of that behaviour" – Ashley Montagu: Man, his first million years. Signet Books. 1964. p. 166.

ಪ್ರಪಂಚದಲ್ಲಿ ಮತಾನುಭವವನ್ನು ಬೆಳೆಸಿಕೊಳ್ಳುತ್ತ ಆಳಗೊಳಿಸಿಕೊಳ್ಳುತ್ತ, ಅತೀತ ಶಕ್ತಿಯೊಡನೆ ಅನುಸಂಧಾನ ಮಾಡುತ್ತಲೇ ಸಹಜೀವಿಗಳ ಜೊತೆಗೂ ಅನುಸಂಧಾನ ಮಾಡುವುದು ಮುಖ್ಯವೆಂದೂ ತನ್ನ ಜೊತೆಯವರ ಜೊತೆ ನೈತಿಕವಾಗಿ ನಡೆದುಕೊಳ್ಳುವುದು ಅಗತ್ಯವೆಂದೂ ಗುರುತಿಸುತ್ತಾನೆ.[66] ಮತದಲ್ಲಿ ಸಾಮೂಹಿಕ ನಡವಳಿಕೆಯ ಪ್ರಾಧಾನ್ಯ ಇದರಿಂದ ಗೋಚರವಾಗುತ್ತದೆ. "ಒಬ್ಬ ಕ್ರಿಶ್ಚಿಯನ್ ಕ್ರಿಶ್ಚಿಯನ್ ಅಲ್ಲವೇ ಅಲ್ಲ" ಎಂಬ ಹೇಳಿಕೆ ಅರ್ಥಪೂರ್ಣವಾದುದು.

ಮಧ್ಯಕಾಲೀನ ಭಾರತದ ಭಕ್ತಿಚಳವಳಿಯ ಕೇಂದ್ರ ದೇವಾಲಯವಾಯಿತು. ಏಕೆಂದರೆ ಅಲ್ಲಿ ಮನುಷ್ಯ ಇತರ ಮನುಷ್ಯರೊಡನೆ ಬೆರೆಯುವ, ತನ್ನ ಅನುಭವ ನಂಬಿಕೆಗಳನ್ನು ಹೊಸತುಗೊಳಿಸಿಕೊಳ್ಳುವ ಅಥವಾ ದೃಢಪಡಿಸಿಕೊಳ್ಳುವ, ತನ್ಮೂಲಕ ಬೆಳೆಸಿಕೊಳ್ಳುವ ಅವಕಾಶ ದೊರಕುತ್ತಿತ್ತು. ಹನ್ನೆರಡನೆಯ ಶತಮಾನದ ಹೊತ್ತಿಗೆ ಕರ್ನಾಟಕದ ದೇವಾಲಯ ತನಗೆ ರಾಜರಿಂದ, ಮಂತ್ರಿ ವರ್ತಕರಿಂದ ದೊರೆತ ಅಪಾರ ದತ್ತಿಗಳನ್ನು ಹೊಂದಿ, ಜಟಿಲ ರಿಚುಯಲ್‌ಗಳನ್ನು ಬೆಳೆಸಿಕೊಂಡು ಸಾಮಾಜಿಕವಾಗಿ ಪ್ರತಿಷ್ಠಿತ ಸ್ಥಾನವನ್ನು ಪಡೆದಿದ್ದಿತು. ರಾಜನಿಗೆ ದೇವಾಲಯದ ಬ್ರಾಹ್ಮಣನ ಬೆಂಬಲ ಅಗತ್ಯವಾಗಿದ್ದಿತು. ಡಿ.ಡಿ. ಕೋಶಾಂಬಿ ತಮ್ಮ ಒಂದು ಕೃತಿಯಲ್ಲಿ ಪ್ರಭುತ್ವ ಮತ್ತು ಭಕ್ತಿ ಚಳವಳಿಗಳ ಪರಸ್ಪರ ಸಂಬಂಧವನ್ನು ಕುರಿತು ವಿಚಾರ ಮಾಡಿದ್ದಾರೆ.[67] ರಾಜನ ಅಧಿಕಾರ ಭದ್ರವಾಗಬೇಕಾದರೆ, ಕೃಷಿಕನು ಜಮೀನ್ದಾರನಿಗೆ, ಜಮೀನ್ದಾರನು ಪಾಳೇಗಾರನಿಗೆ, ಪಾಳೇಗಾರನು ಸಾಮಂತನಿಗೆ, ಸಾಮಂತನು ರಾಜ ಅಥವಾ ಚಕ್ರವರ್ತಿಗೆ ನಿಷ್ಠೆಯಿಂದ ಸಂಬಂಧಿತವಾಗಿರಬೇಕು. ಆಗ ಮಾತ್ರ ರಾಜನ ಅಪ್ಪಣೆ ಮೇಲಿನಿಂದ ಕೆಳಗಿನವರೆಗೆ ಸಂಚರಿಸಿ ಕೆಲಸ ಮಾಡುತ್ತದೆ. ಈ ಬಗೆಯ ಸಮಾಜವು ಸ್ಥಿರವಾಗಬೇಕಾದರೆ ಭಕ್ತಿಯನ್ನು ಪ್ರತಿಪಾದಿಸುವ ಮತದ ಅಗತ್ಯವಿರುತ್ತದೆ. ಭಕ್ತಿಪ್ರಧಾನ ಮತವು ಅನುಯಾಯಿಗಳಿಂದ ನಿಷ್ಠೆಯನ್ನು ನಿರೀಕ್ಷಿಸುವುದೇ ಹೊರತು ಪ್ರಶ್ನೆಯನ್ನಲ್ಲ; ಸವಾಲನ್ನಂತೂ ಖಂಡಿತ ಅಲ್ಲ. ಕೋಸಾಂಬಿ ಪ್ರಕಾರ, ಅರಮನೆ-ದೇವಾಲಯ, ರಾಜ-ದೈವ ಎರಡೂ ಅಭಿನ್ನಗಳು. ಪ್ರಭುತ್ವ ಬ್ರಾಹ್ಮಣ್ಯಗಳು ಒಟ್ಟಿಗೆ ಲಾಭದಾಯಕವಾಗಿ ಸೌಹಾರ್ದದಿಂದ ಬದುಕಬಲ್ಲವು.

---

66. "Everywhere the religious experience creates the atmosphere and attitudes enabling human beings to regulate their conduct in the world in which they find themselves. With the development and deepening of the religious experience within the matrix of an increasingly complex social world, human beings begin to understand that the communion with the supernatural powers must be extended to the communion with ones fellow human beings, and finally to a moral obligation of fellowship that is universal." ಅದೇ, p. 167.

67. D.D. Kosambi : Myth and Reality, Bombay. 1962. pp. 31-32.

ಲಿಂಗಾಯತ ಭಕ್ತಿ ಚಳವಳಿಯಲ್ಲಿನ ವೈಶಿಷ್ಟ್ಯ ಇಲ್ಲಿ ಎದ್ದುಕಾಣುತ್ತದೆ. ಉಳಿದೆಲ್ಲ ಭಕ್ತಿ ಚಳವಳಿಗಳು ಜಾತಿಗಳ ಆಧ್ಯಾತ್ಮಿಕ ಸಮಾನತೆಯನ್ನು ಒಪ್ಪಿಕೊಳ್ಳುತ್ತವೆ. ಭಕ್ತಿಯಲ್ಲಿ, ತತ್ವಶಃ ಬ್ರಾಹ್ಮಣ ಹೊಲೆಯ ಇಬ್ಬರೂ ಒಂದೇ ಎಂಬುದು ಭಾವನೆಯ ಮಟ್ಟದಲ್ಲಿರುವವರೆಗೆ ಪ್ರಭುತ್ವಕ್ಕೆ ಅಪಾಯ ಕಡಿಮೆ. ಭಕ್ತಿಯ ನೆಪದಲ್ಲಿ ಕೆಳವರ್ಗ ದವರ ಪ್ರಶ್ನಿಸುವ ಪ್ರವೃತ್ತಿಯನ್ನು ಅದುಮಿಡಲು ಸಾಧ್ಯ. ಲಿಂಗಾಯತ ಚಳವಳಿ ಆಧ್ಯಾತ್ಮಿಕ ಸಮಾನತೆಯ ಜೊತೆ ಜಾತಿಶ್ರೇಣಿಯ ಸಾಮಾಜಿಕ ಸಮಾನತೆಯನ್ನೂ (social democracy as against spiritual democracy) ಎತ್ತಿ ಹಿಡಿದಾಗ ಸಂಪ್ರದಾಯದ ಕಣ್ಣು ಕೆಂಪಾಯಿತು, ರಾಜನ ದೃಷ್ಟಿ ಅದರತ್ತ ಹೋಯಿತು. ಉಳಿದ ಭಕ್ತಿ ಚಳವಳಿಗಳಿಗೂ ಲಿಂಗಾಯತ ಚಳವಳಿಗೂ ಇರುವ ಈ ಬಹುಮುಖ್ಯ ವ್ಯತ್ಯಾಸವನ್ನು ನಾವು ಮನಗಾಣುವುದು ಅತ್ಯಂತ ಅಗತ್ಯ. ಭಕ್ತಿ ಚಳವಳಿಗಳಿಗೆ ಉಗಮವೂ ಕೇಂದ್ರವೂ ಪ್ರೇರಕ ಶಕ್ತಿಯೂ ಆಗಿದ್ದ ದೇವಾಲಯವನ್ನು ವಿರೋಧಿಸಿದ್ದು ಇನ್ನೊಂದು ವ್ಯತ್ಯಾಸ.

ಅದರ ಇತಿಹಾಸಕ್ಕೆ, ಅದು ಎಷ್ಟೇ ಸ್ವಾರಸ್ಯವಾಗಿದ್ದರೂ, ನಾನಿಲ್ಲಿ ಹೋಗುವುದಿಲ್ಲ. ವರ್ಣ ಅಥವಾ ಜಾತಿ ವ್ಯವಸ್ಥೆಯಲ್ಲಿ ಬ್ರಾಹ್ಮಣನನ್ನು ಕೇಂದ್ರವಾಗಿಟ್ಟುಕೊಂಡು ಉಳಿದ ಜಾತಿಗಳ ಸ್ಥಾನವನ್ನು ನಿರ್ಣಯಮಾಡಲು ಬ್ರಾಹ್ಮಣನನ್ನು ಬಳಸಿಕೊಳ್ಳುವಂತೆ ದೇವಾಲಯವನ್ನೂ ಬಳಸಿಕೊಂಡರು. ಉದಾಹರಣೆಗೆ ಗರ್ಭಗುಡಿ ಒಳಕ್ಕೆ, ಸುಕನಾಸಿಗೆ, ನವರಂಗಕ್ಕೆ, ಮುಖಮಂಟಪಕ್ಕೆ ಪ್ರಾಕಾರದೊಳಕ್ಕೆ ಯಾರು ಯಾರು ಬರಬಹುದು, ಬರಬಾರದು ಎಂಬುದು. ಮತದ ಪ್ರಜಾಪ್ರಭುತ್ವೀಕರಣವಾಗಬೇಕಾದರೆ ದೇವಾಲಯವನ್ನೂ, ಅದರ ರಿಚುಯಲ್ ಜಾಲವನ್ನೂ ಒಡೆಯುವುದು ಬಸವನಿಗೆ ಅಗತ್ಯವಾಗಿರಬಹುದು. "ಉಳ್ಳವರು ಶಿವಾಲಯವ ಮಾಡುವರು..." ಎಂಬ ವಚನದಲ್ಲಿ ಬಸವಣ್ಣ ದೇವಾಲಯವನ್ನು ವಿರೋಧಿಸಿದರೂ ದೇವಾಲಯ ತತ್ವವನ್ನು ವಿರೋಧಿಸಲಿಲ್ಲ, ದೇವಾಲಯವನ್ನು ಮನುಷ್ಯನ ದೇಹಕ್ಕೆ ಸ್ಥಳಾಂತರಿಸಿದ. ಹೀಗೆ ದೇವಾಲಯವನ್ನು ನಿರಾಕರಣೆ ಮಾಡುವಲ್ಲಿ ಮೂಲಪ್ರೇರಣೆ ಅಸ್ಪೃಶ್ಯ ಜನರಿಂದ ಬಂದಿದೆಯೆಂಬುದು ನನ್ನ ಒಂದು ಪ್ರಮೇಯ (hypothesis). ದೇವಾಲಯ ಅಸ್ಪೃಶ್ಯ ರನ್ನು ಬಹಿಷ್ಕರಿಸಿದರೆ ದೇವಾಲಯವನ್ನೇ ಅಂದಿನ ಲಿಂಗಾಯತ ಚಳವಳಿ ಬಹಿಷ್ಕರಿಸಿತು ಎನ್ನುವುದೊಂದು ನನಗೆ ಪ್ರಿಯವಾದ ವಾದಸರಣಿ.

ಇದರ ಪರಿಣಾಮವೇನಾಗಿರಬಹುದು? ಜನ ತಮ್ಮ ಧಾರ್ಮಿಕ ನಂಬಿಕೆಯ ಸಂವರ್ಧನೆಗಾಗಿ ಎಲ್ಲಿ ಸೇರುತ್ತಿದ್ದರು? 'ಅನುಭವ ಮಂಟಪ'ದಲ್ಲಿ ಎನ್ನುವುದು ತೀರ ಸರಳವಾದ ಉತ್ತರವಾಗುತ್ತದೆ. 'ಅನುಭವ ಮಂಟಪ'ವೆಂಬುದೊಂದು ಅಧಿಕೃತ ವ್ಯವಸ್ಥೆಯಾಗಿ ಇರಲಿಲ್ಲವೆಂಬ ನನ್ನ ವಾದ ಇದ್ದೇ ಇದೆ. ಒಂದು ವೇಳೆ ಇದ್ದರೂ, ಹಳ್ಳಿ ಹಳ್ಳಿಗಳಲ್ಲಿನ ಜನ ಏನು ಮಾಡುತ್ತಿದ್ದರು? ಆ ಕಾರಣ, ಆಯಾ ಊರಿನ

ಪುರೋಹಿತ–ಗುರು–ಜಂಗಮನು ಅಂತಹ ಸಾಮೂಹಿಕ ಧಾರ್ಮಿಕ ಸಭೆಗಳಿಗೆ ಕೇಂದ್ರವಾಗಿ ಪರಿಣಮಿಸಿ, ಅವನು ಕೆಲಕಾಲವಾದರೂ ದೇವಾಲಯದ ದೇವರ ಸ್ಥಾನ ದಲ್ಲಿದ್ದಿರಬೇಕೆಂಬ ಊಹೆಗೆ ಎಡೆಗೊಡುತ್ತದೆ. ಅರ್ಥಾತ್, ಜನ ಒಂದೆಡೆ ಸೇರಲು ನಿಮಿತ್ತವಾಗಿರಬಹುದು. ಉತ್ತರ ಕರ್ನಾಟಕದ 'ಹಿರೇಮಠ' ಪರಂಪರೆಗೆ ಇಲ್ಲಿ ಉತ್ತರ ದೊರೆಯಬಹುದು.

ದೇವಾಲಯವನ್ನು ಬಹಿಷ್ಕರಿಸಿದುದನ್ನು ಲಿಂಗಾಯತ ಮತ ಪೂರ್ತಿ ಅರಗಿಸಿ ಕೊಳ್ಳಲು ಸಾಧ್ಯವಾಗಲಿಲ್ಲ. ಕ್ರಮೇಣ ಆ ಮತವು ದೇವಾಲಯವನ್ನು ಒಪ್ಪಿಕೊಂಡಿತು; ದೇವಾಲಯದ ಪಕ್ಕದಲ್ಲಿ ಹಿರೇಮಠವೂ ತನ್ನ ಪ್ರಾಧಾನ್ಯವನ್ನು ಉಳಿಸಿಕೊಂಡಿತು.

## ಆಂದೋಲನ ಮತ್ತು ಸಾಮಾಜಿಕ ಮೇಲೇರು

ಜೇಮ್ಸ್ ಸಿಲ್ವರ್‌ಬರ್ಗ್ ಎಂಬ ಸಮಾಜವಿಜ್ಞಾನಿ ಭಾರತೀಯ ಜಾತಿ ವ್ಯವಸ್ಥೆಯು ಜಡ, ಸ್ಥಾವರ, ಕೇವಲ ಶ್ರೇಣೀಕೃತ, ಸಮಾನತಾತತ್ವವಿರೋಧಿ ಎಂಬು ದನ್ನು ಹೇಳುತ್ತ ಬಂದಿರುವುದನ್ನು ತಪ್ಪಿಸಬೇಕೆಂದೂ ಅಲ್ಲಿಯೂ ಚಲನೆ, ತಿಕ್ಕಾಟ, ಬದಲಾವಣೆಗಳು ಕಾಣಿಸಿವೆಯೆಂಬುದನ್ನೂ ಗುರುತಿಸುವುದು ಅವಶ್ಯವೆಂದಿದ್ದಾನೆ.[68] ಇವು ಮಧ್ಯಕಾಲೀನ ಕರ್ನಾಟಕಕ್ಕೆ ಬಹಳವಾಗಿ ಅನ್ವಯವಾಗುವ ಮಾತುಗಳೆಂಬು ದನ್ನು ಹೇಳಬೇಕಾಗಿಲ್ಲ. ಲಿಂಗಾಯತ ಭಕ್ತಿ ಚಳವಳಿ ಅಥವಾ ಸಮಾಜೋಧಾರ್ಮಿಕ ಆಂದೋಲನ ಅಸ್ಪೃಶ್ಯರನ್ನು ಶಿವಭಕ್ತರಾಗಿ ಸ್ಥಳಾಂತರಿಸಿದುದಲ್ಲದೆ ಅವರಲ್ಲಿ ಸಾಮಾಜಿಕ ಮೇಲೇರನ್ನೂ ಉಂಟು ಮಾಡಿತೆಂಬುದಕ್ಕೆ ಹಲವು ಸಾಕ್ಷ್ಯಾಧಾರಗಳನ್ನು ಹಿಂದೆ ಒದಗಿಸಿದ್ದೇನೆ. ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಅಕ್ಕಮ್ಮರಂತಹ ಶೂದ್ರರು ಮಾತನಾಡುವ ರೀತಿ, ಪರಂಪರಾಗತ ಮೌಲ್ಯಗಳನ್ನು ಪ್ರಶ್ನಿಸುವಲ್ಲಿ ಅವುಗಳಿಗೆ ಸವಾಲುಹಾಕುವಲ್ಲಿ ತೋರಿಸುವ ನಿರ್ಭೀತಿ ಇವು ಅವರಲ್ಲಿ ಉಂಟು ಮಾಡಿದ ಒಳ ಬದಲಾವಣೆಯ ಸ್ಪಷ್ಟ ಸೂಚನೆಗಳು. ಭಕ್ತಿಯ ಚೌಕಟ್ಟಿನಲ್ಲಿ ಉಳಿದ ಎಲ್ಲ ಜಾತಿಗಳ ಜೊತೆ ಸಾಮಾಜಿಕ ಸಮಾನತೆಯನ್ನು ಪಡೆದ ಅಸ್ಪೃಶ್ಯರ ಬರಹಗಳಲ್ಲಿ ಆಧ್ಯಾತ್ಮಿಕ ಮುಖ್ಯವಾಗಿದ್ದರೆ, ಅದೇ ಪ್ರತಿಮೆಗಳು ಕಾಣಿಸಿಕೊಂಡಿದ್ದರೆ ಅದಕ್ಕೆ "ಸಂಸ್ಕೃತೀಕರಣ" (Sanskritisation) ಕಾರಣ. ಎಂ.ಎನ್. ಶ್ರೀನಿವಾಸ ಪ್ರಕಾರ ಸಂಸ್ಕೃತೀಕರಣವೆನ್ನುವುದು 'ಕೆಳಗಿನ' ಜಾತಿ, ಬುಡಕಟ್ಟು ಅಥವಾ ಯಾವುದೇ ಗುಂಪು ಮೇಲ್ಜಾತಿಯ, ಅದರಲ್ಲೂ 'ದ್ವಿಜ' ಜಾತಿಯ ಆಚರಣೆಗಳು, ರಿಚುಯಲ್ಲು, ನಂಬಿಕೆ, ಆದರ್ಶ ಜೀವನ ವಿಧಾನಗಳನ್ನು ಸ್ವೀಕರಿಸುವ ಒಂದು ಪ್ರಕ್ರಿಯೆ. ಒಂದು ಗುಂಪಿನ ಸಂಸ್ಕೃತೀಕರಣವು ಸ್ಥಳೀಯ ಜಾತಿಶ್ರೇಣಿಯಲ್ಲಿ ಆ

---

68. (Ed) James Silverberg : Social Mobility in the Caste System in India. Hague. 1968. Introd.

ಗುಂಪಿನ ಸ್ಥಾನವನ್ನು ಸಾಮಾನ್ಯವಾಗಿ ಮೇಲೆತ್ತುತ್ತದೆ. ಸಾಧಾರಣವಾಗಿ ಅಂತಹ ಮೇಲೇರು ಆ ಗುಂಪಿನ ಆರ್ಥಿಕ ಅಥವಾ ರಾಜಕೀಯ ಪ್ರಗತಿಯನ್ನು ಒಳಗೊಳ್ಳುತ್ತದೆ; ಅಥವಾ ಹಿಂದೂ ಧರ್ಮದ 'ಹಿರಿ ಸಂಪ್ರದಾಯ'ದ ತೀರ್ಥಕ್ಷೇತ್ರ, ಮಠ, ಮತಾಂತರಗೊಳಿಸುವ ಗುಂಪು ಇಂತಹ ಯಾವುದಾದರೂ ಉಗಮಸ್ಥಾನವೊಂದರ ಜೊತೆ ಸಂಪರ್ಕವನ್ನು ಪಡೆದು ತಾನೊಂದು ಮೇಲಿನ ಗುಂಪು ಎಂಬ ಸ್ವಯಂಪ್ರಜ್ಞೆಯನ್ನೂ ಉಂಟು ಮಾಡುತ್ತದೆ.[69] ಎಂ.ಎನ್. ಶ್ರೀನಿವಾಸರ ಸಂಸ್ಕೃತೀಕರಣ ಎಲ್ಲ ಅಭಿವೃದ್ಧಿಶೀಲ ದೇಶಗಳಲ್ಲೂ, ಚಲನೆ ಇರುವ ಎಲ್ಲ ಸಮಾಜಗಳಲ್ಲೂ, ಅದರಲ್ಲೂ 'ಸ್ಥಿರ'ಕ್ಕೆ (Static) ವಿರುದ್ಧವಾದ 'ಸ್ಥಿತ್ಯಂತರ' (Changing, Dynamic) ಸಮಾಜದಲ್ಲಿ ಕಾಣಿಸಿಕೊಳ್ಳುವ ಸಾಮಾಜಿಕ ಸಂದರ್ಭ. ಹೊಲೆಯರು ಇತರ ಲಿಂಗವಂತರಂತೆ ಸಸ್ಯಹಾರಿಗಳಾದುದು, ವಿಭೂತಿ ಲಿಂಗಗಳನ್ನು ಧರಿಸಿದುದು, ಅವರಂತೆ ತಾವೂ ಆಧ್ಯಾತ್ಮದ ಮಾತನಾಡಿದುದು, ಅವರ ಭಾಷೆ ಶೈಲಿ ಉಕ್ತಿಗಳನ್ನು ಬಳಸಿದುದು ಇವೆಲ್ಲ ಸಂಸ್ಕೃತೀಕರಣದ ಚಿಹ್ನೆಗಳು. ಇಲ್ಲಿ 'ಕೆಳ' ಅಸ್ಪೃಶ್ಯರಿಗೆ ಆದರ್ಶ ಉಳಿದ ಸವರ್ಣೀಯ ಭಕ್ತರು; ಅವರ ಜೀವನವನ್ನು ಅಸ್ಪೃಶ್ಯ ಶಿವಭಕ್ತರು ಅನುಕರಿಸಿದರು ಅಥವಾ ಅನುಸರಿಸಿದರು. ಇಲ್ಲಿಯ ಸಂಸ್ಕೃತೀಕರಣದಲ್ಲಿ ಇಡೀ ಅಸ್ಪೃಶ್ಯ ಜನಾಂಗ ಪಾಲ್ಗೊಂಡಿತೆಂಬುದು ಸಂದೇಹಾಸ್ಪದ. ಮತಾಂತರಿಸುವ ಧರ್ಮವಾದ ಲಿಂಗಾಯತ ಗುಂಪಿಗೆ ಬಣಜಿಗ, ಸಾದ, ನೊಣಬ, ಸಿಂಪಿ, ನೇಕಾರ ಹೀಗೆ ಗುಂಪುಗಳು ಬಂದು ಸೇರಿದಂತೆ, ಸೇರಿಯೂ ತಮ್ಮ ಜಾತಿಯ ಅನನ್ಯತೆಯನ್ನು ಉಳಿಸಿಕೊಳ್ಳಲು ಯತ್ನಿಸಿರುವಂತೆ, ಅಸ್ಪೃಶ್ಯ ಜಾತಿಯ ಜನ ಇಡಿಯಾಗಿ ಸೇರಿದರು ಎಂದು ಹೇಳಲು ಆಧಾರಗಳು ಸಾಲವು. ಬಹುಶಃ ಇದಕ್ಕೆ ಅವರ ಜಾತಿ, ಆಹಾರಾಭ್ಯಾಸ, ಸಾಮಾಜಿಕ ಸ್ಥಾನಗಳೂ ಹನ್ನೆರಡನೆಯ ಶತಮಾನದ ಗುರುವರ್ಗದ ನಿರುತ್ಸಾಹವೂ ಕಾರಣವಾಗಬಹುದು. ಈ ದೃಷ್ಟಿಯಿಂದ ನೋಡಿದರೆ ಅಸ್ಪೃಶ್ಯರು ಲಿಂಗಾಯತ ಮತಕ್ಕೆ ಸೇರಿದ್ದು ಬಿಡಿ ಬಿಡಿಯಾಗಿಯೇ ಹೊರತು ಬಣಜಿಗ, ಸಾದ, ನೊಣಬರಂತೆ ಹೆಚ್ಚು ಕಡಿಮೆ ಗುಂಪು ಗುಂಪಾಗಿ ಅಲ್ಲ. (ಮುಂದೆ, ಲಿಂಗವಂತ ಕುರುಬರು ಮತ್ತು ಅಸ್ಪೃಶ್ಯರು ಭಾಗವನ್ನು ನೋಡಿ). ಸಾದ, ಗಾಣಿಗ, ನೊಣಬರಲ್ಲಿ ಲಿಂಗಾಯತೇತರರೂ ಇದ್ದಾರೆ.

---

69. "...the process by which a 'low' caste or tribe or the group takes over the customs, rituals, beliefs, ideology and style of life of a high and, in particular, a 'twice-born' (ದ್ವಿಜ) caste. The Sanskritisation of a group has usually the effect of improving its position in the local caste hierarchy. It normally presupposes either an improvement consciousness resulting from its contact with a source of the 'Great Tradition' of Hindusim such as pilgrim centre or monastery or proselytizing sect" - M.N. Srinivas. Quoted in "A Survey of Research in Sociology". I. Bombay. 1974. p. 389.

## ದಲಿತರ ಅರ್ಥಿಕ ಪ್ರಗತಿ ಆಯಿತೆ?

ಲಿಂಗಾಯತ ಚಳವಳಿ ಮುಖ್ಯವಾಗಿ ಸಮಾಜೋಧಾರ್ಮಿಕ ಸ್ವರೂಪದ್ದು, ಸಮಾಜೋಆರ್ಥಿಕ ಸ್ವರೂಪದ್ದು ಅಲ್ಲ. ಹೊಲೆಯರಿಗೆ ಧಾರ್ಮಿಕ ಸಂಸ್ಕಾರವನ್ನು ಕೊಡುವುದರ ಮೂಲಕ ಅವರು ಸಾಮಾಜಿಕವಾಗಿ ಹೆಚ್ಚಿನ ಮೇಲೇರನ್ನು ಪಡೆಯುವಂತೆ ಧಾರ್ಮಿಕವಾಗಿ ಮೇಲ್ಜಾತಿಗಳ ರಿಚುಯಲ್ಲುಗಳಿಗೆ ಅರ್ಹವಾಗುವಂತೆ ಮಾಡಿತು. ಇದರಿಂದ ಅವರ ಬಡತನ ಕಡಿಮೆಯಾಗಿ ಆರ್ಥಿಕ ಸ್ಥಿತಿ ಸುಧಾರಿಸಿತೇ ಎಂಬ ಪ್ರಶ್ನೆಗೆ ಬಹುಶಃ ಇಲ್ಲವೆನ್ನಬೇಕಾಗುತ್ತದೆ. ತಮ್ಮ ಪಾರಂಪರಿಕ ಉದ್ಯೋಗಗಳನ್ನು ಕೈ ಬಿಡಲು ಅವರಿಗೆ ಆ ದಿನಗಳಲ್ಲಿ ಅವಕಾಶವಿರಲಿಲ್ಲ. ಬಸವಣ್ಣ ಬಿಜ್ಜಳನ ಹತ್ತಿರವಿದ್ದ ಒಬ್ಬ ಅಧಿಕಾರಿ; ನೂರಾರು ಜನರಲ್ಲಿ ಅವನೂ ಒಬ್ಬ; ಅವನು ತನ್ನ ಸ್ವಾಧೀನವಿದ್ದ ಸಂಪತ್ತಿನ ಒಂದು ಭಾಗವನ್ನು ದಾನವಾಗಿ ಕೊಡಬಲ್ಲವನಾಗಿದ್ದನೆ ಹೊರತು ಹುದ್ದೆಗಳನ್ನು ಹಂಚಬಲ್ಲ ಅಧಿಕಾರ ಅವನಿಗೆ ಇರಲಿಲ್ಲ. ಅವನಾಗಲಿ ಉಳಿದ ಅವನ ಸಹ ನಾಯಕರಾಗಲಿ ಅಸ್ಪೃಶ್ಯರಿಗೆ ಬೇರೆ ರೀತಿಯ ಜೀವನವಿಧಾನಗಳನ್ನು ಕಲ್ಪಿಸಿಕೊಡಲು ಹೇಗೆ ತಾನೇ ಸಮರ್ಥರಾದಾರು! ಬಲಿಷ್ಠ ರಾಜ, ಅಂದಿನ ಪ್ರಬಲ ಹಿಂದೂ ಸಮಾಜ ಇವನ್ನೂ ನಾವು ಲಕ್ಷ್ಯದಲ್ಲಿಡಬೇಕು. ಕೊನೆಗೆ ಲಿಂಗವಂತ ಹೊಲೆಯರು ತಮ್ಮ ಕೇರಿಗಳನ್ನು ಬಿಟ್ಟು ಸವರ್ಣೀಯರಾದ ಉಳಿದ ಹಿಂದೂಗಳ ಮಧ್ಯೆ ಅಲ್ಲ, ಉಳಿದ ಲಿಂಗವಂತರ ಮಧ್ಯೆ ಮನೆಕಟ್ಟಿಕೊಂಡು ವಾಸಿಸಲು ಅವಕಾಶಗಳು ದೊರೆತವೇ ಎಂಬ ಬಗ್ಗೆಯೂ ನನಗೆ ಪ್ರಬಲ ಸಂದೇಹಗಳಿವೆ.

ಆದರೆ, ಸಾಮಾಜಿಕ ಮೇಲೇರು ದೊರೆತು ಆತ್ಮವಿಶ್ವಾಸ ಮೂಡಿದ ಅಂದಿನ ದಲಿತ ಶಿವಭಕ್ತರ ವೈಯಕ್ತಿಕ ಜೀವನದಲ್ಲಿ ಸುಧಾರಣೆಗಳು ಕಂಡುಬಂದು ತಾವೂ ಮನುಷ್ಯರಂತೆ ಬಾಳಬೇಕೆಂಬ ವೈಯಕ್ತಿಕ ಹುಮ್ಮಸ್ಸು ಮೂಡಿ ಅವರ ಅರ್ಥಿಕ ಸ್ಥಿತಿಯಲ್ಲಿ ಸ್ವಲ್ಪ ಉತ್ತಮಿಕೆ ಕಾಣಿಸಿರಬಹುದು. ಇದು ಲಿಂಗಾಯತ ಚಳವಳಿಯ ನೇರ ಫಲವೆಂಬುದಕ್ಕಿಂತ ಉಪ ಫಲ ಅಥವಾ ದೂರದ ಫಲ. ಆದರೆ ಲಿಂಗವಂತ ಹರಿಜನರು ತಮ್ಮ ಕೇರಿಗಳಲ್ಲೇ ವಾಸಮಾಡುವಂತೆ ಮಾಡಿ, ಅವರು ತಮ್ಮ ಹಿಂದಿನ ಅಪಮಾನಕರ ಇತಿಹಾಸವನ್ನು ಮರೆಯಲು ಇದ್ದ ಅವಕಾಶವನ್ನು ತಪ್ಪಿಸಿದರು. ಲಿಂಗವಂತ ಹರಿಜನರು ಉಳಿದ ಲಿಂಗವಂತ ಭಕ್ತರ ಮಧ್ಯೆಯೇ ವಾಸಮಾಡಲು ಅವಕಾಶ ಕಲ್ಪಿತವಾಗಿದ್ದಿದ್ದರೆ! ತಾವು ಲಿಂಗವಂತರಾದರೂ ಹೊಲೆಯರೇ, ಅಸ್ಪೃಶ್ಯರೇ ತಾವು ಎಂಬ ವಿಲಕ್ಷಣ ಪರಿಸ್ಥಿತಿಯಲ್ಲಿ ಬದುಕುವಂತಹ ವಾತಾವರಣದಿಂದ ಮುಕ್ತರಾಗುತ್ತಿದ್ದರು. ಅವರ ಆರ್ಥಿಕ ಪ್ರಗತಿ, ಅದು ಆಗಿದ್ದರೆ, ಅತ್ಯಲ್ಪ ಪ್ರಮಾಣದ್ದು ಎಂದು ಹೇಳದೇ ವಿಧಿಯಿಲ್ಲ. ತಮ್ಮ ವೃತ್ತಿಗಳಲ್ಲೇ ಮುಂದುವರಿದು, ಅವುಗಳಲ್ಲೇ ಹೆಚ್ಚು ಶುದ್ಧಿಯಿಂದ ದುಡಿದ ಅವರು ಒಳ ಸಮಾಧಾನವನ್ನು ಪಡೆದುದು ಕಡಮೆ ಲಾಭವೇನೂ ಅಲ್ಲ.

## ಕರ್ಮ ಸಿದ್ಧಾಂತ ಮತ್ತು ಲಿಂಗಾಯತ ಚಳವಳಿ

"ಪ್ರಾರಬ್ಧದಳವ ಮೀರಲು ಸಾಧ್ಯವಿಲ್ಲ" ಎಂಬ ಹೆಸರಿನ ಒಂದು ಕವಿತೆಯನ್ನು ಈ ಶತಮಾನದ ಆದಿಯಲ್ಲಿದ್ದ ಹೊಸಕೆರೆ ಚಿದಂಬರಯ್ಯನವರು ಬರೆದಿದ್ದಾರೆ.[70] ಒಬ್ಬ ಯುವತಿ ಚೆಲುವೆ, ವಿದ್ಯಾವಂತೆ, ಗುಣವಂತೆ; ಯಾವುದೇ ದೋಷವಿಲ್ಲ ಆದರೆ ಹುಟ್ಟಿನಲ್ಲಿ ಚಾಂಡಾಲೆ. ಗಂಡನಿಗಾಗಿ ಹುಡುಕಿ ಕೊನೆಗೆ ರಾಜನನ್ನು ಆರಿಸಿದಳು. ಅವನು ಹೋಗಿ ಒಬ್ಬ ಮುನಿಗೆ ನಮಸ್ಕರಿಸಿದಾಗ ಮುನಿ ದೊಡ್ಡವನೆಂದು ಅವನನ್ನು ಒಪ್ಪಿದಳು. ಮುನಿ ಹೋಗಿ ಶಿವಲಿಂಗಕ್ಕೆ ಬಾಗಿದಾಗ ಶಿವಲಿಂಗ ದೊಡ್ಡದೆಂದು ಅದನ್ನು, ಶಿವಲಿಂಗದ ಮೇಲೆ ನಾಯಿ ಮೂತ್ರ ಮಾಡಿದಾಗ ಅದು ದೊಡ್ಡದೆಂದು, ಆ ನಾಯಿ ಹೊಲೆಯನೊಬ್ಬನ ಕಾಲಲ್ಲಿ ಹೊರಳಿದಾಗ ಹೊಲೆಯನೇ ಎಲ್ಲರಿಗಿಂತ ಶ್ರೇಷ್ಠನೆಂದು ಅವನನ್ನು ವರಿಸಿದಳು.

**ಹೊಲೆಯ ಜಾತಿಯ ನಿತ್ಯ ದುಷ್ಕರ್ಮ ವೇಗದಿ**
**ಹೊಲತಿಯ ಬುದ್ಧಿಗೆ ತೋರೆ**
**ಹೊಲೆಯನೆ ಪತಿಯಾದನಿಂ ನೋಡೆ**
**ಪ್ರಾರಬ್ಧದಳವ ಮೀರಲು ಸಾಧ್ಯವಿಲ್ಲ.**

ಹೊಲತಿಯಾದವಳು ಹೊಲೆಯನನ್ನೇ ವರಿಸಬೇಕು; ಅದು ಅವಳು ಪಡೆದುಕೊಂಡು ಹುಟ್ಟಿದ್ದು, ಅವಳ ಹಣೆಯ ಬರಹ, ಅವಳ ಕರ್ಮ.

ಕರ್ಮ ಸಿದ್ಧಾಂತ ಹಿಂದೂ ಧರ್ಮದ ವಿಲಕ್ಷಣ ಪರಿಕಲ್ಪನೆಗಳಲ್ಲಿ ಒಂದು. ಈ ಜನ್ಮದ ವ್ಯಕ್ತಿಯ ಸುಖ ದುಃಖ ಪಾಪ ಪುಣ್ಯ ಎಲ್ಲಕ್ಕೂ ಅವನ ಹಿಂದಿನ ಜನ್ಮ ಅಥವಾ ಜನ್ಮಗಳ ಕ್ರಿಯೆಗಳೇ ಕಾರಣವೆಂಬುದು ಅದರ ತಿರುಳು. ಈ ತತ್ವ ಭಾರತೀಯರ ಬದುಕಿನಲ್ಲಿ ಅವರು ಊಹಿಸಲು ಸಾಧ್ಯವಿಲ್ಲದಂತಹ ಅಗೋಚರ ಅಸಾಧಾರಣ ಶಕ್ತಿಯಾಗಿ ಅವರ ಬದುಕನ್ನು ಆಲೋಚನೆ ಕ್ರಿಯೆಗಳನ್ನು ನಿರ್ಣಯಿಸುತ್ತದೆ, ನಿಯಂತ್ರಿಸುತ್ತದೆ. ಎಲ್ಲವೂ ಪೂರ್ವ ನಿಶ್ಚಿತವಾದ್ದರಿಂದ ಇಂದಿನ ಸ್ಥಿತಿಗೆ ಮರುಗಿ ಪ್ರಯೋಜನವಿಲ್ಲ ಎಂಬ ತಾತ್ಕಾಲಿಕ ಸಮಾಧಾನವನ್ನೂ, ಹೀಗೆ ಆಗಲೇಬೇಕು ಎಂದು ಪೂರ್ವ ನಿರ್ಣಯವಾಗಿಬಿಟ್ಟಿರುವುದರಿಂದ ಪರಿಸ್ಥಿತಿಯನ್ನು ಉತ್ತಮಪಡಿಸಲು ಯತ್ನ ಮಾಡುವುದು ವಿಫಲವೆಂಬ ಅಸಹಾಯ ಸ್ಥಿತಿಯನ್ನೂ ಉಂಟುಮಾಡುತ್ತದೆ. ಜಾತಿ ಪದ್ಧತಿಯ ಅನುಶ್ರೇಣಿ ಉಳಿದು ಬೆಳೆದು ಬಲಿಷ್ಠವಾಗಲು ಕರ್ಮಸಿದ್ಧಾಂತವು ಹೇಗೆ ಕಾರಣವೆಂಬುದನ್ನು ಇಲ್ಲಿ ನೋಡಬಹುದು. ಬ್ರಾಹ್ಮಣನು ಜಾತಿ ಶ್ರೇಣಿಯಲ್ಲಿ ಮೇಲಿದ್ದರೆ, ಹೊಲೆಯ ತೀರ ಕೆಳಗಿದ್ದು ಎಲ್ಲ ಅಪಮಾನಗಳಿಗೆ ತುತ್ತಾಗಿದ್ದರೆ ಅದಕ್ಕೆ ಅವನವನ ಕರ್ಮ ಕಾರಣ–ತೀರ ಸ್ಪಷ್ಟ ಸರಳ ವಿವರಣೆ.

70. ಉಲ್ಲೇಖ – ಸುಮತೀಂದ್ರ ನಾಡಿಗ : 'ಸಾಮಾಜಿಕ ಪ್ರಜ್ಞೆ: ಆಧುನಿಕ ಕಾವ್ಯದಲ್ಲಿ.' ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ (ಸಂ: ಜಿ.ಎಸ್. ಶಿವರುದ್ರಪ್ಪ. ಬೆಂಗಳೂರು, 1977. ಪು. 70–1).

ಉಳಿದ ಭಕ್ತಿ ಚಳವಳಿಗಳು ಹಿಂದೂ ಧರ್ಮದ ಚೌಕಟ್ಟಿನೊಳಗೇ ಜಾತಿಯನ್ನು ಒಪ್ಪಿಕೊಂಡವು. ಕೆಳವರ್ಗದವರನ್ನು ಆಧ್ಯಾತ್ಮಿಕ ಸಮಾನರೆಂದು ಭಾವಿಸಲು ಸಿದ್ಧವಾಗಿದ್ದುವು, ಸಾಮಾಜಿಕ ಸಮಾನರಾಗಿ ಅಲ್ಲ. ಹೊಲೆಯರನ್ನು ಸಾಮಾಜಿಕ ಸಮಾನರನ್ನಾಗಿ ಭಾವಿಸಲು ಸಿದ್ಧವಿದ್ದು ಲಿಂಗಾಯತ ಚಳವಳಿಯ ನೇತಾರರು ಕರ್ಮ ಸಿದ್ಧಾಂತವನ್ನೂ ತಿರಸ್ಕರಿಸಿದ್ದರೆ ಏನಾಗುತ್ತಿತ್ತು? ಆ ನೇತಾರರಲ್ಲಿ ಪ್ರಮುಖನಾದ ಬಸವಣ್ಣನು ಕರ್ಮದ ಬಗ್ಗೆ ಏನು ಹೇಳಿದ್ದಾನೆ?

ಭಕ್ತಿಯಿಂದ ಕರ್ಮವನ್ನು ಗೆಲ್ಲಬಹುದೆಂಬ ವಿಶ್ವಾಸ ಬಸವಣ್ಣನ ವಚನಗಳಲ್ಲಿ ಕಂಡುಬರುತ್ತದೆ. "ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಕರ್ಮಭೇದನವಾಯಿತ್ತಯ್ಯ"; "ಒಮ್ಮೆ ಶರಣೆಂದಡೆ ಪಾಪಕರ್ಮ ಓಡುವುದು"; "ನಿಮ್ಮ ನೆನೆವಂಗೆ ಭವಕರ್ಮವೆಲ್ಲಿಯದೊ" ಇಂತಹ ಹತ್ತಾರು ಕಡೆ ಮನುಷ್ಯ ಪ್ರಯತ್ನವು ಕರ್ಮವನ್ನು ಮೀರಬಲ್ಲುದೆಂಬ ಆತ್ಮವಿಶ್ವಾಸ ಕಾಣಿಸುತ್ತದೆ. ಅಂತೆಯೇ, "ಏವೇನೇವೆನೆಂದಡೆ ಮಾಣದು ಕಾಯದ ಕರ್ಮದ ಫಲಭೋಗವು", "ಪಂಡಿತನಾಗಲಿ ಮೂರ್ಖನಾಗಲಿ ಸಂಚಿತಕರ್ಮ ಉಂಡಲ್ಲದೆ ಬಿಡದು" ಇತ್ಯಾದಿ ಕಡೆಗಳಲ್ಲಿ[71] ಕರ್ಮದ ಅನಿವಾರ್ಯತೆಯೂ ಕಾಣುತ್ತದೆ. ಕರ್ಮದ ಬಗ್ಗೆ ಬಸವಣ್ಣನಲ್ಲಿ ಗೋಚರವಾಗುವ ಈ ಸಂಕೀರ್ಣ ಧೋರಣೆ ಒಟ್ಟಾರೆ ಭಾರತೀಯ ಧೋರಣೆಗೆ ಅನುಗುಣವಾಗಿದೆ. ಕರ್ಮ ಸಿದ್ಧಾಂತವು ಭಾರತೀಯರ ಜಾತಿ ವ್ಯವಸ್ಥೆಯನ್ನೂ ನಿಷ್ಕ್ರಿಯತೆಯನ್ನೂ ಪೋಷಿಸುವಂತಹ ಶಕ್ತಿಯೆಂಬುದನ್ನು ವಚನಕಾರರು ಮನಗಂಡಿದ್ದರೆ ಆ ಬಗ್ಗೆ ಅವರು ಏನು ಹೇಳುತ್ತಿದ್ದರೋ ಎಂಬುದು ಊಹೆಯ ವಿಷಯವಾಗುತ್ತದೆ.

## ಲಿಂಗವಂತ ಕುರುಬರು, ಲಿಂಗವಂತ ದಲಿತರು

ಕುರುಬ ಜಾತಿಯ 'ಒಡೆಯರ್' ಎಂಬುವವರು ಮೈಮೇಲೆ ಲಿಂಗ, ಹಣೆಯಲ್ಲಿ ವಿಭೂತಿ ಧರಿಸುವ ಸಸ್ಯಾಹಾರಿಗಳು. ಇವರಿಗೂ ಲಿಂಗಾಯತರಿಗೂ ಆಚಾರ ವಿಚಾರಗಳಲ್ಲಿ ಯಾವುದೇ ಭೇದವಿಲ್ಲವಾದರೂ ಲಿಂಗಾಯತ ಸಮಾಜ ಅವರಿಂದ ದೂರ ಉಳಿದಿದೆ. ಒಡೆಯರ್ ತಮ್ಮನ್ನು ತಾವು ಜಂಗಮರೆಂದೂ 'ಐನೋರು' ಎಂದೂ ಭಾವಿಸುತ್ತಾರೆ. ರೇವಣಸಿದ್ಧೇಶ್ವರ ಮಠದ ಯಜಮಾನರು ಅವರು. ಅವರು ತಮ್ಮನ್ನು ತಾವು ಪಂಚಾಚಾರ್ಯ ಪರಂಪರೆಗೆ ಸಂಪರ್ಕಿಸಿಕೊಳ್ಳುತ್ತಾರೆ. ಕುರುಬ ಜನಾಂಗದ ಪುರೋಹಿತರು ಅವರು. ಮದುವೆ, ಸಾವು ಇತ್ಯಾದಿ ಸಂದರ್ಭಗಳಲ್ಲಿ ಅವರ ಪೌರೋಹಿತ್ಯ ಅಗತ್ಯವಾಗಿರುತ್ತದೆ. ಅವರಲ್ಲಿ ಪುರುಷರು ದೊರಕದಿದ್ದರೆ ಅವರ ಗೃಹಿಣಿಯರನ್ನು – 'ಒಡೇರಮ್ಮ'–ಕರೆದೊಯ್ದು ಅವರಿಂದ ಮದುವೆ ಕಾರ್ಯವನ್ನು ನೆರವೇರಿಸುತ್ತಾರೆ. ಸ್ತ್ರೀ ಹೀಗೆ ಪೌರೋಹಿತ್ಯ ಕಾರ್ಯವನ್ನು ನಡಸುವ ಸ್ವಾತಂತ್ರ್ಯವನ್ನು

71. ಹೆಚ್ಚಿನ ಉಲ್ಲೇಖಗಳಿಗೆ, 'ಕರ್ಮ' 'ವಿಧಿ' ಶೀರ್ಷಿಕೆಗಳ ಕೆಳಗೆ ಎಸ್.ಆರ್. ಗುಂಜಾಳರ "ಬಸವಣ್ಣನವರ ವಚನ ಪದಪ್ರಯೋಗ ಕೋಶ"ವನ್ನು ನೋಡಿ.

ಪಡೆದಿರುವ ಮತ್ತೊಂದು ಉದಾಹರಣೆ ಭಾರತದಲ್ಲಂತೂ ಮತ್ತೊಂದು ಇಲ್ಲ. ಗಂಡ ಸತ್ತುಹೋದರೆ ಮೈಮೇಲೆ ಧರಿಸಿರುವ ಲಿಂಗವೇ ಪತಿಯೆಂದು ಭಾವಿಸುತ್ತ ವಿಧವೆ ಹಿಂದಿನಂತೆಯೇ ತಾಳಿ, ಕುಂಕುಮ, ಬಳೆ, ಹೂಗಳನ್ನು ಧರಿಸುತ್ತ ಇದ್ದುಬಿಡುತ್ತಾಳೆ, ಮತ್ತು ವಿಧವೆಯಾದ ಮೇಲೂ ಹಿಂದಿನ ಅದೇ ಸಾಮಾಜಿಕ ಧಾರ್ಮಿಕ ಸ್ಥಾನಮಾನ ಗಳು ಒಡೇರಮ್ಮನಿಗೆ ಉಳಿದಿರುತ್ತವೆ.

ಸಸ್ಯಾಹಾರಿಗಳಾದ ಒಡೆಯರು ಇನ್ನೊಂದು ಒಡೆಯರ ಮನೆತನದೊಡನೆ ಸಂಬಂಧಗಳನ್ನು ಬೆಳೆಸುವಂತಿಲ್ಲ. ಅವರು ಕಡ್ಡಾಯವಾಗಿ ಮಾಂಸಾಹಾರಿಗಳಾದ ಕುರುಬರ ಮನೆಗೇ ಹೆಣ್ಣು ಕೊಟ್ಟು ಹೆಣ್ಣು ತರಬೇಕು. ಪುರೋಹಿತ–ಭಕ್ತ, ಸಸ್ಯಾಹಾರಿ – ಮಾಂಸಾಹಾರಿ ಸಂಸಾರಗಳ ಮಧ್ಯೆ ನಡೆಯುವ ವಿವಾಹಗಳೂ ಕೂಡ ಒಡೆಯರ್ ಜನಾಂಗದ ಒಂದು ವೈಶಿಷ್ಟ್ಯ. ಜಾತಿಭೇದದ ಕೆಟ್ಟ ಪರಿಣಾಮಗಳನ್ನು ಮೇಲಿನ ವ್ಯವಸ್ಥೆ ಹೇಗೆ ತೊಡೆದುಹಾಕಿದೆಯೆಂಬುದನ್ನು ಗಮನಿಸಬೇಕು. ಲಿಂಗಾಯತ ಚಳವಳಿಯ ಆದರ್ಶದ ಒಂದು ಕನಸು ಲಿಂಗಾಯತರು ತಮ್ಮ ಜೊತೆ ಬೆರೆಯಲು ಅವಕಾಶ ಮಾಡಿ ಕೊಡದ "ಒಡೆಯರ್"ನಂತಹ ಗುಂಪಿನಲ್ಲಿ ನಿಜವಾಗಿದೆ ಎಂದು ಹೇಳಬೇಕಾಗಿದೆ.

ಒಡೆಯರ್ ಯಾರು, ಅವರ ಲಿಂಗಾಯತತ್ವಕ್ಕೆ ಕಾರಣ ಏನು, ಎಂದಿನಿಂದ ಅವರಲ್ಲಿ ಈ ಪದ್ಧತಿ ಆರಂಭ ಇತ್ಯಾದಿ ಪ್ರಶ್ನೆಗಳಿಗೆ ಮುಂದಿನ ಸಂಶೋಧನೆಗಳು ಉತ್ತರ ಕಂಡುಕೊಳ್ಳಬೇಕಾಗಿದೆ.[72]

ಉತ್ತರ ಕರ್ನಾಟಕದಲ್ಲಿರುವಂತೆ ದಕ್ಷಿಣ ಕರ್ನಾಟಕದಲ್ಲಿಯೂ ಅಲ್ಪಸಂಖ್ಯೆಯ ದಲಿತರು ಲಿಂಗವಂತರಾಗಿಯೂ ಲಿಂಗಾಯತ ಗುಂಪಿನಿಂದ ಹೊರಗೆ ಉಳಿದಿರು ವುದೂ ವರದಿಯಾಗಿದೆ. ಅಂತಹ ಜನ ಹಿರಿಯೂರು ತಾಲೂಕಿನಲ್ಲಿ ಹಲವರಿರು ವುದು ನನ್ನ ಗಮನಕ್ಕೆ ಬಂದಿದೆ (ಅಲ್ಲಿ ಹೋಗಿ ಇನ್ನೂ ಮಾಹಿತಿ ಸಂಗ್ರಹ ಮಾಡ ಬೇಕಾಗಿದೆ). ದಕ್ಷಿಣ ಕರ್ನಾಟಕದ ತುತ್ತ ತುದಿಯ ಮೈಸೂರು, ಮಂಡ್ಯ, ಹೆಗ್ಗಡದೇವನ ಕೋಟೆ ತಾಲೂಕುಗಳಲ್ಲಿ ಇನ್ನೂ ಕೆಲವೆಡೆ 'ಕನಿಷ್ಠ ಒಂದು ಸಾವಿರ'ವಾದರೂ ಅಂತಹ ಜನ ಇದ್ದಾರೆ ಎಂದು ಒಂದು ಸಮೀಕ್ಷೆ ತಿಳಿಸುತ್ತದೆ.[73] ಗುಲ್ಬರ್ಗ ಜಿಲ್ಲೆಯ ಕೊರಳಿಯ ಉರಿಲಿಂಗಪೆದ್ದಿ ಮಠದ ಅಧ್ಯಕ್ಷರು ಮೂರು ನಾಲ್ಕು ದಶಕಗಳ ಹಿಂದೆ ದಲಿತರಿಗೆ ಲಿಂಗದೀಕ್ಷೆ ಕೊಟ್ಟರು. ಅಂತಹ ಸಂದರ್ಭದಲ್ಲಿ ಆ ಸ್ವಾಮಿಗಳಿಗೆ ಸಂಪ್ರದಾಯನಿಷ್ಠ ಲಿಂಗಾಯತರಿಂದ ಹಿಂಸೆಯೂ ಆಯಿತು. ಉರಿಲಿಂಗ

---

72. ವಿವರಗಳಿಗೆ, ನೋಡಿ – M. Chidananda Murthy : 'Notes on the Kuruba-Odeyar Community.' Quarterly Journal of the Mythic Society. LXXI, Nos. 1 and 2. January- June. 1980.

73. ಎಸ್. ವಿದ್ಯಾಶಂಕರ : 'ಲಿಂಗವಂತ ಹರಿಜನರು.' ವಚನ ಪರುಷ. ಬೆಂಗಳೂರು, 1980. ಪು. 79–81.

ಪೆದ್ದಿ ಹೆಸರಿನ ಮಠಗಳು ಮೈಸೂರು ಜಿಲ್ಲೆಯಲ್ಲಿ ಕೆಲವಿವೆ. ಕೆಲವು ದಲಿತರ ಮನೆಗಳಲ್ಲಿ ಕೆಲವರು ಲಿಂಗವಂತರಾಗಿದ್ದರೆ, ಉಳಿದವರು ಹಾಗೇ ಉಳಿದ್ದಾರೆ. ಮದ್ಯ ಮಾಂಸ ವಿಸರ್ಜನೆ ಮಾಡಬೇಕು, ಲಿಂಗಧರಿಸಿ ನಿತ್ಯವೂ ಸ್ನಾನಮಾಡಿ ಪೂಜಿಸಬೇಕು ಇವು ಲಿಂಗವಂತ ದಲಿತರು ಅನುಸರಿಸಬೇಕಾದ ವಿಧಿಗಳು. ಉಳಿದ ಮಾಂಸಾಹಾರಿ ದಲಿತ ಬಂಧುಗಳ ಜೊತೆ ಯಾವುದೇ ಸಂಬಂಧವನ್ನೂ ಇಟ್ಟುಕೊಳ್ಳಕೊಡದು. ಅವರಿಗೆ ಹುಟ್ಟಿದ ಮಗುವಿಗೆ ಹತ್ತನೆಯ ದಿನ ಕೊರಳಿಗೆ ಲಿಂಗವಸ್ತ್ರ ಕಟ್ಟಿ, ಕಿವಿಯಲ್ಲಿ ಪಂಚಾಕ್ಷರಿ ಬೋಧಿಸಿ ('ಕರಣ ಬೋಧೆ') ರುದ್ರಾಕ್ಷಿಯನ್ನೂ ಕಟ್ಟುತ್ತಾರೆ. ('ಮಣೀ ದೀಕ್ಷೆ') ಕೆಲವರು ಮದುವೆ ಸಮಯದಲ್ಲಿ ಲಿಂಗಧಾರಣೆ ಮಾಡಿಸುತ್ತಾರೆ.

ಲಿಂಗವಂತ ದಲಿತರ ವಿವಾಹಗಳು ಅವರವರಲ್ಲೇ ನಡೆಯುತ್ತಿವೆ. ಒಂದು ವೇಳೆ ಲಿಂಗವಂತರಲ್ಲದವರಿಗೆ ಹೆಣ್ಣುಗಳನ್ನು ಕೊಟ್ಟರೆ, ಬಂಧುಗಳ ಪಡಸಾಲೆಯಲ್ಲಿ ಮಗಳ ಮತ್ತು ಇತರರ ಕ್ಷೇಮ ವಿಚಾರಿಸಿ ಹಿಂದಕ್ಕೆ ಬರುತ್ತಾರೆ. "ನಾವು ಸಂದರ್ಶಿಸಿದ ಲಿಂಗವಂತ ಹರಿಜನರ ಮನೆಗಳೆಲ್ಲವೂ ಚೊಕ್ಕಟವಾಗಿದ್ದುವು."[74] "ಇಂದು ಇವರ ಲೌಕಿಕ ಸ್ಥಿತಿ ಹಿಂದಿನದಕ್ಕಿಂತ ಮೇಲೇರಿಲ್ಲ. ಲಿಂಗವಂತರಾಗಿದ್ದರೂ ಸವರ್ಣೀಯರಿಗೆ ಇವರು ಅಸ್ಪೃಶ್ಯರೇ. ತಮ್ಮವರಿಂದ ಬೇರೆಯಾಗಿ ಉತ್ತಮ ಕುಲದವರಿಗೆ ಬೇಡವಾಗಿ ಇಂದು ಇವರ ಸ್ಥಿತಿ ತ್ರಿಶಂಕು ಸ್ಥಿತಿಯಾಗಿದೆ."[75] ಇದು ನಾವು ನಿರೀಕ್ಷಿಸಬಹುದಾದ ಆಧುನಿಕ ಸ್ಥಿತಿ. ಹನ್ನೆರಡನೆಯ ಶತಮಾನದಲ್ಲಿ ನಡೆದ ದಲಿತರ ಮತಾಂತರ ಇದಕ್ಕಿಂತ ಉತ್ತಮ ವಾತಾವರಣವನ್ನು ನಿರ್ಮಿಸಿತ್ತು ಎಂದು ಹೇಳಲು ಸಾಧ್ಯವೇ?

## ಅಸ್ಪೃಶ್ಯತೆಯ ನಿವಾರಣೆಯ ಯತ್ನ ವಿಫಲವಾದುದು ಏಕೆ?

ಅಸ್ಪೃಶ್ಯತೆಯ ಸಂಪೂರ್ಣ ನಿವಾರಣೆಯು ಆಧುನಿಕ ಕಾಲದಲ್ಲಿ ಹಲವು ಸುಧಾರಕರ, ಪ್ರಜ್ಞಾವಂತರ, ಸರ್ಕಾರಗಳ ಅಖಿಲಭಾರತ ವ್ಯಾಪ್ತಿಯ ನಿರಂತರ ಪ್ರಯತ್ನಗಳಿಂದಲೂ ಅಸಾಧ್ಯವಾಗಿರುವಾಗ, ಎಂಟುನೂರು ವರ್ಷಗಳ ಹಿಂದೆ ಕೆಲವು ವ್ಯಕ್ತಿಗಳ ಸ್ವಲ್ಪ ಕಾಲದ ಒಂದು ಸೀಮಿತ ಪ್ರದೇಶದ ಪ್ರಯತ್ನಗಳಿಂದ ಅದು ಸಾಧ್ಯವಾಯಿತೆಂಬುದನ್ನು ಊಹಿಸಲೂ ಸಾಧ್ಯವಿಲ್ಲ. ಅಸ್ಪೃಶ್ಯತೆ ಹಿಂದೂ ಧರ್ಮದಲ್ಲಿ ಆಳವಾಗಿ ಬೇರೂರಿರುವ ಭಾವನೆ. ಅದನ್ನು ತೆಗೆದುಹಾಕಲು ಬಸವ ಮತ್ತು ಇತರರು ಪ್ರಾಮಾಣಿಕವಾಗಿ ಯತ್ನಿಸಿದರೂ, ಅದು ಉಳಿದುಕೊಂಡೇ ಬಂದಿದೆ. ಅಸ್ಪೃಶ್ಯರ ಆರ್ಥಿಕ ಏಳಿಗೆ ಲಿಂಗಾಯತ ಚಳವಳಿಯ ಗುರಿ ಆಗಿರಲಿಲ್ಲ ಮತ್ತು ಅಂತಹ ಗುರಿಯನ್ನು ಇಟ್ಟುಕೊಂಡಿದ್ದರೂ, ಪ್ರಭುತ್ವದ ಬೆಂಬಲವಿಲ್ಲದೆ ಅದು ಸಫಲವಾಗುತ್ತಿರಲಿಲ್ಲ. ಅಸ್ಪೃಶ್ಯರು ಲಿಂಗವಂತರಾದ ಮೇಲೂ ತಮ್ಮ ವೃತ್ತಿಗಳಲ್ಲೇ ಮುಂದುವರಿಯುವ

74. ಅದೇ, ಪು. 78.

75. ಅದೇ, ಪು. 79.

ಸಂದರ್ಭವಿದ್ದುದರಿಂದ ಆ ವೃತ್ತಿ ಅವರನ್ನು ಅದೇ ಜಾತಿಯಲ್ಲಿ, ಜಾತಿ ಶ್ರೇಣಿಯ ಅದೇ ಕ್ರಮದಲ್ಲಿ ಉಳಿಸುತ್ತಿತ್ತು. ಸ್ಪೃಶ್ಯರ ಮನೆಗಳಿಗೆ ಹೋಗಿಬರುವುದು, ಅವರಲ್ಲಿ ಊಟ, ಅವರೊಡನೆ ರಕ್ತಸಂಬಂಧ ಇವುಗಳಿಗೆ ಪ್ರೋತ್ಸಾಹ ದೊರೆತರೂ ಅಂಥವು ವಾಸ್ತವಾಗಿ ಎಷ್ಟು ನಡೆದುವು ಎಂಬುದರ ಬಗ್ಗೆ ಮಾಹಿತಿ ಸಾಲದು. ಬಸವಣ್ಣ ಅವರ ಮನೆಗಳಿಗೆ ಹೋಗಿ ಊಟ ಮಾಡುತ್ತಿದ್ದಂತೆ ಉಳಿದ ಶರಣರೂ ಹೋಗಿಬರುತ್ತಿದ್ದರೆ, ಅಂಥವರು ಎಷ್ಟು ಜನ ಎಂಬ ಪ್ರಶ್ನೆಗೆ ಉತ್ತರವನ್ನು ಕೊಡಲು ಕಷ್ಟವಾಗುತ್ತದೆ. ಭಾವುಕತೆಗೆ ಒಳಗಾಗದೆ ಮನುಷ್ಯನ ಸ್ವಭಾವವನ್ನು ಅರಿತು ಊಹಿಸುವುದಾದರೆ, ಬಹಳ ಜನ ದಲಿತ ಲಿಂಗವಂತರ ಮನೆಗಳಿಗೆ ಹೋಗಿಬರುತ್ತಿರಲಾರರು, ಅವರನ್ನು ತಮ್ಮ ಮನೆಯೊಳಕ್ಕೆ ಬಿಡಿಸಿಕೊಳ್ಳುತ್ತಿರಲಾರರು. ದಲಿತರಿಗೆ ಸವರ್ಣೀಯರ ಮಧ್ಯೆ ವಾಸಿಸಲು ಅವಕಾಶಗಳನ್ನು ಬಸವಣ್ಣನಾಗಲಿ ಇತರ ಭಕ್ತರಾಗಲಿ ಕೊಡುವ ಸ್ಥಿತಿಯಲ್ಲಿರಲಿಲ್ಲ. ಅವರೇ ದಲಿತರ ಕೇರಿಗಳಿಗೆ ಹೋಗಿ ಅವರ ಮಧ್ಯೆ ವಾಸಿಸಲು ಸಾಧ್ಯವಿತ್ತೇ? ಬಹುಶಃ ಅದೂ ಅಸಾಧ್ಯ. ಈ ಎಲ್ಲ ಮಿತಿಗಳ ಹಿನ್ನೆಲೆಯಲ್ಲಿ ನೋಡಿದಾಗ ಅಸ್ಪೃಶ್ಯತೆಯ ನಿವಾರಣೆಯಲ್ಲಿ ಹನ್ನೆರಡನೆಯ ಶತಮಾನದ್ದು ಅಲ್ಪ ಫಲದ ಮಹಾ ಪ್ರಯತ್ನವೆಂದು ಹೇಳಬೇಕಾಗುತ್ತದೆ. ಆದರೂ ಅಂದಿನ ಚೌಕಟ್ಟಿನಲ್ಲಿ ಲಿಂಗಾಯತ ಸಮಾಜ ತೋರಿದ ಪ್ರಗತಿಶೀಲ ಮನೋಭಾವ ಬಹು ದಿಟ್ಟತನದ್ದು.

## ಆಧುನಿಕ ಕಾಲದಲ್ಲಿ ಮತಾಂತರ

ಅಸ್ಪೃಶ್ಯತೆಯ ಬಗ್ಗೆ ಗಾಂಧೀಜಿ ಒಂದು ಕಡೆ ಹೀಗೆ ಹೇಳಿದ್ದಾರೆ :

"So far as I am concerned with the untouchability question, it is one of life and death for Hinduism. As I have said repeatedly, if untouchability lives Hinduism perishes, and even India perishes; but if untouchability is eradicated from the Hindu heart root and branch, then Hinduism has a definite message for the world. I have said the first utterance of a man who accepts Truth as God. It is therefore no exaggeration. If untouchability is an integral part of Hinduism, the latter is a spent bullet. But untouchability is a hideous untruth. My motive in launching the untouchability campaign is clear. What I am aiming at is not every Hindu touching an `untouchable', but every touchable Hindu driving untouchability from his heart, going through a complete change of heart. Interdining or intermarrying is not the point. I may not dine with you, but I ought not to harbour the feeling that if I dined with you I should be polluted. If I was a woman to be married, I should not say, `I cannot marry a man because he is an untocuhable'. I am making this clear to you because in the programme of the Harijan Sevak Sangh we say we don't ask the orthodox Hindus to interdine or intermarry with the `untouchables'.

Many of us have no scruples about interdining or intermarriage. The untouchability is an ancient custom I admit, but there are many such things intertwined with Hinduism because it is an ancient religion, even a prehistoric. Instead of being the dead faith that it threatens to be, I want it to be a living faith so that it may exist side by side with other religions of the world."[76]

ಗಾಂಧೀಜಿ, ಥಕರ್ ಬಾಪಾ, ಕಾಕಾ ಕಾಲೇಲ್ಕರ್, ಅಂಬೇಡ್ಕರ್, ಜ್ಯೋತಿ ಫುಲೆ ಇತ್ಯಾದಿ ಮಹನೀಯರ ಅವಿರತ ಶ್ರಮಗಳಿಂದಾಗಿ ಇಪ್ಪತ್ತನೆಯ ಶತಮಾನದಲ್ಲಿ ಭಾರತವು ಅಸ್ಪೃಶ್ಯತೆಯ ಸಮಸ್ಯೆಯ ತೀವ್ರತೆಯ ಬಗ್ಗೆ ಎಚ್ಚೆತ್ತಿದೆ. ದಲಿತರಲ್ಲಿ ವಿದ್ಯಾವಂತರು ಹೆಚ್ಚಿ ನಾಗರಿಕತೆಯ ಗಾಳಿ ಅವರಲ್ಲೂ ಬೀಸಿದಂತೆ ತಮಗೆ ಸವರ್ಣೀಯರಿಂದ ಆಗುವ ಅಪಮಾನವನ್ನು ತೀವ್ರವಾಗಿ ಭಾವಿಸುತ್ತಿದ್ದಾರೆ. ಸವರ್ಣೀಯ ಹಿಂದೂಗಳು ಪೂರ್ಣ ಎಚ್ಚರಗೊಂಡು, ಅವರ್ಣೀಯರನ್ನು ತಮಗೆ ಸಮಾನರಾಗಿ ಭಾವಿಸದಿದ್ದರೆ ಅಸ್ಪೃಶ್ಯರಲ್ಲಿ ಹಲವರು ಅನ್ಯಮತಗಳಿಗೆ ಮತಾಂತರ ಹೊಂದುವ ಸಾಧ್ಯತೆಗಳಿವೆ ಎಂಬುದಷ್ಟೇ ಅಲ್ಲ, ಆಗಲೇ ಅಂತಹ ಮತಾಂತರಗಳು ಅಲ್ಲಲ್ಲಿ ನಡೆದು ಬಗೆ ಬಗೆಯ ಘರ್ಷಣೆಗಳಿಗೂ ಅವಕಾಶ ಮಾಡಿಕೊಟ್ಟಿವೆ. ಮತಾಂತರವನ್ನು ತಡೆಗಟ್ಟುವ ಏಕೈಕ ಮಾರ್ಗ-ಹಿಂದೂಗಳ ಹೃದಯ ಪರಿವರ್ತನೆ. ತಮಗೆ ಇಲ್ಲಿಯವರೆಗೆ ದೊರಕಿದ ಅನೇಕ ಸವಲತ್ತುಗಳನ್ನು ಹರಿಜನರಿಗೆ ಸ್ವಸಂತೋಷದಿಂದ ಬಿಟ್ಟುಕೊಟ್ಟು ಅವರ ಆರ್ಥಿಕಾಭಿವೃದ್ಧಿಗೆ ನೆರವಾಗುವುದು ಒಂದು; ಅವರ ಬಗ್ಗೆ ಇರುವ ಕಳಂಕ ಭಾವನೆಯನ್ನು ಮನಸ್ಸಿನಿಂದ ಸಂಪೂರ್ಣ ವಾಗಿ ತೊಡೆದುಹಾಕುವುದು ಇನ್ನೊಂದು.-ಇವೆರಡೂ ಇಂದಿನ ಅಗತ್ಯಗಳು. ಈ ದಿಸೆಯಲ್ಲಿ ಪ್ರಜ್ಞಾವಂತರಾದ ಜನ ನಾಯಕತ್ವವನ್ನು ವಹಿಸಬೇಕು. ಅದರಲ್ಲೂ ಹಿಂದೂ ಮಠಾಧೀಶರ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ಅದರಲ್ಲೂ ಲಿಂಗಾಯತ ಗುರುಗಳ (ಗುರು, ವಿರಕ್ತ ಪೀಠಗಳವರ) ಪಾತ್ರ ಹೆಚ್ಚು ಗುರುತರವಾದುದು ಮತ್ತು ಹೆಚ್ಚು ಸುಲಭದ್ದು. ಬ್ರಾಹ್ಮಣ ಗುರುಗಳೊಬ್ಬರು ದಲಿತರ ಕೇರಿಗೆ ಹೋದರೆ ದಲಿತರನ್ನು ತಮ್ಮ ಮಠದ ಪೂಜಾಮಂದಿರಗಳಿಗೆ ಪ್ರವೇಶ ಮಾಡಿಸಿದರೆ ಅದು ಅವರಿಗೆ ಹೊಸತು. ಲಿಂಗಾಯತ ಸ್ವಾಮಿಗಳು ಅಂತಹ ಕಾರ್ಯಗಳನ್ನು ಕೈಗೊಂಡರೆ, ಅದು ಈ ಮಧ್ಯೆ ನಿಂತು ಹೋದ ಕಾರ್ಯವೊಂದರ ನವೀಕರಣವಾಗುತ್ತದೆ. ಇತ್ತೀಚಿನ ವರೆಗೆ ದಲಿತರ ಕೇರಿಗಳಿಗೆ ಲಿಂಗಾಯತ ಗುರುಗಳು ಹೋಗಿ ಅವರಿಗೆ ಲಿಂಗದೀಕ್ಷೆ ಕೊಡುವಂತಹ ಧೈರ್ಯದ ಕೆಲಸವನ್ನು ಮಾಡುತ್ತಿದ್ದರು. ನಾನು ಇಲ್ಲಿ ಈಗಿನ ಲಿಂಗಾಯತ ಗುರುಗಳು ಲಿಂಗದೀಕ್ಷೆ ಕೊಡುವಂತಹ ಕಾರ್ಯಕ್ಕೆ ಕೈಹಾಕಬೇಕೆಂದು

---

76. M.K. Gandhi : Christian Missions (their place in India). Ahmedabad. 1941. pp. 236-7.

ಸೂಚಿಸುತ್ತಿಲ್ಲ. ದಲಿತರು ಲಿಂಗವಂತರು ಹೌದೋ ಅಲ್ಲವೋ ಅದು ಮುಖ್ಯವಲ್ಲ. ಅವರು ಮನುಷ್ಯರು, ಮನುಷ್ಯನಿಗೆ ಸಲ್ಲಬೇಕಾದ ಪ್ರೀತಿ, ಆದರ, ಗೌರವಗಳಿಗೆ ಅರ್ಹರು. ವೀರಶೈವ ಪೂಜ್ಯರು ಮನಸ್ಸು ಮಾಡಿದರೆ ಅವರು ದಲಿತರ ಬಗ್ಗೆ ಹಿಂದೂ ಸಮಾಜದಲ್ಲಿ ಇರುವ ಧೋರಣೆಯನ್ನು ಬದಲಿಸಬಲ್ಲರು. ಎಷ್ಟೋ ಮಠಗಳ ಮೂಲಕ ಹೆಚ್ಚಿನ ಪ್ರಗತಿಪರ ಮನೋಭಾವವನ್ನು ತೋರಿರುವ ಲಿಂಗಾಯತ ಮಠಗಳು ತಮ್ಮ ಅನುಯಾಯಿಗಳಿಗೆ ದಲಿತರ ಬಗ್ಗೆ ಪ್ರೀತಿಯನ್ನು ಬೆಳಸಿಕೊಂಡು ಅಸ್ಪೃಶ್ಯತೆಯನ್ನು ಕಿತ್ತು ಹಾಕಲು ಬೋಧಿಸಿ ತಾವೂ ಆಚರಿಸಿದರೆ ಆಗ ಪರಿಣಾಮ ಬೇರೆಯೇ ಆದೀತು. ಲಿಂಗಾಯತ ಧರ್ಮದ ಇತಿಹಾಸವಂತೂ ಅಂತಹ ದಿಟ್ಟ ಕಾರ್ಯಕ್ಕೆ ಸಂಪೂರ್ಣ ಬೆಂಬಲವನ್ನು ಕೊಡುತ್ತದೆ.

ಮತಾಂತರದ ಭಯದಿಂದಾಗಿ ನಡುಗಿ ಹೋಗಿರುವ ಹಿಂದೂಧರ್ಮದ ಬೆಂಬಲಕ್ಕೆ ಎಲ್ಲ ಮಠಾಧೀಶರೂ, ಅದರಲ್ಲೂ ಲಿಂಗಾಯತ ಮಠಾಧೀಶರು ನಿಲ್ಲುವರೇ ಎಂಬ ಪ್ರಶ್ನೆ ಎಲ್ಲರ ಮುಂದೆ ನಿಂತಿದೆ.

## ಅನುಬಂಧ – I

### ಕೊನೆಯ ದಿನದ ಉಪನ್ಯಾಸದ ಬಳಿಕ ಪ್ರಶ್ನೋತ್ತರ :

ಉಪನ್ಯಾಸಗಳಿಗೆ ಬಂದ ಶ್ರೋತೃಗಳ ಸಂಖ್ಯೆಯಷ್ಟೇ ವೈವಿಧ್ಯವೂ ಗಮನಾರ್ಹವಾಗಿದ್ದಿತು. ಸಾಹಿತ್ಯ, ರಾಜ್ಯಶಾಸ್ತ್ರ, ತತ್ವಶಾಸ್ತ್ರ, ಮಾನವವಿಜ್ಞಾನ, ಸಮಾಜವಿಜ್ಞಾನ, ಮನೋವಿಜ್ಞಾನ, ಸಮಾಜಕಾರ್ಯ ವಿಭಾಗ, ಕೃಷಿವಿಜ್ಞಾನ, ಇತಿಹಾಸ, ಪಶುವೈದ್ಯ ವಿಭಾಗ, ಭೂಗರ್ಭವಿಜ್ಞಾನಗಳ ಹಿನ್ನೆಲೆಯ ಜನರಲ್ಲದೆ, ನಾಟಕ ಇತ್ಯಾದಿ ಬೇರೆ ಬೇರೆ ಕಲೆಗಳ, ನವ್ಯ ನವೋದಯ ಬಂಡಾಯ ಚಳವಳಿಗಳ ಸಾಹಿತ್ಯಕ ವಿದ್ಯಾರ್ಥಿಗಳೂ ಬಂದು ಮೂರೂ ದಿನ ತುಂಬು ಆಸಕ್ತಿಯಿಂದ ಉಪನ್ಯಾಸಗಳನ್ನು ಕೇಳಿದುದಲ್ಲದೆ ಕೊನೆಯ ದಿನ ಒಂದು ಗಂಟೆಗೆ ಮೀರಿ ನಡೆದ ಗಂಭೀರ ಪ್ರಶ್ನೋತ್ತರದಲ್ಲಿ ಭಾಗಿಗಳಾಗಿದ್ದರು. ನಾನು ಅದನ್ನು ಒಂದು ಅಪೂರ್ವ ಅನುಭವವೆಂದು, ಒಂದು ದೊಡ್ಡ ಗೌರವವೆಂದು ಭಾವಿಸಿದ್ದೇನೆ. ಆ ದಿನ ಲಿಖಿತರೂಪದಲ್ಲಿ ಬಂದ ಪ್ರಶ್ನೆಗಳ ಸಂಖ್ಯೆ ನಲವತ್ತೊಂಬತ್ತು. ಅವುಗಳಲ್ಲಿ ಕೆಲವಕ್ಕೆ ನಾನು ಅಂದು ಉತ್ತರ ಕೊಡಲು ಯತ್ನಿಸಿದೆ. ಇನ್ನು ಕೆಲವಕ್ಕೆ ಯೊಚಿಸಬೇಕು ಎಂದು ಹೇಳಿದೆ. ಬಹುತೇಕ ಎಲ್ಲ ಪ್ರಶ್ನೆಗಳೂ ಒಂದೇ ಮಟ್ಟದವಲ್ಲವಾದರೂ ಚಿಂತನೆಯ ಘನೋದ್ದೇಶದಿಂದ ಬಂದುವೆಂಬುದು ಸಮಾಧಾನದ ಸಂಗತಿ. ಅವುಗಳಲ್ಲಿ ಕೆಲವು ಪ್ರಶ್ನೆಗಳು ಹೀಗಿವೆ: ಅವುಗಳಿಗೆ ನನ್ನ ಪ್ರತಿಕ್ರಿಯೆಗಳೂ ಹೀಗಿವೆ.

### ದೇವೇಂದ್ರಕುಮಾರ ಹಕಾರಿ

1. ಉತ್ತರ ಭಾರತದಲ್ಲಿ (ಬ್ರಾಹ್ಮಣನ) ಕಾಲ ಅಂಗುಟ ಅದ್ದಿದ ನೀರನ್ನು ಕುಡಿಯುವ ಒಂದು ಕ್ರಿಯೆಯನ್ನು ಮೊದಲ ದಿನದ ಉಪನ್ಯಾಸದಲ್ಲಿ ಹೇಳಿದಿರಿ. ಈ ಕ್ರಿಯೆಗೂ ಮತ್ತು ವೀರಶೈವರ ಪಾದೋದಕ ಪ್ರಕ್ರಿಯೆಗೂ ಏನಾದರೂ ಸಂಬಂಧವಿದೆಯೇ?

– ಇದೆ. ಪುರೋಹಿತ ಗುರುವರ್ಗದ ಜನರ ಪವಿತ್ರತೆಯನ್ನು ಕೆಳವರ್ಗದವರು ಒಪ್ಪಿಕೊಳ್ಳುವ ರೀತಿ ಇದು. ಉತ್ತಮ ವರ್ಗದ ಜನ ಮುಟ್ಟಿದ, ಅದರಲ್ಲೂ

ಅವರ ಪಾದ ಮುಟ್ಟಿದ, ಜಲವನ್ನು ಪ್ರೋಕ್ಷಿಸಿಕೊಳ್ಳುವುದು ಮತ್ತು ಕುಡಿಯು ವುದು ಅಸ್ತಿತ್ವದಲ್ಲಿರುವ ಸಾಮಾಜಿಕ–ಧಾರ್ಮಿಕ ಸಂಬಂಧಗಳನ್ನೂ ನಂಬಿಕೆ ಗಳನ್ನೂ ದೃಢಪಡಿಸುತ್ತದೆ. ಹಾಗೆ ಕುಡಿಯುವುದು ಸರಿಯೇ ಎಂಬ ಪ್ರಶ್ನೆ ಬೇರೆ.

2. ಬೇರೆ ಬೇರೆ ವೃತ್ತಿಯ ಜನ 'ಲಿಂಗಾಯತ' ಧರ್ಮಕ್ಕೆ ಹಿಂಡುಗಟ್ಟಿ ಬಂದದ್ದು ಲಿಂಗಾಯತದ ಭಕ್ತಿ ತತ್ವದಿಂದಾಗಿ ಎಂದು ಹೇಳಿದಿರಿ. ಆದರೆ ವೃತ್ತಿ ಮೂಲವಾದ ಜಾತಿ ಶ್ರೇಣಿಯನ್ನು ಮೂಲೋತ್ಪಾಟನೆ ಮಾಡಿದ, ವೃತ್ತಿಗಳ ಉದಾತ್ತೀಕರಣಕ್ಕೆ ಕಾರಣವಾದ ಕಾಯಕತತ್ವದ ಧೋರಣೆಯೇ ವಿಭಿನ್ನ ಜನಪದ ವೃಂದಗಳು ಲಿಂಗಾಯತದ ನೆಲೆಯಲ್ಲಿ ಬಂದು ನಿಲ್ಲಲು ಪ್ರೇರಕ ಅಲ್ಲವೇ?

– ಭಕ್ತಿಯು ಜನರನ್ನು ಲಿಂಗಾಯತದತ್ತ ಆಕರ್ಷಿಸಿತು ಎಂಬ ಮಾತು ನಿಜ. ಹಾಗೆಯೇ ಮತಾಂತರಕ್ಕೆ ಅವಕಾಶವಿದ್ದುದು, ಆಧ್ಯಾತ್ಮಿಕ ಸಮಾನತೆಯ ಜೊತೆಗೆ ಸಾಮಾಜಿಕ ಸಮಾನತೆಯೂ ದೊರೆಯುವ ಸಾಧ್ಯತೆಗಳಿದ್ದುದೂ ಹಾಗೆ ಜನ ಬರಲು ಕಾರಣ. 'ಕಾಯಕತತ್ವದ ಧೋರಣೆಯೇ ಕಾರಣ' ಎಂದು ಒಂದನ್ನೇ ಕಾರಣ ಮಾಡುವುದನ್ನು ಒಪ್ಪುವುದು ಕಷ್ಟವಾಗಬಹುದು. ಕಾಯಕತತ್ವ ನಿಶ್ಚಿತವಾಗಿಯೂ ಮತದ ಜನಪ್ರಿಯತೆಯಲ್ಲಿ ಪಾತ್ರವನ್ನು ವಹಿಸಿದೆ ಎಂಬುದನ್ನು ನಾನು ನಿರಾಕರಿಸಲಾರೆ. ಇದರ ಮೇಲೆ, ಏಕೆ ಜನ ಬಂದರು, ಲಿಂಗಾಯತರಾದರು ಎಂಬುದನ್ನು ಖಚಿತವಾಗಿ ಹೇಳಲು ಆಧಾರಗಳು ಸಾಲವು. ಎಷ್ಟೆಂದರೂ ನಮ್ಮದೆಲ್ಲ ಹೆಚ್ಚೆಂದರೆ ಪ್ರಮೇಯದ (hypothesis) ಮಟ್ಟದಲ್ಲಿ ನಿಲ್ಲುವ ತೀರ್ಮಾನಗಳು.

## ಬಿ. ಕೃಷ್ಣಮೂರ್ತಿ

3. ಮನೋವೈಜ್ಞಾನಿಕ ದೃಷ್ಟಿಕೋನವನ್ನು ತಾವು ತಮ್ಮ ವಿಶ್ಲೇಷಣೆಯಲ್ಲಿ ಉಪಯೋಗಿಸಿಕೊಂಡಿದ್ದರಿಂದ ಬಹಳಷ್ಟು ವಚನಕಾರರು repulsive ಆದ ಪ್ರತಿಮೆಗಳನ್ನು ಬ್ರಾಹ್ಮಣ ಮತ್ತು ಜಾತಿ ವಿಷಯದ ಬಗ್ಗೆ ಉಪಯೋಗಿಸಿರು ವುದು ಅವರು structural changes ತರಲು ಪ್ರಯತ್ನಿಸದೆ ಕೇವಲ ಮಾತಿ ನಿಂದ ಪ್ರತಿಮೆಗಳನ್ನು ಉಪಯೋಗಿಸಿ ಸಮಾಜ ಬದಲಾವಣೆ ತರಬೇಕೆಂದು ಪ್ರಯತ್ನಿಸಿದಂತಿದೆ. ಕ್ರಿಯೆ ಇಲ್ಲದಾಗ ಪ್ರತಿಮೆಗಳಲ್ಲಿ ಮಾತುಗಳು ಈ repulsive ರೂಪವನ್ನು ತಾಳುತ್ತವೆ ಎಂದು ಹೇಳಬಹುದೇ?

– ಯೋಚಿಸಬೇಕಾದ ಪ್ರಶ್ನೆ ಇದು. ವಚನಕಾರರು ಸಮಾಜದಲ್ಲಿ structural changes ತರಲು ಪ್ರಯತ್ನಿಸಲಿಲ್ಲವೆನ್ನುವ ಮಾತು ನಿಜ. ಅವರ ಯತ್ನ

ಸಮಾಜದಲ್ಲಿ ಬದಲಾವಣೆಗಳನ್ನು ತರುವುದು ಆಗಿತ್ತೇ ಹೊರತು ಸಾಮಾಜಿಕ ಬದಲಾವಣೆ ತರುವುದು ಅಲ್ಲ. ಸಮಾಜದ ಬದಲಾವಣೆ ನಿಜವಾಗಿ ಆಗುವುದು ಆರ್ಥಿಕ ಮೂಲಗಳ ಗುತ್ತಿಗೆ ಹಿಡಿದ ಶ್ರೀಮಂತ ಅಥವಾ ಅಧಿಕಾರಿ ವರ್ಗಗಳನ್ನು ದುರ್ಬಲಪಡಿಸಿ ಸಂಪತ್ತನ್ನು ಎಲ್ಲರ ಆಸ್ತಿಯನ್ನಾಗಿ ಮಾಡಿದಾಗ. ಇಂತಹ ಮೂಲಭೂತ ಕ್ರಾಂತಿ ವಚನಕಾರರ ಉದ್ದೇಶವೂ ಆಗಿರಲಿಲ್ಲ. ಅವರಿಗೆ ಅದು ಹೊಳೆದಿರಲೂ ಇಲ್ಲ. ಅವರ ಭಕ್ತಿಯ ಚೌಕಟ್ಟಿನಲ್ಲಿ ಅದು ಅವರಿಗೆ ಸಾಧ್ಯವೂ ಇರಲಿಲ್ಲ.

ಬದಲಾವಣೆಯ ವೈಫಲ್ಯ ಅಥವಾ ಮಾತಿನಲ್ಲಿ ಬದಲಾವಣೆಯು ಮೈಲಿಗೆ ಪ್ರತಿಮೆಗಳಿಗೆ ಕಾರಣ ಎಂಬ ಹೇಳಿಕೆಯನ್ನು ಒಪ್ಪುವುದು ಕಷ್ಟ. ಎಲ್ಲ ವಚನಕಾರರಲ್ಲಿ ಅಂತಹ ಮೈಲಿಗೆ ಪ್ರತಿಮೆಗಳು ಕಾಣುವುದಿಲ್ಲ. ಕೆಲವರಲ್ಲಿ ಮಾತ್ರ ಅದು ಕಾಣುವುದು. ಸಮಾಜೋಧಾರ್ಮಿಕ ಅಸಮಾನತೆಯ ವಿರುದ್ಧ ಮಾತನಾಡಿದ ಅವರು ಬ್ರಾಹ್ಮಣ-ಹೊಲೆಯ ಭೇದವನ್ನು ತಿರಸ್ಕರಿಸಿದಂತೆಯೇ ಭಾಷೆಯ ಮಟ್ಟದಲ್ಲೂ ಶಿಷ್ಟ-ಗ್ರಾಮ್ಯ ಭೇದವನ್ನು ತೊಡೆಯುವುದು ಅಗತ್ಯ ವಾಗಿದ್ದಿತು. ಮಧುವರಸನಲ್ಲಿ ಕಂಡು ಬರುವ ಮೈಲಿಗೆ ಪ್ರತಿಮೆಗಳಂತೂ ಅವನ ಜಾತಿ, ಸಂಬಂಧಗಳ ಹಿನ್ನೆಲೆಯಲ್ಲಿ ಹೆಚ್ಚು ಅರ್ಥವತ್ತಾಗುತ್ತವೆ.

ವಚನಕಾರರಲ್ಲಿ 'ಕ್ರಿಯೆ' ಇಲ್ಲವೆಂಬುದನ್ನು ನಾನು ಒಪ್ಪಲಾರೆ. ನಾವು ನಿರೀಕ್ಷಿಸಿ ದಷ್ಟು ಇಲ್ಲ ಎನ್ನುವ ಮಾತು ಬೇರೆ.

## ಎಸ್.ಎಫ್. ಪೂಜಾರ

4. ಸದ್ಯ ಇರುವ ವೀರಶೈವರು ವೀರಶೈವರೇ? ಅಥವಾ ಮಾಜಿ ವೀರಶೈವರೆ?

– ವೀರಶೈವರೇ. ಕಾಲದಿಂದ ಕಾಲಕ್ಕೆ ಮತದ ವ್ಯಾಖ್ಯೆ, ಪ್ರಕ್ರಿಯೆ ನಂಬಿಕೆಗಳು ಬೇರೆ ಬೇರೆಯಾಗುತ್ತವೆ. ಧರ್ಮವನ್ನು ನೀತಿಯಿಂದ ಪ್ರತ್ಯೇಕಿಸದೆ ವಿಚಾರ ಮಾಡಿದಾಗ ಮೇಲಿನಂತಹ ಪ್ರಶ್ನೆ ಉದ್ಭವಿಸುತ್ತದೆ. ಹಾಗೆ ನೋಡಿದರೆ ಬಸವಣ್ಣನ ಕಾಲದಲ್ಲಿನ ಎಲ್ಲ ಶರಣರೂ'ನಿಜವಾದ' ವೀರಶೈವರಾಗಿದ್ದರೆಂದು ಹೇಳಲು ಹೇಗೆ ಸಾಧ್ಯ? ಮನುಷ್ಯ ಸ್ವಭಾವವನ್ನರಿತ ನಮಗೆ ಆ ಬಗ್ಗೆ ಸ್ಪಷ್ಟ ಕಲ್ಪನೆಗಳಿರುವುದು ಒಳ್ಳೆಯದು.

## ಬಿ. ಕೃಷ್ಣಮೂರ್ತಿ

5. ಜಾತಿ ಶ್ರೇಣಿಯ ಮಹತ್ವವನ್ನು ಅಲ್ಲಗಳೆಯಲು ವಚನಕಾರರು ಬ್ರಾಹ್ಮಣ ಅಪಮೌಲ್ಯೀಕರಣ ಇತ್ಯಾದಿ ಮಾಡಿದರೆಂದು ಹೇಳಿದಿರಿ. ಇದರ ಜೊತೆಗೆ (ಅಥವಾ ಅಪಮೌಲ್ಯೀಕರಣವನ್ನು ಒಳಗೊಂಡು) ವಚನಕಾರರು ಮಾನವ ಪ್ರಕೃತಿಯ ಮತ್ತು ಸಾಮಾಜಿಕ ವಾಸ್ತವತೆಯ ಅಪೌರಾಣೀಕರಣದಲ್ಲಿ

(Demythologisation) ತೊಡಗಿದ್ದರೆಂದು ಸೂಚಿಸುತ್ತೇನೆ. ಇದನ್ನು ಒಪ್ಪಿಕೊಂಡರೆ ನೀವು ವಚನಕಾರರು ಕರ್ಮವಾದವನ್ನು ಒಪ್ಪಿಕೊಂಡಿದ್ದರೆಂದು ಹೇಳುವುದು ಸಮಂಜಸವಾಗುವುದಿಲ್ಲ. ಕರ್ಮವಾದವನ್ನು ಅವರು ಹೊಡೆದು ಹಾಕುತ್ತಿದ್ದಾರೆಂದು ಹೇಳಿಬೇಕಾಗುತ್ತದೆ. ನಿಮ್ಮ ಪ್ರತಿಕ್ರಿಯೆ.

– ಈ ಪ್ರಶ್ನೆಯ ಪೂರ್ವಾರ್ಧದಲ್ಲಿ ನಿರಾಕರಿಸುವಂತಹುದೇನೂ ಇಲ್ಲ. ಸಾಮಾಜಿಕ ವಾಸ್ತವತೆಯ ಅಪೌರಾಣೀಕರಣ, ಎಂದರೆ ಮೇಲು ಕೀಳು ಎಂಬ ಕಟ್ಟುಕತೆಯ ಧ್ವಂಸ ನಡೆದುದು ನಿಜ. ನಾನು ಶ್ವಪಚಯ್ಯ, ಚನ್ನಯ್ಯರ ಪುರಾಣಗಳ (myths) ಮೂಲಕವೇ ಹೇಗೆ ಪ್ರಾಚೀನ ಪದ್ಧತಿಯ ಅಪೌರಾಣೀಕರಣವಾಗಿದೆ (ಈ ಮಾತನ್ನು ನಾನು ನನ್ನ ಉಪನ್ಯಾಸಗಳಲ್ಲಿ ಬಳಸದೇ ಇರಬಹುದು) ಎಂಬುದನ್ನು ತೋರಿಸಿದ್ದೇನೆ.

ಕರ್ಮವಾದದ ಬಗ್ಗೆ ನನ್ನ ಮೊದಲ ಉಪನ್ಯಾಸಗಳಲ್ಲಿ ಸೂಚಿಸಿದ್ದೆ. ಈಗ ಪ್ರತ್ಯೇಕವಾಗಿ ಒಂದು ಪ್ಯಾರಾವನ್ನೇ ಬರೆದು ಸೇರಿಸಿದ್ದೇನೆ. ವಚನಕಾರರು ಕರ್ಮವಾದವನ್ನು ಹೊಡೆದುಹಾಕುತ್ತಿದ್ದಾರೆ ಎಂಬ ಭಾವನೆಯನ್ನು ತರುವ ವಚನಗಳಂತೆಯೇ ಪೋಷಿಸುತ್ತಿದ್ದಾರೆ ಎಂದು ವಾದಿಸಲವಕಾಶವಿರುವ ವಚನ ಗಳೂ ಇವೆ. ಹರಿದಾಸರು ಹೇಳುವ ಅಜಾಮಿಳನ ಕತೆಯಲ್ಲೂ ಭಕ್ತಿಯು ಕರ್ಮವಾದವನ್ನು ಹೊಡೆದುಹಾಕಬಲ್ಲುದು ಎಂಬ ಸೂಚನೆಯೇ ಇದೆ. ಕರ್ಮಸಿದ್ಧಾಂತ ಹಿಂದೂ ಧರ್ಮದ ಎಷ್ಟು ಪ್ರಬಲ ಅಂಶವಾಗಿ ಸೇರಿದೆ ಯೆಂದರೆ ಆಧುನಿಕ ಕಾಲದ ತೀವ್ರ ವೈಚಾರಿಕರನ್ನು ಹೊರತುಪಡಿಸಿ, ಇಂದಿನ ಹಿಂದಿನ ಬಹುತೇಕ ಎಲ್ಲರ ಜೀವನ ವಿಧಾನಗಳನ್ನು ಅದು ನಿರ್ಣಯಿಸಿದೆ. ಕೆಲವು ವಚನಕಾರರು ಕರ್ಮವಾದವನ್ನು ಹೊಡೆದು ಹಾಕಲು ಯತ್ನಿಸಿದರು ಎನ್ನಬೇಕಾಗುತ್ತದೆ. ಕರ್ಮ ಸಿದ್ಧಾಂತ ಭಕ್ತರಿಂದ ಹೊಡೆಸಿಕೊಂಡು ಸಾಯು ವಷ್ಟು ದುರ್ಬಲ ಖಂಡಿತ ಅಲ್ಲ.

**ಬಿ.ಸಿ. ಜವಳಿ**

6. ಮಾದಿಗರು ಹೊಲೆಯರು ಶಿವಭಕ್ತರಾದ ಮೇಲೆ ಮೊದಲಿನ ಕಾಯಕವನ್ನೇ ಮಾಡಿದರೇ?

– ಹೌದು, ಮಾಡಲಿಲ್ಲವೆಂಬುದಕ್ಕೆ ಏನು ಆಧಾರ ಕೊಡೋಣ. ಮಾದಾರ ಧೂಳಯ್ಯ ತನ್ನ ವಚನಗಳಲ್ಲಿ ತನ್ನ ವೃತ್ತಿಯ ಪ್ರತಿಮೆಗಳನ್ನೇ ತಂದಿದ್ದಾನೆ. ತನ್ನ ಚಪ್ಪಲಿ ಹೊಲೆಯುವ ವೃತ್ತಿಯನ್ನು ಅವನು ಪ್ರತಿಪಾದಿಸಿದ್ದಾನೆ.

7. ಮಾದಾರ ಚೆನ್ನಯ್ಯನೊಡನೆ ಶಿವನು ಉಂಡ ಎಂದರೆ ಅರ್ಥಮಾಡುವುದು ಹೇಗೆ?

– ನಮ್ಮ ಹಿಂದಿನವರಿಗೆ ಪುರಾಣ ವಾಸ್ತವಗಳ ಮಧ್ಯದ ಗೆರೆ ನಾವು ಅಂದು ಕೊಂಡಿರುವಷ್ಟು ನಿಚ್ಚಳ ಅಲ್ಲ. ಶಿವ ಉಂಡ ಎಂದರೆ ಉಂಡ ಎಂದೇ ಹಿಂದಿನವರ ನಂಬಿಕೆ. ಆಧುನಿಕರಾದ ನಮಗೆ ಅಂತಹ ಪೌರಾಣಿಕ ಕತೆಯ ಹಿಂದಿನ ಅರ್ಥ, ಉದ್ದೇಶ, ಇಂಗಿತಗಳನ್ನು ವ್ಯಾಖ್ಯಾನಿಸುವುದು ಕಷ್ಟವಾಗುವುದಿಲ್ಲ.

**ಎಲ್. ಸಿದ್ದಪ್ಪ**

8. ಬಸವಣ್ಣನ ನಂತರ ಹಾಗೂ ಬಸವಣ್ಣನ ಕಾಲಕ್ಕೆ ರಾಜಾಶ್ರಯ ಈ ಚಳವಳಿಗೆ ಸಿಕ್ಕಿದ್ದರೆ ಬಹುಶಃ ಭಾರತಾದ್ಯಂತ ಹರಡುತ್ತಿರಲಿಲ್ಲವೇ?

– ರಾಜಾಶ್ರಯ ಸಿಗಬೇಕಾಗಿದ್ದರೆ ಆ ಚಳವಳಿ ಎಷ್ಟೋ ವಿಷಯಗಳ ಜೊತೆ ಹೊಂದಾಣಿಕೆ ಮಾಡಿಕೊಳ್ಳಬೇಕಾಗುತ್ತಿತ್ತು. ಹೊಂದಾಣಿಕೆ ಮಾಡಿಕೊಂಡಿದ್ದರೆ ಅದು ಚಳವಳಿ ಎಂದು ಅನ್ನಿಸಿಕೊಳ್ಳುತ್ತಿರಲಿಲ್ಲ.

ಮುಂದೆ, (ವಿಜಯನಗರ ಕಾಲದಲ್ಲಿ) ರಾಜಾಶ್ರಯ ದೊರಕಿತು; ಅಷ್ಟು ಹೊತ್ತಿಗೆ ಚಳವಳಿಯು ಮತ ಆಗಿತ್ತು. ರಾಜಾಶ್ರಯ ದೊರಕಬೇಕಾದರೆ ಯಾವ ಪರಿಸ್ಥಿತಿ ಇರಬೇಕು ಎನ್ನುವುದನ್ನು ಇದು ಸ್ಪಷ್ಟಪಡಿಸುತ್ತದೆ.

**ಎಸ್.ಎಂ. ವೃಷಭೇಂದ್ರಸ್ವಾಮಿ**

9. ಸಾದರು, ನೊಣಬರು ವೀರಶೈವ ಧರ್ಮದ ಒಳಗೆ ಪ್ರವೇಶ ಪಡೆದುದು ಯಾವ ಕಾಲದಲ್ಲಿ? ತಿಳಿಸುವಿರಾ? ಅವರು ಒಂದು ಪ್ರತ್ಯೇಕ ಜಾತಿಯಂತೆ ವರ್ತಿಸುವುದು ಸರಿಯೆ? ತಪ್ಪು ಯಾರದು, ತಿಳಿಸಿರಿ?

– ಯಾವಾಗ ಪ್ರವೇಶ ಪಡೆದರು ತಿಳಿಯದು. ಬಹುಶಃ ಒಮ್ಮೆ ಆಗಿರಲಾರದು; ಕಾಲದಿಂದ ಕಾಲಕ್ಕೆ ಬಂದಿರಬಹುದು. ಹಾಗೆ ಬಂದ ಜನ ಪ್ರತ್ಯೇಕ ಜಾತಿಯಂತೆ ವರ್ತಿಸುವುದು ಭಾರತೀಯ ಪರಿಸರದಲ್ಲಿ ತೀರ ಸ್ವಾಭಾವಿಕ. 'ಸರಿಯೇ?' ಎಂಬ ಪ್ರಶ್ನೆಗೆ ಉತ್ತರ ಕೊಡುವುದು ಕಷ್ಟ. ಲಿಂಗಾಯತರಲ್ಲಿ ವಿದ್ಯೆ ಹೆಚ್ಚಿದಷ್ಟು ಜಾತಿಭೇದಗಳು ಸ್ವಾಭಾವಿಕವಾಗಿ ಮರೆಯಾಗುತ್ತಿವೆ.

10. ಭಕ್ತಪಂಥ ಪ್ರಾಗತಿಕವಾದುದಲ್ಲ ಎಂಬುದು ತುಂಬ ಕುಬ್ಜ ದೃಷ್ಟಿಯಲ್ಲವೇ? ಅದನ್ನು ಆಶ್ರಯಿಸಿ ಬೆಳೆದ ಭಾರತೀಯ ಸಮಾಜ ಪ್ರಗತಿಯನ್ನೇ ಸಾಧಿಸಲಿಲ್ಲವೆನ್ನುತ್ತೀರಿ?

– ಪ್ರಾಗತಿಕವಲ್ಲವೆಂದು ನಾನು ಹೇಳಿಲ್ಲ. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಭಕ್ತಿಪಂಥದಿಂದ ಉದಾರ ಧೋರಣೆಗಳು ಕಾಣಿಸಿಕೊಂಡಿರುವುದನ್ನು ಹೇಳಿದ್ದೇನೆ.

11. ಕೆಳವರ್ಗದವರನ್ನು ಉದ್ಧರಿಸುತ್ತೇವೆಂಬ ಇಂದಿನ ಪ್ರಯತ್ನಗಳು ಸಾರ್ಥಕವಾಗುವುವೇ? ಅವರಿಗೆ ಶುದ್ಧ ಧಾರ್ಮಿಕ ಸಂಸ್ಕಾರ ಕೊಡುವುದರಿಂದ ಸಾಧ್ಯವಾಗಲಾರದೆ?

– ಕೆಳವರ್ಗದವರ ಉದ್ಧಾರ ಅವರಿಂದಲೇ ಸಾಧ್ಯ. ಅವರಿಗೆ ಈಗ ಬೇಕಾಗಿರುವುದು ಆರ್ಥಿಕ ಸ್ವಾವಲಂಬನೆ.

## ಚಂದ್ರಶೇಖರ ಪಾಟೀಲ

12. Political-Economic ಆಯಾಮವನ್ನು ಒಳಗೊಳ್ಳದ ಯಾವುದೇ Socio-religious ಚಳವಳಿ ಕೊನೆಗೆ (ultimately) ಇದ್ದ 'ವ್ಯವಸ್ಥೆ'ಯನ್ನೇ ಗಟ್ಟಿಗೊಳಿಸುವ ಸಾಧನವಾಗುವುದಿಲ್ಲವೇ?

– ತಕ್ಷಣ ಒಪ್ಪಿಕೊಳ್ಳಲು ನನ್ನ ಮನಸ್ಸು ಹಿಂದೇಟು ಹಾಕುತ್ತಿದೆಯಾದರೂ ಬಹುಶಃ ನಿಜವೆಂದು ತೋರುತ್ತದೆ. ಆದರೆ ಐತಿಹಾಸಕವಾಗಿ, ಇತರ ಸಮಾಜೋ ಧಾರ್ಮಿಕ ಚಳವಳಿಗಳಿಂದ ಮತ್ತು ಲಿಂಗಾಯತ ಚಳವಳಿಯಿಂದ ಆದ ತಾತ್ಕಾಲಿಕವೇ ಎನ್ನುವುದಾದರೂ ಕೆಲವು ಉತ್ತಮ ಫಲಗಳು ಬಂದಿರುವುದನ್ನು ಉಪೇಕ್ಷೆ ಮಾಡುವುದು ತಪ್ಪಾಗುತ್ತದೆ.

ಭಾರತದ ಪರಿಸರದಲ್ಲಿ Socio-religious ಚಳವಳಿಗಳು ಎಷ್ಟೋ ವಿಫಲವಾಗಿವೆ ಎಂಬುದು ನಿಜವಾದರೂ ಹಾಗೆಯೇ political-economic ಆಯಾಮನ್ನು ಒಳಗೊಂಡ ಚಳವಳಿಯೊಂದು ನಡೆದು ವ್ಯವಸ್ಥೆಯನ್ನು ಬದಲಾಯಿಸಿ ತನ್ನ ಶಕ್ತಿಯನ್ನು ಸಾಧಿಸಿ ತೋರಿಸಬೇಕಾಗಿದೆ.

13. ಮೇಲ್ವರ್ಗದವರ ನಾಯಕತ್ವ ಕುರಿತು : ಬಸವ ಚಳವಳಿಯನ್ನು ಒಳಗೊಂಡಂತೆ ನಮ್ಮ ಇಂದಿನ ಎಡ–ಪಂಥೀಯ ಚಳವಳಿಗಳ ನಾಯಕತ್ವ ಮೇಲ್ವರ್ಗದವರ ಕೈಯಲ್ಲಿಯೇ ಇದೆ. ಇದು ಕೂಡ "ಅನಿವಾರ್ಯತೆ"ಯ ನೆವದಿಂದ ಮೇಲಿನವರು ಮುಂದೆ ಮಾಡಿದ ಕುತಂತ್ರವೆಂದೇ ದಲಿತರು ಭಾವಿಸಿದರೆ ತಪ್ಪೇನು?

– ನೀಗ್ರೋಗಳನ್ನು ಮೇಲೆತ್ತುವಂತಹ ನಾಯಕ ಬಿಳಿಯರಿಂದಲೇ ಮೂಡಿಬರುವುದು ಅನಿವಾರ್ಯವೆಂಬ ಕಾಕ್ಸನ ಮಾತನ್ನು ಹಿಂದೆ ಹೇಳಿದ್ದೇನೆ. ಮೇಲ್ವರ್ಗದಿಂದ ಮೂಡಿ ಬಂದ ಪ್ರಾಮಾಣಿಕ ವ್ಯಕ್ತಿಯನ್ನು ಕೆಳಗಿನವರು ಒಪ್ಪಿಕೊಳ್ಳುತ್ತಾರೆ. ತಮ್ಮ ಜೊತೆ ಇದ್ದು ಅನುಭವಿಸಬಹುದಾಗಿದ್ದ ಸವಲತ್ತುಗಳ ತ್ಯಾಗಕ್ಕೆ ಸಿದ್ಧನಾದ ಮೇಲ್ವರ್ಗದ ವ್ಯಕ್ತಿಯನ್ನು ಅದೇ ವರ್ಗದವರು ಗುರುತಿಸುತ್ತಾರೆ. ಅವನ ಮಾತಿಗೆ ಮನ್ನಣೆ ನೀಡುತ್ತಾರೆ. ಎಡಪಂಥೀಯ ಪಕ್ಷಗಳ

ನಾಯಕತ್ವಕ್ಕೆ ಮೇಲ್ವರ್ಗದವರೇ ಬರುವುದು ಐತಿಹಾಸಿಕ ಅನಿವಾರ್ಯವೆನ್ನೋಣವೇ? ಬೇಕೆಂದೇ ಮಾಡಿದ "ಕುತಂತ್ರ"ವೆಂದು ನನಗನ್ನಿಸುವುದಿಲ್ಲ. ಇದೇ ಮಾತನ್ನು ದಲಿತ ಚಳವಳಿಗೆ (ಬಂಡಾಯ ಸಾಹಿತ್ಯ ಚಳವಳಿಗೂ) ಅನ್ವಯಿಸಬಹುದೇ ನೋಡಬೇಕು.

14. ಬಸವಣ್ಣ decaste ಆದ ವಚನವನ್ನು ವೈಭವೀಕರಿಸುವ ಇಂದಿನ ಲಿಂಗಾಯತರು ಚನ್ನಬಸವಣ್ಣ ಕಕ್ಕಯ್ಯ ನಡುವಿನ ಒಂದು ಸಂಭಾವ್ಯ ಸಂಬಂಧದ ಬಗ್ಗೆ ಹುಚ್ಚರಂತೆ ಚೀರಾಡಿದ್ದು ದೊಡ್ಡ ದುರಂತವಲ್ಲವೇ?

– ದೊಡ್ಡದಲ್ಲದಿದ್ದರೂ ಕೊನೆಯ ಪಕ್ಷ ಸಣ್ಣ ದುರಂತವೇ. ತಪ್ಪು ಕಲ್ಪನೆಗಳು ಎಷ್ಟೋ ಬಾರಿ ಧಾರ್ಮಿಕ ಸಂದರ್ಭದಲ್ಲಿ ಊದಿಕೊಂಡು ಬರುತ್ತವೆ.

ಚನ್ನಬಸವಣ್ಣನ ಹುಟ್ಟಿನ ಬಗ್ಗೆ ನನ್ನದೇ ಒಂದು ನಿಲುವಿದೆ. ತಾತ್ಕಾಲಿಕವಾಗಿಯಾದರೂ ನಾನು ಒಂದು ದೃಢನಿರ್ಧಾರಕ್ಕೆ ಬಂದಿದ್ದೇನೆ. ಅದನ್ನು ಇಲ್ಲಿ ಹೇಳುವುದು ಅಪ್ರಸ್ತುತ: ಎಂದಾದರೂ ಅದನ್ನು ಬರೆಯುವೆನೋ ಇಲ್ಲವೋ ತಿಳಿಯದು. ಸಂಶೋಧನೆಯಲ್ಲಿ ತಿಳಿದು ಬಂದದ್ದನ್ನೆಲ್ಲ ಬರೆಯಬೇಕೆಂದಿಲ್ಲ. ಬರೆಯುವುದಿದ್ದರೆ ಮಾತ್ರ ಸತ್ಯವನ್ನೇ ಬರೆಯಬೇಕು–ಆ ಮಾತು ಹಾಗಿರಲಿ. ಚನ್ನಬಸವಣ್ಣನ ತಂದೆ ಖಂಡಿತವಾಗಿಯೂ ಕಕ್ಕಯ್ಯ ಅಲ್ಲ; ಇಷ್ಟು ಮಾತ್ರ ಖಂಡಿತ ಸತ್ಯ. ಆದರೆ ಲಿಂಗಾಯತರಂತಹ ಒಂದು ಮಹಾ ಪರಂಪರೆ ಅಸ್ಪೃಶ್ಯನೊಬ್ಬನ ಪ್ರಸಾದದಿಂದಲೋ ಅನುಗ್ರಹದಿಂದಲೋ ಚನ್ನಬಸವಣ್ಣ ಹುಟ್ಟಿದ ಎಂದು ಭಾವನೆಯ ಮಟ್ಟದಲ್ಲಿ ಒಂದು ಕಾಲಕ್ಕೆ ನಂಬಿದ್ದುದು ನನಗೆ ಅಸಾಮಾನ್ಯವಾಗಿ ತೋರುವುದು ಮಾತ್ರವಲ್ಲದೆ, ಹಾಗೆ ನಂಬಲು ಸಿದ್ಧರಿದ್ದ ಹಿಂದಿನ ಲಿಂಗಾಯತರ ಪ್ರಗತಿಪರ ಧೋರಣೆಯ ಬಗ್ಗೆ ಆಶ್ಚರ್ಯವನ್ನೂ ಹುಟ್ಟಿಸುತ್ತದೆ. ಕಕ್ಕಯ್ಯ ಚನ್ನಬಸವನ ತಂದೆ ಎಂಬುದಕ್ಕೆ ಸ್ವಲ್ಪ ಸುಳಿವು ಸಿಕ್ಕಿದರೂ ನಾನು ಹೆಮ್ಮೆಯಿಂದ ಬೀಗುತ್ತಿದ್ದೆ. ಆದರೆ ಕಕ್ಕಯ್ಯ ಬಸವನಿಗೆ ತುಂಬ ಹಿರಿಯ ಸಮಕಾಲೀನನಾದ್ದರಿಂದ ಚನ್ನಬಸವ ಹುಟ್ಟುವ ಕಾಲಕ್ಕೆ ಆತ ತೀರ ವಯಸ್ಕನಾಗಿದ್ದ. ಶಿವನ "ಪ್ರಸಾದ"ದಿಂದ ಚನ್ನಬಸವ ಹುಟ್ಟಿದ ಎಂಬ ಕತೆಯಿರುವುದರಿಂದ ಪ್ರಸಾದ ಮಾತಿಗೆ ಹರಕೆ, ಅನುಗ್ರಹ, ಆಶೀರ್ವಾದ, ಮಹಿಮೆ ಎಂದು ಮಾತ್ರ ಅರ್ಥ ಮಾಡಬೇಕಾಗುತ್ತದೆ. ಕಕ್ಕಯ್ಯನೇ ಚೆನ್ನಬಸವನ ತಂದೆ ಎಂದು ಖಚಿತವಾಗಿ ಹಠತೊಟ್ಟು ಯಾರೂ ವಾದಮಾಡಿದಂತೆಯೂ ನನ್ನ ಗಮನಕ್ಕೆ ಬಂದಿಲ್ಲ.

**ವಿ.ಜಿ. ಕುಲಕರ್ಣಿ**

15. ಶಿವಭಕ್ತರಲ್ಲದ ಅಸ್ಪೃಶ್ಯರ ವಿಷಯವಾಗಿ–ಅವರೇ ಬಹುಸಂಖ್ಯಾತರಾಗಿದ್ದಿರಬೇಕು–ಲಿಂಗಾಯತ ದೃಷ್ಟಿ ಹೇಗೆ ಇದ್ದಿತು? ಆದರೂ ಅಸ್ಪೃಶ್ಯರಾಗಿ

ಉಳಿಯಬೇಕೆಂದು ಇತ್ತೇ? ಎಲ್ಲರಿಗೂ ಸಮಾನತೆ ಗುರಿಯಾಗಿತ್ತೆ? ಜಾತಿ ನಿರ್ಮೂಲನೆಗಿಂತ ಮತ ಪ್ರಚಾರ ಅವರ ಮುಖ್ಯ ಉದ್ದೇಶವಾಗಿತ್ತೇ?

– ಅಸ್ಪೃಶ್ಯರ ಬಗ್ಗೆ ಲಿಂಗಾಯತರ ದೃಷ್ಟಿಯೇನಿತ್ತು ಎಂಬುದರ ಬಗ್ಗೆ ನಾನು ಸಾಕಷ್ಟು ಹಿಂದೆ ವಿಚಾರ ಮಾಡಿದ್ದೇನೆ. ಅವರು ಲಿಂಗವಂತರಾದ ಮೇಲೆ ಅಸ್ಪೃಶ್ಯರಾಗಿ ಉಳಿಯಕೂಡದೆಂಬುದೇ ಮೇಲ್ಜಾತಿಯ ಲಿಂಗಾಯತರ ಆಶಯವಾಗಿತ್ತು. ಮತ ಪ್ರಚಾರಕ್ಕಿಂತ ಮನುಷ್ಯತ್ವ ಸ್ಥಾಪನೆ ಆ ಚಳವಳಿಯ ಮೂಲ ಪ್ರಚೋದನೆಯಾಗಿತ್ತು.

**ಹ.ದೇ. ಚಂದನಗೌಡ್ರ**

16. ಕೊಂಡಗುಳಿ ಕೇಶಿರಾಜ ದಣ್ಣಾಯಕರು ವೀರಶೈವರಾಗಿದ್ದರೆಂಬುದಕ್ಕೆ ಪ್ರಮಾಣಗಳೇನು?

– ನನ್ನ ಹಲವು ಬರಹಗಳಲ್ಲಿ ನಾನು ಕೇಶಿರಾಜ ವೀರಶೈವನೆಂದು ಸ್ಪಷ್ಟವಾಗಿ ತೋರಿಸಿದ್ದೇನೆ. ಅವನು ವೀರಶೈವನಲ್ಲವೆಂದು ತೋರಿಸುವುದು ಮಾತ್ರ ಕಷ್ಟ.

17. ಬಸವಾದಿ ಶರಣ ಪ್ರಣೀತ ವೀರಶೈವಕ್ಕೂ ಕೊಂಡಗುಳಿ ಕೇಶಿರಾಜನು ಆಚರಿಸುತ್ತಿದ್ದ ವೀರಶೈವಕ್ಕೂ ಏನಾದರೂ ವ್ಯತ್ಯಾಸವಿದೆಯೇ? ಇದ್ದರೆ ಯಾವ ರೀತಿಯಲ್ಲಿ?

– ನಾನು ಇದಕ್ಕೂ ಅಲ್ಲೇ ಉತ್ತರ ಕೊಟ್ಟಿದ್ದೇನೆ. ಕೇಶಿರಾಜನ ಕಾಲದಲ್ಲಿ ಲಿಂಗವನ್ನು ಪ್ರತ್ಯೇಕವಾಗಿ ಇಟ್ಟು ಪೂಜಿಸುತ್ತಿದ್ದರು, ಮೈಮೇಲೂ ಕಟ್ಟಿಕೊಳ್ಳುತ್ತಿದ್ದರು. ಬಸವಣ್ಣನ ಕಾಲಕ್ಕೆ ಅದು ಮೈಮೇಲೆ ಕಟ್ಟಿಕೊಳ್ಳುವ ಇಷ್ಟಲಿಂಗವಾಗಿ ಮಾತ್ರ ಉಳಿಯಿತು. ಇಂತಹ ಕೆಲವು ಮುಖ್ಯ ವ್ಯತ್ಯಾಸಗಳನ್ನು ತೋರಿಸಲು ಸಾಧ್ಯ.

18. ಅವನೇ ಪ್ರಪ್ರಥಮ ಇಷ್ಟಲಿಂಗೋಪಾಸಕನಾಗಿದ್ದರೆ ಅವನನ್ನೇ ಲಿಂಗವಂತ ಧರ್ಮ ಸ್ಥಾಪನಾಚಾರ್ಯನೆಂದು ಏಕೆ ಉಲ್ಲೇಖಿಸಲಾಗಿಲ್ಲ?

– ಅವನೇ ಪ್ರಥಮ ಲಿಂಗೋಪಾಸಕ ಅಲ್ಲ. ಅವನಿಗಿಂತ (ಸು. 1120) ಹಿಂದೆ ಇದ್ದ ದೇವರ ದಾಸಿಮಯ್ಯನೂ (ಸು. 1040) ಬಹುಶಃ ಲಿಂಗವಂತನೇ. ಲಿಂಗಾಯತ ಮತದ ಸ್ಥಾಪನಾಚಾರ್ಯರು ಯಾರು? ತಿಳಿಯದು. (ದೇವರ ದಾಸಿಮಯ್ಯ ಕನ್ನಡದಲ್ಲಿ ಏನು ಬರೆದಿದ್ದಾನೋ ತಿಳಿಯದು. ಸು. 1140ರಲ್ಲಿದ್ದ ಜೇಡರ ದಾಸಿಮಯ್ಯ ಇನ್ನೊಬ್ಬ ಲಿಂಗವಂತ ಮತ್ತು ವಚನಕಾರ.)

**ಶಿ.ಚ. ವಾಘಮೋರೆ**

19. ಹೊಲೆಯರು ಮತ್ತು ಮಾದಿಗರಲ್ಲಿ ಭೇದ ಭಾವ ಬರಲು ಕಾರಣಗಳೇನು?

– ಈ ಬಗ್ಗೆ ಹೆಚ್ಚಿನ ಸಂಶೋಧನೆಗಳಾಗುವುದು ಅಗತ್ಯ. ಹಿಂದಿನ ಸಾಹಿತ್ಯದಲ್ಲಿ ಮತ್ತು ಈಗ ಎಷ್ಟೋ ಸಾರಿ ವ್ಯವಹಾರದಲ್ಲಿ ಅವರಿಬ್ಬರೂ ಒಂದೇ ಎಂದು ಕಲ್ಪಿಸಲಾಗುತ್ತಿದೆ. ಅವರಿಬ್ಬರಿಗೂ ಭೇದಗಳಿರುವುದಂತೂ ಸ್ಪಷ್ಟ.

20. ಹೊಲೆಯರು ಮತ್ತು ಮಾದಿಗರು ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಮತ್ತು ನೈತಿಕ ರಂಗಗಳಲ್ಲಿ ಹಿಂದುಳಿಯಲು ಕಾರಣಗಳೇನು?

– ಅವರಿಗಿಂತ ಮೇಲಿರುವ ಎಲ್ಲ ಜಾತಿಯ ಜನ ಶತಮಾನಗಳಿಂದ ಹೊಲೆಯ ಮಾದಿಗರನ್ನು ದೂರವಿಟ್ಟು ಅವರು ಯಾವುದೇ 'ಶುದ್ಧ' ಬೌದ್ಧಿಕ ವಿದ್ಯೆ ಹುದ್ದೆಗಳಿಗೆ ಶಾಶ್ವತವಾಗಿ ಅನರ್ಹರಾಗುವಂತೆ ನೋಡಿಕೊಂಡದ್ದು.

## ಡಾ. ರಾಘವೇಂದ್ರರಾವ್

21. ಮತಗಳ ಚೌಕಟ್ಟಿನಲ್ಲೇ ಮತಗಳ ಇರುವಿಕೆಯಿಂದ ಸಂಭವಿಸುವ ಸಮಸ್ಯೆಗಳನ್ನು ಪರಿಹರಿಸಲಾರೆವು. ಬಸವಣ್ಣನವರ ಕ್ರಾಂತಿ ನಿಷ್ಫಲವಾಗಿರುವುದಕ್ಕೆ ಇದೇ ಕಾರಣ. ನಿಮ್ಮ ಪ್ರತಿಕ್ರಿಯೆ ಏನು?

– ಕ್ರಾಂತಿ ಏಕೆ ನಿಷ್ಫಲ ಎಂಬುದಕ್ಕೆ ಒಂದೇ ಕಾರಣ ಇರಲಾರದು. ಮತದ ಚೌಕಟ್ಟೂ ಹಲವು ಕಾರಣಗಳಲ್ಲಿ ಒಂದು ಆಗಿರಬಹುದು. ಆದರೆ, ಕ್ರಾಂತಿ ನಿಷ್ಫಲ ಎಂಬ ಮಾತು ನನಗೆ ಅಷ್ಟು ಆಕರ್ಷಕವಾಗಿ ತೋರುವುದಿಲ್ಲ. ಅಂದಿನ ದಿನಗಳಲ್ಲಿ ಮತದ ಚೌಕಟ್ಟಿನಿಂದ ಬೇರೆಯಾಗಿ ನಿಂತು ಎಂತಹ ಧೀಮಂತನಿಗೂ ಯೋಚಿಸುವುದು ಅಸಾಧ್ಯವಾಗಿರುವಾಗ–ಇಂದಿಗೂ ಅದು ಕಷ್ಟವಾಗಿರುವಾಗ ಆ ಮಿತಿಯಲ್ಲಿ ಆ ಚಳವಳಿ ಏನನ್ನು ಸಾಧಿಸಿತು, ಎಷ್ಟು ಒಳಿತನ್ನು ಮಾಡಿತು ಎಂಬುದು ನನಗೆ ಹೆಚ್ಚು ಮುಖ್ಯವಾಗುತ್ತದೆ. ಚಳವಳಿಯ ವೈಫಲ್ಯದ ವಿಷಯವನ್ನೇ ಮಾತನಾಡಬಾರದು ಎಂಬುದು ನನ್ನ ಅಭಿಪ್ರಾಯವಲ್ಲ.

## ಸತ್ಯಪ್ರಜ್ಞ

22. ಅಸ್ಪೃಶ್ಯತೆ ಇಂದಿಗೂ ಆಚರಣೆಯಲ್ಲಿ ಇರುವ ಲಿಂಗಾಯತ ಸಮಾಜಕ್ಕೂ ಬ್ರಾಹ್ಮಣ ಸಮಾಜಕ್ಕೂ ಏನು ಅಂತರ ಎಂದು ವಿವರಿಸುವಿರಾ?

– ಅಸ್ಪೃಶ್ಯತೆ ದೃಷ್ಟಿಯಿಂದ ನೋಡುವುದಾದರೆ ಏನೂ ಅಂತರವಿಲ್ಲ.

23. ಬ್ರಾಹ್ಮಣರಲ್ಲಿ ಮತ್ತು ಲಿಂಗಾಯತರಲ್ಲಿ ಒಳಪಂಗಡಗಳು ಇರುವಂತೆ ಅಸ್ಪೃಶ್ಯರಲ್ಲಿ ಒಳಜಾತಿಗಳಿರಬಹುದು. ಅಸ್ಪೃಶ್ಯರು ತಾವೇ ಒಳಜಾತಿಗಳನ್ನು ಮಾಡಿಕೊಂಡರೋ ಅಥವಾ ಉಚ್ಚಕುಲದವರು ಅಸ್ಪೃಶ್ಯರ ಮೇಲೆ ಹೇರಿದರೋ? ಹೇರಿದ್ದರೆ ಅದನ್ನು ಪಾಲಿಸುವುದು ಅಸ್ಪೃಶ್ಯರ ತಪ್ಪಲ್ಲ.

– ಒಳಜಾತಿಗಳಿವೆ ಮತ್ತು ಅವನ್ನು ಬಹುಶಃ ಅನ್ಯರು ಹೇರಿಲ್ಲ. ಆ 'ಅನ್ಯರು' ಅಸ್ಪೃಶ್ಯ ಜಾತಿಗಳಾಗಲು ನಿಮಿತ್ತವಾಗಿರಬಹುದು. ಜಾತಿಗಳು ಕ್ರಮೇಣ ಮೂಡಿದುವು, ಮತ್ತು ಅಸ್ಪೃಶ್ಯ ಎಂದು ಮೇಲಿನವರು ಭಾವಿಸಿದ ಜಾತಿಗಳೆಲ್ಲ ಸ್ಥೂಲವಾಗಿ ಒಂದು ಗುಂಪು ಎಂದು ಪರಿಗಣಿತವಾದುವು.

### ಸಿ.ಕೆ. ನಾವಲಗಿ

24. ಶೂದ್ರ ವಚನಕಾರರು ಸಂಸ್ಕೃತ ಪಂಡಿತರಿಗಿಂತ ತಾವೇನು ಕಡಿಮೆ ಅಲ್ಲ ಎಂಬುದನ್ನು ತೋರಿಸುವುದಕ್ಕಾಗಿ ತಮ್ಮ ವಚನಗಳಲ್ಲಿ ಶ್ಲೋಕ ಮತ್ತು ಸಂಸ್ಕೃತ ಶಬ್ದಗಳನ್ನು ಬಳಸಿದ್ದಾರೆಂದು ಹೇಳಿದಿರಿ. ಆದರೆ ಉಚ್ಚಮಟ್ಟದ ಕುಲದಲ್ಲಿ ಹುಟ್ಟಿದ ಬಸವಣ್ಣ, ಚನ್ನಬಸವಣ್ಣ ಇತ್ಯಾದಿ ಅವರೂ ತಮ್ಮ ವಚನಗಳಲ್ಲಿ ಸಂಸ್ಕೃತ ಭಾಷೆಯನ್ನು ಬಳಸಿದ್ದಾರೆ. ಕಾರಣವೇನು?

– ಬಸವ ಇತ್ಯಾದಿ ಉಚ್ಚವರ್ಗದ ವಚನಕಾರರು ಸಂಸ್ಕೃತ ಶ್ಲೋಕಗಳನ್ನು ತಂದಿದ್ದರೆ ಸ್ವಾಭಾವಿಕ. ಆದರೆ ಅವರಲ್ಲಿ ಲಿಂಗವಂತನಾದ ದಲಿತ ವಚನಕಾರ ಉರಿಲಿಂಗ ಪೆದ್ದಿಗಿಂತ ಬಹಳ ಕಡಮೆ ಸಂಸ್ಕೃತ ಉಲ್ಲೇಖಗಳು ಬರುವುದು ಗಮನಾರ್ಹ, ಮತ್ತು ನಾನು ಊಹಿಸಿದ್ದು ಬಹುಶಃ ಸರಿ.

### ಅರವಿಂದ ಮಾಲಗತ್ತಿ

25. ಮಾತಂಗಿಯಿಂದ ಹೊಲೆಯರು ಹುಟ್ಟಿದರು ಎನ್ನುವ ಮಾತು ನೀವು ಪ್ರಸ್ತಾಪಿಸಿದಿರಿ. ಆದರೆ ಪ್ರಚಲಿತವಾಗಿ ಮಾತಂಗಿಯರು ಮಾದಿಗ ಜನಾಂಗ ದಲ್ಲಿಯೇ ಇದ್ದಾರೆ. ಇದಕ್ಕೆ ನಮ್ಮ ಅಭಿಪ್ರಾಯವೇನು?

– ಮಾತಂಗಿಯಿಂದ ಹುಟ್ಟಿದರು ಎಂಬುದು ಹಿಂದಿನ ಒಂದು ನಂಬಿಕೆ. ಆ ನಂಬಿಕೆ ಇಂದಿಗೂ ಇದ್ದರೆ ಅದು ಸ್ವಾಭಾವಿಕ ತಾನೇ?

### ವಿಜಯ ಪಾಟೀಲ

26. ನಿಮ್ಮ ಅಂತಿಮ 'ಆಶಯ'ದಂತೆ ಹರಿಜನರನ್ನು ಮಠಗಳಿಗೆ ದೇವಾಲಯಗಳಿಗೆ ಕರೆದೊಯ್ದರೆ ಅಸ್ಪೃಶ್ಯತೆ ನಿರ್ಮೂಲವಾಗುವದೇ? ಔದಾರ್ಯ ಅನುಕಂಪ ಗಳಿಂದ ಅಸ್ಪೃಶ್ಯತೆ ನಾಶ ಆಗುವುದಿಲ್ಲ. ಲಿಂಗಾಯತ ತನ್ನ ಲಿಂಗಾಯತತನ ವನ್ನು ಬ್ರಾಹ್ಮಣ ತನ್ನ ಬ್ರಾಹ್ಮಣ್ಯವನ್ನು ಹರಿಜನ ತನ್ನ ಹರಿಜನತ್ವವನ್ನು ಸಂಪೂರ್ಣ ಬಿಟ್ಟು ಸಮೀಕರಣಗೊಳ್ಳುವುದೇ ಅಸ್ಪೃಶ್ಯತೆ ನಾಶಕ್ಕೆ ಔಷಧಿ ಅದೀತು. ಏನಂತೀರಿ?

– ಮಠ, ದೇವಾಲಯಗಳಿಗೆ, ಮನೆಯೊಳಕ್ಕೆ ಹರಿಜನರನ್ನು ಕರೆದೊಯ್ಯುವುದು ಸಾಂಕೇತಿಕ. ಅದು ಅಸ್ಪೃಶ್ಯತೆಯ ನಿವಾರಣೆಯ ಒಂದು ಹೆಜ್ಜೆ. ಆದರೆ

ಅಷ್ಟರಿಂದಲೇ ಅಸ್ಪೃಶ್ಯತೆ ನಿವಾರಣೆ ಆಗುವುದೇ ಎಂಬ ಪ್ರಶ್ನೆಗೆ, ಹೌದು ಎಂದು ಉತ್ತರ ಕೊಟ್ಟರೆ ಗಾಬರಿಪಡಬೇಕಾಗಿಲ್ಲ. ಅವರನ್ನು ಮುಟ್ಟುವುದು, ಅವರಿಂದ ಮುಟ್ಟಿಸಿಕೊಳ್ಳುವುದು, ಸವರ್ಣೀಯ ಹಿಂದೂಗಳಿಗೆ ಎಲ್ಲೆಲ್ಲಿಗೆ ಪ್ರವೇಶ ಉಂಟೋ ಅಲ್ಲಿಗೆಲ್ಲ ಅವರು ಎಲ್ಲ ಕಡೆಗೂ ಮುಕ್ತವಾಗಿ ಹೋಗಲವಕಾಶವಿರುವುದು – ಅಷ್ಟಾದರೆ 'ಅಸ್ಪೃಶ್ಯತೆ' ಎಂಬುದು ಎಲ್ಲಿ ಉಳಿಯಿತು? ಆದರೆ, ಅಷ್ಟು ಆಗಬೇಕಾದರೆ ಎಷ್ಟು ಕಾಲ ಬೇಕೋ ತಿಳಿಯದು. ಅದು ನಿಜ ಆಗುವ ಕಾಲ ಬಂದಾಗ, ಅಂತಹ ಸ್ಥಿತಿಯನ್ನು ಎಲ್ಲರೂ ಒಪ್ಪಿಕೊಂಡಾಗ ಅಸ್ಪೃಶ್ಯತೆ ಹೋಗಿರುತ್ತದೆ.

ಪ್ರಶ್ನೆಯ ಉತ್ತರಾರ್ಧದ ಬಗ್ಗೆ–ಪ್ರಶ್ನೆ ಕೇಳಲು ಚೆನ್ನ, ಹೌದು ಎಂದು ಉತ್ತರ ಕೊಡಲೂ ಚೆನ್ನ. ಆದರೆ ನೀವೆಂದಂತೆ ಆಗುವುದು ಸಾಧ್ಯವೇ? ಹರಿಜನ ತನ್ನ 'ಹರಿಜನತ್ವ'ವನ್ನು ಬಿಡುತ್ತೇನೆ ಎಂದಾನು. ಬ್ರಾಹ್ಮಣ ತನ್ನ ಬ್ರಾಹ್ಮಣ್ಯವನ್ನು ಏಕೆ ಬಿಡುತ್ತಾನೆ? ಕಡುಬಡವನ, ಸಾಹುಕಾರನ ಆಸ್ತಿಗಳನ್ನು ಕೇಳಿದರೆ, ಅವರ ಪ್ರತಿಕ್ರಿಯೆಗಳು ಹೇಗಿರಬಹುದು! ಆದರೆ, ವಾಸ್ತವವಾಗಿ ನೋಡಿದರೆ, ಬ್ರಾಹ್ಮಣ ತನ್ನ ಬ್ರಾಹ್ಮಣ್ಯವನ್ನು ಬಿಡುವುದು ಎಂದರೇನು ಎಂಬುದನ್ನು ವಿವರಣೆ ಮಾಡಲು ಸಾಧ್ಯವೇ? ಜನಿವಾರ, ನಾಮ ಅಥವಾ ಗಂಧ, ಗಾಯತ್ರಿ ಉಚ್ಚಾರ, ದೇವರ ಪೂಜೆ ಇತ್ಯಾದಿಗಳನ್ನು ಅವನು ಬಿಡುವುದೇ ಬ್ರಾಹ್ಮಣ್ಯವನ್ನು ಬಿಡುವುದು ಎಂದು ನಾವು ಅಂದುಕೊಳ್ಳೋಣ. ಅವನ್ನು ಬಿಟ್ಟರೆ ವ್ಯಕ್ತಿ 'ಅಪ್ಪಟ ಮಾನವ' ಆಗುವ ಭರವಸೆ ಇದೆಯೇ? ಅದು ಇದ್ದೂ 'ಅಪ್ಪಟ ಮಾನವ'ನಾಗಲು ಅಡ್ಡಿ ಇದೆಯೇ? ವಾಸ್ತವ ಸಂಗತಿ ಎಂದರೆ, ಮನುಜಮತ ಎಂಬ ಮಾತು ಕೇವಲ ಆದರ್ಶದ ಮಾತು. ವಾಸ್ತವವಾಗಿ, ಭಾರತದಲ್ಲಿ ಪ್ರತಿಯೊಬ್ಬನೂ ಒಂದಲ್ಲ ಒಂದು ಜಾತಿಗೆ ಸೇರಿದ್ದಾನೆ. ಅದರಿಂದ ಅವನು ಬಿಡುಗಡೆ ಹೊಂದಿದ್ದರೂ, ಹೊಂದಿದ್ದೇನೆ ಎಂದು ಭಾವಿಸಿದರೂ ಉಳಿದವರ ಕಣ್ಣಲ್ಲಿ ಅವನ ಬಿಡುಗಡೆ ಇಲ್ಲ. ಈ ಮಾತು ಗಳನ್ನು ಜನ ತಪ್ಪು ತಿಳಿದು ನನ್ನನ್ನು ಟೀಕಿಸಲು ಅವು ರಾಮಬಾಣಗಳಾಗಿ ಪ್ರಯೋಗವಾಗಬಹುದೆಂಬ ಅಳುಕು ಇದ್ದರೂ, ಸ್ಪಷ್ಟವಾಗಿ ಹೇಳಲು ಯತ್ನಿಸು ತ್ತಿದ್ದೇನೆ. ಎಂ.ಎನ್. ಶ್ರೀನಿವಾಸರಂತಹ ಸಮಾಜಶಾಸ್ತ್ರಜ್ಞರು ಜಾತಿಗಳು ಅಳಿದರೆ 'ಹಿಂದೂ ಧರ್ಮ'ವೇ ಅಳಿಯಬಹುದು ಎನ್ನುತ್ತಾರೆ. ಅವರನ್ನು ಜಾತ್ಯಂಧರು ಎಂದು ಟೀಕಿಸುವುದಕ್ಕಿಂತ ಅವರ ಮಾತಿನ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳಬೇಕು. ಬ್ರಾಹ್ಮಣ, ಲಿಂಗಾಯತರಿಗೆ ತಾವು ಹಿಂದೂ ಗಳೆಂದು ತೋರಿಸಿಕೊಳ್ಳಲು ಜನಿವಾರ, ಲಿಂಗಗಳು ಇವೆ. ಕೇವಲ ಜಾತಿಯಾದ ಒಕ್ಕಲಿಗ ಅಥವಾ ಕುರುಬ ತನ್ನ ಹಿಂದುತ್ವವನ್ನು ತಾನೊಂದು ಜಾತಿಗೆ ಸೇರಿದವನೆಂದು ಭಾವಿಸುವುದರಲ್ಲಿ, ವಿವಾಹದ ಸಂಬಂಧಗಳಲ್ಲಿ,

ಇನ್ನು ಕೆಲವು ಚಿಕ್ಕ ರಿಚುಯಲ್ಲುಗಳಲ್ಲಿ ಅನುಭವಿಸುತ್ತಾನೆ. ಹಿಂದೂ ಎಂಬ ಮಾತು ಗೊತ್ತಿಲ್ಲದಿದ್ದರೂ ಅವನು ತಾನು ಕ್ರಿಶ್ಚಿಯನ್‌ಗಿಂತ ಮುಸ್ಲಿಮನಿಗಿಂತ ಹಿಂದೂ ವ್ಯಾಪ್ತಿಯ ಇನ್ನೊಂದು ಜಾತಿಗೆ ಸಮೀಪವೆಂಬುದನ್ನು ಅನುಭವಿಸುತ್ತಾನೆ. ಎಂದರೆ, ಒಬ್ಬ ವ್ಯಕ್ತಿ ತನ್ನ ಜಾತಿಯನ್ನು ಬಿಡುವುದು ಎಂದಾಗ, ಆ ಜಾತಿ ತರಬಹುದಾದ ಮೇಲ್ಮೆಯ ಅಥವಾ ಕೀಳರಿಮೆಯ ಭಾವನೆಯನ್ನು ಬಿಡುವುದು ಎಂದರ್ಥವಾದರೆ ಮಾತ್ರ ಮೇಲಿನ ಪ್ರಶ್ನೆಯ ಉತ್ತರಾರ್ಧಕ್ಕೆ ಬೆಲೆ ಬರುತ್ತದೆ. ಜಾತಿಗಳು ಇರಬೇಕೆ ಬಿಡಬೇಕೆ ಎಂಬ ಪ್ರಶ್ನೆಗೆ ನಾವು ಏನೇ ಉತ್ತರ ಹೇಳಿದರೂ ಅವು ಭಾರತದ ಪರಿಸರದಲ್ಲಿ ಒಂದು ಕಠೋರ ವಾಸ್ತವ. ಎಲ್ಲ ಹಿಂದೂಗಳು ಕ್ರಿಶ್ಚಿಯನ್ನರೋ ಮುಸಲ್ಮಾನರೋ ಆಗಿ ಪರಿವರ್ತನೆ ಹೊಂದಿದ ನಾಲ್ಕಾರು ತಲೆಮಾರುಗಳು ಕಳೆದ ಮೇಲೆ ಭಾರತದಿಂದ ಜಾತಿಗಳು ಹೋಗಬಹುದು (–'ಬಹುದು' ಅಷ್ಟೇ) ಆಧುನಿಕ ನಗರಗಳ ಅತ್ಯಾಧುನೀಕೃತ ಸಂಸಾರಗಳಲ್ಲೂ ಜಾತಿ, ತತ್ಸಂಬಂಧ ರಿಚುಯಲ್ಲುಗಳು ಇನ್ನೂ ಜೀವಂತವಾಗಿರುವುದನ್ನು ಗಮನಿಸಬೇಕು. ಇಷ್ಟಾದರೂ ಆಧುನಿಕತೆ ಜಾತಿ ಜಾತಿಗಳ ಮಧ್ಯದ ಗೋಡೆಗಳ ದೃಢತೆಯನ್ನು ಕದಲಿಸಿದೆಯೆಂಬುದನ್ನು ಒಪ್ಪಬೇಕು. ಒಂದೆರಡು ಶತಮಾನಗಳ ಬಳಿಕ ಜಾತಿಗಳು ಹೇಗಿರುತ್ತವೆಂಬುದು ಒಂದು ಸಮಾಜೋವೈಜ್ಞಾನಿಕ ಕಾದಂಬರಿಯೊಂದಕ್ಕೆ (Socio-scientific fiction) ವಸ್ತುವಾಗಬಹುದು.

## ಎ.ವಿ. ಹೂಗಾರ

27. ಜಾತಿ ಹುಟ್ಟಿನಿಂದ ಬಂದಂಥದ್ದನ್ನು ಬಸವಣ್ಣನವರು ಒಪ್ಪಿಲ್ಲ, ಅಲ್ಲಗಳೆದಿದ್ದಾರೆ. ಅನೇಕ ಶರಣರ ವಿಚಾರವೂ ಅಷ್ಟೇ, ಜಾತಿಯ ಕಟ್ಟಿನ ನಿರ್ನಾಮ. ಲಿಂಗಾಯತ ಕ್ರಾಂತಿಯ ಮೂಲ ಉದ್ದೇಶ ವರ್ಣಧರ್ಮ ನಾಶವೇ ಎಂದು ಎಷ್ಟೋ ವಚನಗಳಲ್ಲಿ ತಿಳಿದುಬರುತ್ತದೆ. ಜಾಡ, ಮಾದಿಗ, ಡೋಹರ ಇವು ವೃತ್ತಿ ಅಥವಾ ಕಾಯಕ ಮೂಲದಿಂದ ಉಳಿದುಕೊಂಡು ಬಂದ ಹೆಸರೇ ಹೊರತು ಜಾತಿವಾಚಕವೆಂದು ನಂಬುವಂತಿಲ್ಲ. ಶರಣರ ವಿಚಾರವೂ ಕೂಡ ಸ್ಪಷ್ಟವಾಗಿದೆ. ತಮ್ಮ ಹೇಳಿಕೆ ಏನು ಈ ವಿಚಾರದಲ್ಲಿ?

– ಮೇಲಿನ ಉತ್ತರದಲ್ಲಿ ಮತ್ತು ನನ್ನ ಉಪನ್ಯಾಸಗಳಲ್ಲಿ ಜಾತಿಯ ಅನಿವಾರ್ಯತೆಯನ್ನು ಹೇಳಿದ್ದೇನೆ. ಶರಣರು ಹುಟ್ಟಿನಿಂದ ಬರುವ ಜಾತಿಯನ್ನು ಅಲ್ಲಗಳೆದಿದ್ದಾರೆ. ಎಂದರೆ ಹುಟ್ಟಿನಿಂದ ಬರುವ ಜಾತಿಗಳಲ್ಲಿ ಮೇಲು ಕೀಳುಗಳನ್ನು ಅಲ್ಲಗಳೆದಿದ್ದಾರೆ ಎಂದರ್ಥ. ಎಲ್ಲಿಯಾದರೂ ನೇಕಾರನ ಮಗ ನೇಕಾರನೇ ಆಗಬೇಕಿಲ್ಲ, ಡೋಹರನ ಮಗ ಅದೇ ವೃತ್ತಿ ಮಾಡಬೇಕಿಲ್ಲ ಎಂದು ಹೇಳಿ ಅದರಂತೆ ಆಚರಿಸಿದ್ದಾರೆಯೇ? ಬಹುಶಃ ಇಲ್ಲ. 'ಕಾಯಕ'ದಲ್ಲಿ ವೃತ್ತಿಯನ್ನು

ಉದಾತ್ತೀಕರಿಸುವುದರಿಂದ ಎಲ್ಲ ವೃತ್ತಿಗಳೂ ತಾತ್ವಿಕವಾಗಿ ಸಮಾನವಾಗುತ್ತವೆ. ಮಂತ್ರಿ ಕೆಲಸ, ಚಪ್ಪಲಿ ಕೆಲಸ ಎರಡೂ ಒಂದೇ ಆದ್ದರಿಂದ ಚಪ್ಪಲಿ ಹೊಲೆಯುವವನು ಮಂತ್ರಿ ಆಗಬೇಕು ಎಂದು ಹೇಳುವ ಅಗತ್ಯವೇ ಅವರಿಗೆ ಕಾಣಲಿಲ್ಲ. ಬೇರೆ ಬೇರೆ ವೃತ್ತಿಯ ಭಕ್ತರು ತಮ್ಮ ವೃತ್ತಿಗಳನ್ನು ಕೈಬಿಟ್ಟರೆಂಬುದಕ್ಕೆ ಆಧಾರಗಳಿಲ್ಲ. ಬದಲು ಅವನ್ನೇ ಮುಂದುವರಿಸಿದರು (ಉದಾ: ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಮಾದಾರ ಧೂಳಯ್ಯ ಇತ್ಯಾದಿ).

## ಎನ್.ಜಿ. ಮಹಾದೇವಪ್ಪ

28. ತಾವು ಬುದ್ಧನ ವಿಚಾರದಲ್ಲಿ ಮಾತನಾಡುವಾಗ ಅವನು ತನ್ನ ಅನುಯಾಯಿಗಳಿಗೆ spiritual equality ಕೊಟ್ಟ,ಆದರೆ social equality ಕೊಡಲಿಲ್ಲ ಎಂದು ಹೇಳಿದಿರಿ. ದಯವಿಟ್ಟು ಉದಾಹರಣೆಗಳೊಂದಿಗೆ ವಿವರಿಸಿ, ಹಾಗೂ ಆಕರಗಳನ್ನು (ಸಾಧ್ಯವಾದರೆ) ತಿಳಿಸಿ.

– ಮೇಲಿನ ಮಾತುಗಳನ್ನು ಬುದ್ಧನಿಗೆ ಸಂಬಂಧಿಸಿದಂತೆ ಹೇಳಿಲ್ಲ; ಆದರೆ ಲಿಂಗಾಯತೇತರ ಭಕ್ತಿ ಚಳವಳಿಗಳನ್ನು ಕುರಿತು ಹೇಳಿದ್ದೇನೆ.

ನಾನು ಹೇಳಿದ್ದು, ಬುದ್ಧ ಜಾತಿವಿನಾಶದ ಪ್ರಯತ್ನವನ್ನು ಮಾಡಲಿಲ್ಲ. ಅವನ ಯತ್ನಗಳು ಜಾತಿ ಜಾತಿಗಳ ಮಧ್ಯದ ಭೇದವನ್ನು ಅಳಿಸಿ ಹಾಕದಿದ್ದರೂ ಆ ಭೇದವು ಕಡಮೆಯಾಗಲು ಅವು ಕಾರಣವಾದವು. ಈ ಬಗ್ಗೆ ಫಿಕ್, ಈಲಿಯಟ್ ಎಂಬ ವಿದ್ವಾಂಸರ ಉಲ್ಲೇಖಗಳನ್ನು ಕೊಟ್ಟು ಪ್ರತಿಪಾದಿಸಿರುವ ಡಾ. ಗುರ್ಯೆಯವರ ಮಾತುಗಳನ್ನು ಮತ್ತೊಮ್ಮೆ ಇಲ್ಲಿ ಹೇಳುತ್ತೇನೆ.

"...in the matter of caste restrictions, the preachings and actions of Buddha had only a general liberalizing effect... Fick has rightly observed that it is wrong to look upon Buddha as a social reformer and Buddhism as a revolt against caste..." (-Caste and Race in India. Bombay, 1969. p. 72). "Buddha could not deny the existence of the caste system. It was perhaps too deep rooted in the Indian society to be got rid of altogether. He, however, tried to mitigate the evils of this system" (B.N. Mukherjee : 'The early Buddhism and its social content.' Social contents of Indian Religious Reform Movements : Ed: S.P. Sen. Calcutta, 1978. P.9) ವಚನ ಚಳವಳಿಯ ಬಳಿಕ ಮಹಾರಾಷ್ಟ್ರದಲ್ಲಿ ಕಾಣಿಸಿಕೊಂಡ 'ವಾರಕರೀ' ಚಳವಳಿ ಗಮನಾರ್ಹ. ಎಲ್ಲ

ಜಾತಿಯ ಜನರೂ ಸಮಾನರಂತೆ ಭಾವಿಸಿ ವರ್ಷದಲ್ಲಿ ಆಷಾಢ–ಕಾರ್ತಿಕ ಮಾಸಗಳಲ್ಲಿ ಫಂಡರಾಪುರಕ್ಕೆ ಯಾತ್ರೆ ಹೋಗುವುದೇ ವಾರಕರೀ ಚಳವಳಿ. ಅದರಲ್ಲಿ ಎಲ್ಲ ಜಾತಿಯ ಜನರೂ ಭಾಗವಹಿಸುತ್ತಿದ್ದರಾದರೂ ಅವರಲ್ಲಿ ಇದ್ದುದು ಆಧ್ಯಾತ್ಮಿಕ ಸಮಾನತೆ ಮಾತ್ರ. ಆ ಚಳವಳಿಯ ಸಂತರು ಜಾತಿ ಭೇದದ ಸಾಮಾಜಿಕ ಅಸಮಾನತೆಗಳನ್ನು ಒಪ್ಪಿಕೊಂಡಿದ್ದರು. (ನೋಡಿ–N.H. Kulkarnee : 'Religious movements in Medieval Maharashtra'. ಅದೇ. ಪು. 1623) ಈ ಹಿನ್ನೆಲೆಯಲ್ಲಿ ವಚನ ಚಳವಳಿಯು ಸಾಮಾಜಿಕ ಸಮಾನತೆ ಯನ್ನೂ ಪ್ರತಿಪಾದಿಸಿದ್ದು ವಿಶಿಷ್ಟವಾಗಿ ಎದ್ದು ಕಾಣುತ್ತದೆ.

ಇನ್ನೂ ಹಲವು ಪ್ರಶ್ನೆಗಳು ಬಂದಿವೆ. ಅವು ಮಹತ್ವದವಲ್ಲದಿದ್ದರೂ ಅವುಗಳಿಗೆ ಉತ್ತರಗಳು ಸ್ವಯಂವೇದ್ಯವೆಂದು ಅನ್ನಿಸಿದ್ದರಿಂದ ಮತ್ತು ಅವು ಇಂದಿನ ನಮ್ಮ ಜನರ ಧೋರಣೆಯನ್ನೂ ತೀವ್ರ ಭಾವನೆ ತಾಕಲಾಟಗಳನ್ನೂ ಹೇಳುವುದರಿಂದ ಅವನ್ನು ಪಟ್ಟಿ ಮಾಡಿ ಕೊಡುತ್ತೇನೆ. (ಕೆಲವಕ್ಕೆ ಕಂಸದಲ್ಲಿ ಉತ್ತರ ಸೂಚಿಸಿದ್ದೇನೆ.)

1. ನಮ್ಮ ಸಾಹಿತ್ಯದ ಪರಂಪರೆಯನ್ನು ಅನುಲಕ್ಷಿಸಿ 'ಹರಿಜನ'ರನ್ನು 'ಹಿರಿಜನ' ರೆಂದು ಕರೆದರೆ ನಾವು ಹರಿಜನರಿಗೆ ಯೋಗ್ಯ ಸ್ಥಾನವನ್ನು ಸಮಾಜದಲ್ಲಿ ಕಲ್ಪಿಸಿದಂತೆ ಆಗುವುದಿಲ್ಲವೇ?

2. ಅಸ್ಪೃಶ್ಯತೆಯ ನಿವಾರಣೆಗಾಗಿ ವೇದಕಾಲದಿಂದ ಇಲ್ಲಿಯವರೆಗೆ ಹೆಣಗಾಡಿದ್ದು ಮೂರು ದಿನಗಳ ಉಪನ್ಯಾಸಗಳ ಸಾರವಾಗಿತ್ತೆನ್ನಿಸಿದೆ. ಆದರೆ ಮಾನವೀಯ ಮೌಲ್ಯಗಳು ಹಿಂದಿನಕ್ಕಿಂತ ಈಗ ಕೆಳಗಿಳಿಯಲು ಕಾರಣವೇನು?

3. ನಿನ್ನೆ ದಿವಸ ಬಸವಾದಿ ಶರಣರು ಕೇವಲ ಸಮಾಜ–ಧರ್ಮ ಉತ್ಕ್ರಾಂತಿ ಯನ್ನಷ್ಟೆ ಮಾಡಿದ್ದರು, ರಾಜಕೀಯ ಆರ್ಥಿಕ ಕ್ರಾಂತಿಗೆ ಮಹತ್ವ ಕೊಟ್ಟಿಲ್ಲ ವೆಂದು ಹೇಳಿದ್ದೀರಿ. ನನಗನಿಸುವ ಹಾಗೆ ಬಸವಾದಿ ಶರಣರಿಗೆ ಆರ್ಥಿಕ ಉತ್ಕ್ರಾಂತಿ ಅವರ ಧರ್ಮದ ಒಂದು ಪ್ರಮುಖ ಅಂಗವಾಗಿತ್ತು ಎಂದನ್ನಿಸು ವುದು. ದಯವಿಟ್ಟು ವಿಶ್ಲೇಷಿಸಬೇಕು.

4. ಹಿರಿಯ ಕುಲದವರು ಊರ ಹೊರಗಿದ್ದಂತೆ ಹಿರಿಯ ಮಠಗಳೂ (ಹಿರೇಮಠಗಳೂ) ಸಾಮಾನ್ಯವಾಗಿ ಊರ ಹೊರಗೇ ಇವೆ. ಊರಿನ ಸ್ವಚ್ಛತೆ ಹಿರಿಯ ಕುಲದವರ ಕಾಯಕವಾಗಿದ್ದಂತೆ ಹಿರಿಯ ಮಠಗಳೂ ಜನಮನದ ಕಾಳಿಕೆ ಕಳೆಯಬಲ್ಲವಾದ್ದರಿಂದ ಈ ಸಾಮ್ಯವಿರಬಹುದೇ, ಸ್ವಾಮಿ? (ಉತ್ತರ : ಸಾಮ್ಯ ಆಕಸ್ಮಿಕ. ಊರೊಳಗೂ ಮಠಗಳಿರುವುದುಂಟು. ಎಲ್ಲ ಧರ್ಮದ ಮಠಗಳು ಊರ ಹೊರಗಿರುವುದು ಧಾರ್ಮಿಕ ವ್ಯಕ್ತಿಗಳ ಅನುಷ್ಠಾನಾದಿ

ಕಾರ್ಯಗಳಿಗೆ ಅನುಕೂಲ. ಸಾಮಾನ್ಯವಾಗಿ ಗುರುವರ್ಗದ ಹಿರೇಮಠಗಳು ಊರೊಳಗೂ ವಿರಕ್ತ ಮಠಗಳು ಊರ ಹೊರಗೂ ಇರುತ್ತವೆ. ಗುರುಪೀಠ, ವಿರಕ್ತ ಪೀಠಗಳ ಮಧ್ಯೆ ಕರ್ತವ್ಯಭೇದಗಳಿವೆ).

5. ಇಂದಿನ ಯುಗದಲ್ಲಿ ಹರಿಜನರು ಹೆಚ್ಚಿನ ಪ್ರಮಾಣದಲ್ಲಿ ಕೀಳುಜಾತಿಯ ತೊಂದರೆಗಿಂತ ಆರ್ಥಿಕ ತೊಂದರೆಯಲ್ಲಿದ್ದಾರೆ. ನಾವು ಮೇಲ್ಜಾತಿಯವರಾಗಿ ಅವರನ್ನು ಹರಿಜನರೆಂದು ಉದ್ಧರಿಸಹೊರಟರೆ ಅದು ಅಸಂಬದ್ಧ ವೆನ್ನಿಸಲಿಕ್ಕಿಲ್ಲವೇ? ನಾವು ಯಾವ ಜಾತಿಯವರಾಗದೇ ಅವರನ್ನು ಮನುಷ್ಯ ರೆಂದು ಕಂಡರೆ ಹೇಗೆ?

6. ಹರಿಹರನ ಅಥವಾ ಪಾಲ್ಕುರಿಕೆ ಸೋಮನಾಥನ ಇಲ್ಲವೇ ಭೀಮಕವಿ ನಿರೂಪಿಸಿದ ಕಪಾಲದಲ್ಲಿಯ ಮಾಂಸದ ಕಥೆ ಮಹಾಭಾರತದಲ್ಲಿಯದು. ಅದಕ್ಕೆ ತಾವು ಹೊಸ ತಿರುವು ಕೊಟ್ಟು ಬಳಸಿದ್ದು ಆಶ್ಚರ್ಯ. (ಉತ್ತರ : ಆ ಸಭೆ ಯಲ್ಲಿ ಈ ಪ್ರಶ್ನೆ ಕೇಳಿದವರಿಗೆ ಮಹಾಭಾರತದಲ್ಲಿ ಬರುವ ಕತೆಯ ಆಕರ ವನ್ನು ಕೊಟ್ಟರೆ ನನ್ನ ಹೇಳಿಕೆಯಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುತ್ತೇ ನೆಂದು ಹೇಳಿ ಪತ್ರ ಬರೆದು ತಿಳಿಸಲು ಕೇಳಿಕೊಂಡೆ. ಅವರಿಂದ ಇನ್ನೂ ಪತ್ರ ಬಂದಿಲ್ಲ.)

7. ಅಸ್ಪೃಶ್ಯತೆಯನ್ನು ಹೋಗಲಾಡಿಸಲಿಕ್ಕೆಂದೇ ವೀರಶೈವ ಧರ್ಮ ಹುಟ್ಟಿದೆ ಎಂದು ಹೇಳಿದ ನೀವು ಅದನ್ನು ಹೇಗೆ ಸಾಧಿಸುತ್ತೀರಿ? (ಉತ್ತರ : ನಾನು ಹಾಗೆ ಹೇಳಿಲ್ಲ. ಧರ್ಮದ ಹುಟ್ಟಿದ ತೇದಿ ತಿಳಿಯದು. ಆದರೆ ಲಿಂಗಾಯತ ಚಳವಳಿ ಆರಂಭವಾಗಲು ಉಂಟಾದ ಅನೇಕ ಪ್ರಚೋದನೆಗಳಲ್ಲಿ ಅಸ್ಪೃಶ್ಯರ ಹೀನಸ್ಥಿತಿಯೂ ಒಂದು ಎಂದಿದ್ದೇನೆ. ದೇವಾಲಯ ಬಹಿಷ್ಕಾರದಲ್ಲಿ ಅಸ್ಪೃಶ್ಯತೆಯ ಪಾತ್ರವೂ ಇದೆ ಎಂಬುದು ಒಂದು ನನ್ನ ಊಹೆ).

8. The food system (veg-non veg) is one of the factors in caste hierarchy. How is it looked upon by the Lingayats? Whether the Lingayatism is a parallel force or a rival force against Brahminism, or a social force in uplifting the non-Bramhins by infusing selt-respect? If so, how far the present day Lingayat commynity practises it?

9. ಅಸ್ಪೃಶ್ಯರ ಏಳಿಗೆಗೆ ಪ್ರಾರಂಭಮಾಡಿ ವೀರಶೈವಧರ್ಮ ಪವಿತ್ರವಾಗಿರುವು ದಾದರೆ... ಇತ್ತೀಚಿನ ಲಿಂಗಾಯತ ಬುದ್ಧಿಜೀವಿಗಳು ಜಾತೀಯತೆಯನ್ನು ಅಕ್ಷರಶಃ ಪಾಲಿಸುತ್ತಾರಲ್ಲ? ಅವರಿಗೆ ನಿಮ್ಮ ಉಪದೇಶ ಏನು? (ಉತ್ತರ : ಅವರಿಗೆ ಉಪದೇಶ–ನೀವು ಬುದ್ಧಿಜೀವಿಗಳೆಂಬ ಭ್ರಾಂತಿಯಿಂದ ಬೇಗ ಹೊರ ಬನ್ನಿರಿ.)

10. ಹದಿನೆಂಟು ಜಾತಿಗಳ ಬಗ್ಗೆ ಅಭ್ಯಾಸಮಾಡುತ್ತಿರುವ ಮತ್ತು ಬರಿಯ ಮಾತಿನಲ್ಲಿ ಜಾತಿ ಹೋಗಬೇಕೆನ್ನುವ ಹತ್ತೊಂಬತ್ತನೇ ಜಾತಿಯ ನಾಮಕರಣವನ್ನು ಹೇಳುವಿರಾ ಸ್ವಾಮಿ? (ಉತ್ತರ : ಸ್ವಾರ್ಥಿಗಳ ಜಾತಿ.)

11. ಹಿರಿಯ ಕುಲದವರ ಊರು ಹಿರೇಕೆರೂರು ಇರಬಹುದೇ? (ಉತ್ತರ : ಅಲ್ಲ. 'ಹಿರೇಕೆರೂರು' ಹೆಸರಿನ ಊರಿನ ಹತ್ತಿರದಲ್ಲೇ ಬರಿಯ 'ಕೆರೂರು' ಅಥವಾ 'ಚಿಕ್ಕೆರೂರು' ಇರಬೇಕು. ಒಂದೇ ಹೆಸರಿನ ಹಳ್ಳಿಗಳನ್ನು ಬೇರ್ಪಡಿಸಲು ಹೀಗೆ ಪೂರ್ವ ಪದಗಳನ್ನು ತರುವುದುಂಟು. 'ಕೆರೂರು' ಬಹುಶಃ ಕೆರೆಯ ಊರು ಇರಬೇಕು.)

12. ಶಂಬಾ ಅವರು ಹೇಳುವಂತೆ ನಮ್ಮ ಎಲ್ಲ ಧರ್ಮಗ್ರಂಥಗಳೂ (ವಚನಗಳನ್ನೂ ಸೇರಿಸಿ) ascetic cultನ್ನೇ ಪ್ರತಿಪಾದಿಸುವುದರಿಂದ ಒಟ್ಟು ಪರಿಣಾಮ ಪ್ರಗತಿವಿರೋಧಿಯೇ ಎಂದು ಅನ್ನಿಸುವುದಿಲ್ಲವೇ? (ಉತ್ತರ : ನನಗೆ ಈ ಪ್ರಶ್ನೆ ಅರ್ಥವಾಗದ್ದರಿಂದ ಉತ್ತರ ಹೇಳಲಾರೆ.)

13. ನೀವು ಉಲ್ಲೇಖಿಸಿದ ವಚನವೊಂದರಲ್ಲಿ ಬರುವ "ಹೊಲೆಯ ಹದಿನೆಂಟು ಜಾತಿ" ಎನ್ನುವಲ್ಲಿ 'ಹದಿನೆಂಟು' ಸಂಖ್ಯಾಸೂಚಕವಾಗಿರದೆ ಜಾತೀಯತೆಯ ವ್ಯಾಪಕತೆಯನ್ನು ಸೂಚಿಸುತ್ತಿರಬಹುದಲ್ಲವೇ?

14. ಮಾತು ಆಡಿದರೆ ಮುತ್ತಿನ ಹಾರದಂತಿರಬೇಕು ಎನ್ನುವ ಬಸವಣ್ಣನವರು ಭಾಷೆ ಸುಲಲಿತವಾಗಿರಬೇಕೆಂಬುದರ ಸೂಚನೆಯನ್ನು ಕೊಟ್ಟಿರುವುದನ್ನು ನಾವು ಕಾಣಬಹುದು. ಆದರೆ ಅವರೇ ಅಥವಾ ಆ ಸಂಪ್ರದಾಯದವರೆ ಭಾಷೆಯಲ್ಲಿ ಮಡಿವಂತಿಕೆಯನ್ನು ಹೋಗಲಾಡಿಸಲು ಪ್ರಯತ್ನಪಟ್ಟರೆಂಬುವದು ವಿರೋಧಾಭಾಸವಾಗಿ ಕಾಣುವುದಿಲ್ಲವೇ?

15. ಬಸವಣ್ಣನ ತರುವಾಯ ಬಂದ ಅವನ ಅನುಯಾಯಿಗಳು ಪ್ರಭಾವ ಬೀರದೆ ಹೋದದ್ದರಿಂದ ಚಳವಳಿ ಬೆಳೆಯಲಿಲ್ಲ ಅಂತ ತಿಳಿಯೋಣವೇ?

16. ಲಿಂಗಾಯತ ಮಠಾಧಿಪತಿಗಳು ಅಸ್ಪೃಶ್ಯತೆ ಚಳವಳಿಗೆ ಅಡ್ಡಬಂದರು, ಬಸವನ ತತ್ವಗಳಿಗೆ ತಿಲಾಂಜಲಿಯಿತ್ತರು. ಬಸವನ ಉಪಯೋಗವಾಯಿತು. ಆದರೆ ಬಸವನ ತತ್ವಕ್ಕೆ ಕಳಂಕ ತಂದರೆ?

17. ಬಸವ ಚಳವಳಿ ಲಿಂಗಾಯತರಿಂದಲೇ ಹಿಂದುಳಿಯಿತು. ಅಲ್ಲವೇ?

18. ಅಸ್ಪೃಶ್ಯತೆಯ ನಿವಾರಣೆಗಾಗಿ ಜೀವನವನ್ನೇ ತೇದ ಬಸವ ತನ್ನ ಜೀವನದಲ್ಲಿ ಮತ್ತೊಬ್ಬ ಹಿಂದುಳಿದವಳನ್ನು ವಿವಾಹವಾಗಿ "ನುಡಿದಂತೆ ನಡೆದ" ಎನಿಸಿಕೊಳ್ಳಬಹುದಾಗಿತ್ತಲ್ಲವೇ? ಇದಕ್ಕೆ ನಿಮ್ಮ ಅಭಿಪ್ರಾಯವೇನು ತಿಳಿಸಿ. ಏಕೆಂದರೆ ಬಸವ ಏಕಪತ್ನಿ ವ್ರತಸ್ಥನಂತೂ ಅಲ್ಲವಲ್ಲ!

19. ತಾವು ಬ್ರಾಹ್ಮಣರಿಂದ ಮಾತ್ರ ಅಸ್ಪೃಶ್ಯತೆ ನಡೆಯಿತೆಂದು ತಮ್ಮ ಭಾಷಣದಲ್ಲಿ ಹೇಳಿದಿರಿ. ಆದರೆ ಬ್ರಾಹ್ಮಣೇತರರಿಂದ ಅಸ್ಪೃಶ್ಯತೆ ನಡೆದಿಲ್ಲವೆ? ನಡೆಯುತ್ತಿಲ್ಲವೇ? (ಉತ್ತರ : ಅಸ್ಪೃಶ್ಯತೆಯ ಹುಟ್ಟಿನಲ್ಲಿ ಬ್ರಾಹ್ಮಣನ ಪ್ರಧಾನ ಪಾತ್ರವಿದೆ ಎಂದು ಮಾತ್ರ ಹೇಳಿದ್ದೇನೆ. ಈಗಂತೂ ಎಲ್ಲ ಮೇಲು ಜಾತಿಯವರೂ ಅಸ್ಪೃಶ್ಯತೆಯನ್ನು ಆಚರಿಸುತ್ತಿದ್ದಾರೆ.)

(ಮುಂದಿನ ಎರಡು ಪ್ರಶ್ನೆಗಳಲ್ಲಿ ಒಂದು ಮಾಹಿತಿರೂಪದ್ದು; ಮತ್ತೊಂದು ಸಂಪೂರ್ಣ ಅಪ್ರಸ್ತುತವಿದ್ದುದರಿಂದ ಕೈಬಿಟ್ಟಿದ್ದೇನೆ.)



# ಅನುಬಂಧ – II

## ಅಸ್ಪೃಶ್ಯತೆಯ ಬಗ್ಗೆ – ಈಚಿನ ಬೇರೆ ಬೇರೆ ಸಾಹಿತ್ಯ ಕೃತಿಗಳಲ್ಲಿ

### ಕುಮಾರವ್ಯಾಸ ಭಾರತ[1] (ಸು. 1300)

ವರ್ಣಾಶ್ರಮ ಪದ್ಧತಿಯ ಪರಿಪಾನೆಯನ್ನು ಕುಮಾರವ್ಯಾಸ ಎತ್ತಿ ಹಿಡಿದಿರುವುದು ತೀರ ಸ್ವಾಭಾವಿಕ. ಬ್ರಾಹ್ಮಣರಿಗೆ ಅಗ್ನಿ, ಉಳಿದ ಮೂರು ವರ್ಗಗಳಿಗೆ ಬ್ರಾಹ್ಮಣ ಗುರು ಎಂಬ ಆರ್ಷೇಯೋಕ್ತಿ ಒಂದೆಡೆ ಬಂದಿದೆ (ಉದ್ಯೋಗ ಪರ್ವ, 4.46) ಪ್ರತಿಯೊಬ್ಬ ವ್ಯಕ್ತಿಯೂ ತನ್ನ 'ಜಾತಿ ಧರ್ಮ'ವನ್ನನುಸರಿಸುವುದು ಕುಮಾರವ್ಯಾಸ ಒಪ್ಪಿರುವ ಆದರ್ಶ (ಅದೇ. 4.53) ಗೋ ಬ್ರಾಹ್ಮಣ ರಕ್ಷಣೆ ರಾಜರ, ಎಲ್ಲ ಮನುಷ್ಯರ ಆದ್ಯ ಕರ್ತವ್ಯ. ಆದರೂ "ಕುಲಜನಾಗಲಿ ಆಕುಲಜನಾಗಲಿ, ಜಲರುಹಾಕ್ಷನ ನಾಮ ಕೀರ್ತನದೊಳಗೆ ಬದುಕುವನು ಅವನು ಆತನೆ ಸುಕೃತಿಯೆಂಬವನು". ಕುಲಜ–ಅಸ್ಪೃಶ್ಯರಿಬ್ಬರೂ ಭಗವಂತನ ಧ್ಯಾನದಿಂದ ಮುಕ್ತರು. ಭಗವದ್ ಧ್ಯಾನವೇ ಮುಖ್ಯ; ಬರಿಯ ಜಪ, ತಪ ನಿಯಮ, ಹೋಮಗಳಿಂದ ಸಂಸಾರಾರ್ಣವವನ್ನು ದಾಟಲು ಸಾಧ್ಯವಿಲ್ಲ (ಅದೇ 3.123). ಇಲ್ಲೆಲ್ಲ ಭಕ್ತಿ ಚಳವಳಿಯ ಲಕ್ಷಣಗಳನ್ನು ಕುಮಾರವ್ಯಾಸನಲ್ಲಿ ಗುರುತಿಸಬಹುದು.

### ಲಕ್ಕಣ ದಂಡೇತನ "ಶಿವತತ್ವ ಚಿಂತಾಮಣಿ" (ಸು. 1430)

ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಶ್ರೀಪತಿ ಪಂಡಿತಾರಾಧ್ಯನು ಆಂಧ್ರದ ಬೆಜವಾಡದವನು. ಅವನು ಒಮ್ಮೆ ಶೂದ್ರರ ಮನೆಗೆ ಹೋದನೆಂದು ಅವನನ್ನು ಬ್ರಾಹ್ಮಣರು ಬಹಿಷ್ಕರಿಸಿದಾಗ, ಶಿವಭಕ್ತರೇ ಶ್ರೇಷ್ಠರೆಂದು ತೋರಿಸಲು ಬೆಂಕಿಯನ್ನು ಬಟ್ಟೆಯಲ್ಲಿ ಕಟ್ಟಿದನೆಂಬ ಪವಾಡ ತೆಲುಗು ಕಾವ್ಯಗಳಲ್ಲಿ ಮಾತ್ರವಲ್ಲದೆ ಬೆಜವಾಡದ ಮಲ್ಲೇಶ್ವರ ದೇವಾಲಯದ ಸಂಸ್ಕೃತ ಶಾಸನದಲ್ಲಿಯೂ ಬಂದಿದೆ. ಲಕ್ಕಣ್ಣ ದಂಡೇಶ ತನ್ನ ಕೃತಿಯಲ್ಲಿ (37. 127–8) ಪಂಡಿತಾರಾಧ್ಯರನ್ನು 'ಡೋಹರ ಕಕ್ಕಯ್ಯ' ತನ್ನ ಮನೆಗೆ ಕರೆದನೆಂದು ಉಲ್ಲೇಖಿಸಿ ಬೆಂಕಿಯನ್ನು ಬಟ್ಟೆಯಲ್ಲಿ ಕಟ್ಟಿದ ಪವಾಡವನ್ನು ಹೇಳಿದ್ದಾನೆ. ಶ್ರೀಪತಿ ಪಂಡಿತರಾಧ್ಯನ ಮಗನಾದ ಗೋಕರ್ಣ

---

1. ಬೆಂಗಳೂರು, 1958.

ಎಂಬಾತ ಹೊಲೆಯನೊಬ್ಬನಿಗೆ ಲಿಂಗದೀಕ್ಷೆ ಕೊಟ್ಟುದನ್ನು "ನಾಗಲಿಂಗ ಕವಿ ತನ್ನ ಗುಪ್ತಾಭ್ಯುದಯ ತೆಲುಗು ಕಾವ್ಯದಲ್ಲಿ ಬರೆದಿದ್ದಾನೆ" (ಶಾಂತರಸ : ಬಸವ ಪೂರ್ವಯುಗದ ಶರಣರು. ರಾಯಚೂರು. 1972, ಪು. 101).

## ಮಗ್ಗೆಯ ಮಾಯಿದೇವನ ಶತಕಗಳು[2] (15ನೇ ಶ.)

ವೀರಶೈವನಾದವನು ವೀರಶೈವನಲ್ಲದವನನ್ನು ಮುಟ್ಟುವುದಿಲ್ಲ, ನೋಡುವುದಿಲ್ಲ–ಅವನಿಗೆ ಭವಿ ಒಂದು ರೀತಿಯ 'ಅಸ್ಪೃಶ್ಯ'. ಮಗ್ಗೆಯ ಮಾಯಿದೇವ ಎರಡು ಪದ್ಯಗಳಲ್ಲಿ (ಪು. 58, 59) ಭವಿಯಾದವನು ಎಂದೂ ಭಕ್ತಗಾಗುವುದಿಲ್ಲ, ಭಕ್ತನಾಗಲು ಸಾಧ್ಯವೇ ಇಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುವುದನ್ನು ನೋಡಿದರೆ ವೀರಶೈವಕ್ಕೆ ಇತರರು ಮತಾಂತರ ಹೊಂದುವುದನ್ನು ಅವನು ವಿರೋಧಿಸುತ್ತಿದ್ದಂತೆ ಊಹಿಸಬೇಕಾಗುತ್ತದೆ. ("ಭವಿ ಗಡ ಭಕ್ತನಪ್ಪುದದು ಮಿಥ್ಯೆಯಲಾ, ಭವಿ ಭಕ್ತನಪ್ಪನೇ, ಶಿವಶಿವ, ಭಕ್ತನೇ ಭವಭವಾಂತರದೊಳ್ ನೆರೆ ಭಕ್ತನಪ್ಪನಾ ಭವಿ ಭವಿಯಾಗಿಯೇ ಭವ ಭವಾಂತರದೊಳ್ ತಿರುಗುತ್ತಮಿರ್ಪನೆಂಬ ವಚನಮುಂಟಲ್ತೆ ಶಿವರಹಸ್ಯದ ಶಾಸನದೊಳ್ ಶಿವಶಿವಾ"). ಇನ್ನೊಂದು ಕಡೆ, 'ಶ್ವಪಚ' (=ಹೊಲೆಯ) ನನ್ನು ಮುಟ್ಟಿದರೆ ಮೈಲಿಗೆಯಾಗುವ ಸಂಗತಿಯನ್ನು ಹೇಳುತ್ತಾನೆ (ಪು. 20). ಸಾಮಾನ್ಯರಿಗೆ ಮೈಮೇಲೆ ಇಷ್ಟಲಿಂಗವಿದ್ದರೂ ಶುದ್ಧತಾ ಭಾವನೆ ಬರುವುದಿಲ್ಲ, ಶ್ವಪಚನನ್ನು ಮುಟ್ಟಿದರೆ 'ಅಶುದ್ಧ ಸಲೇಪ ಭಾವ' ಬರುವುದರಿಂದ ದೈವಕ್ಕಿಂತ ಶ್ವಪಚನೇ ಬಲಿಷ್ಠನೆಂದು ನಗೆಯಾಡಿದ್ದಾನೆ ("ಶ್ವಪಚನ ದೈವದಂತರಮನೊಮ್ಮೆ ವಿಚಾರಿಸಿ ನೋಡೆ ಲೋಕದೊಳ್ । ಶ್ವಪಚನ್ ಬಲಾ ಜನದ ಬುದ್ಧಿಗೆ ದೈವಮನೊಲ್ದು ಮುಟ್ಟಿದ । ಲ್ಲಿ ಪರಮ ಶುದ್ಧತಾಸ್ಮರಣೆಯಿಲ್ಲದ ಶುದ್ಧ ಸಲೇಪಭಾವಮಾ । ಶ್ವಪಚನ ತಟ್ಟು ಮುಟ್ಟು ನಡೆಯಲ್ಲಿಯೆ ಬರ್ಪುದರಿಂ ಶಿವಾಧವಾ").

## ಮಂಗರಸನ ಸಮ್ಯಕ್ತ್ವ ಕೌಮುದಿ[3] (ಕ್ರಿ.ಶ. 1508)

ಲೋಕದ ಸಾಮಾನ್ಯ ಜನರ ಪ್ರಕಾರ ಐಶ್ವರ್ಯವುಳ್ಳವನೇ ಸದ್ಗುಣಿ, ವಿವೇಕಿ, ಪುಣ್ಯವಂತ, ಬುದ್ಧಿವಂತ; ದರಿದ್ರನೇ 'ಕುಲಹೀನ', ಅವಿವೇಕಿ, ದುಶ್ಚರಿತ, ಭೂಭಾರಕ, ದ್ರೋಹಿ. ("ಸಿರಿಯುಳ್ಳವನೇ ಶೀಲನಿಧಿ ಸುಗುಣಿ ಸುವಿವೇಕಿ । ಯುರು ಪುಣ್ಯವಂತನಭಿಮಾನಿಯುತ್ತಮ ಗುಣಾ । ಭರಣ ಸಲೆ ಬುದ್ಧಿವಂತಂ ಗರುವನೇಕ ವಾಕ್ಯಪ್ರತಿಷ್ಠಾಚಾರ್ಯನು । ಸಿರಿಯಿಲ್ಲದವನು ಕುಲಹೀನನವಿವೇಕಿ ದು । ಶ್ಚರಿತನಾರಡೆಕಾರ ಭೂಭಾರಕಂ ಪಿಸುಣ । ನುರುತರ ದ್ರೋಹಿಯನ್ನೆಯಕಾರನೆಂದು ನೆಲನೆಲ್ಲ ನುಡಿಯುತುಮಿಪ್ಪುದು."

2. ಶತಕತ್ರಯವು, ಮೈಸೂರು, 1925.
3. ಸಂ: ಬಿ.ಬಿ. ಮಹೀಶವಾಡಿ. ಧಾರವಾಡ. 1976. 2, 62.

## ಪುರಂದರವಾಸ[4] (ಸು. 1550)

ಪು. 38 – **“ಅನ್ನಪಾನಾದಿಗಳೀಯೋ ಆ ಚಂಡಾಲ ಸಪ್ತರಿಗೆ”**

**“ಚೋರನಾದರೂ ಚಂಡಾಲನಾದರೂ**
**ಬ್ರಹ್ಮಘ್ನ ಪಿತೃಘಾತಕನಾದರೂ**
**ಆರನಾದರೂ ಮಧ್ಯಾಹ್ನ ಕಾಲಕೆ**
**ಅತಿಥಿಯಾಗಿ ಮನೆಗೆ ಬಂದರೆ**
**ತುತಿಸಿ ಅನ್ನವನಿಟ್ಟು ಸ್ವಾಮಿ**
**ಪುರಂದರವಿಠಲಗರ್ಪಿಸಬೇಕು”**

ಪು. 42–3 – ಮಡಿ ಮೈಲಿಗೆ ಭೇದಕ್ಕಿಂತ ಶುದ್ಧ ಮನಸ್ಸು, ಭಕ್ತಿ, ಔದಾರ್ಯ ಗಳು ಮುಖ್ಯ.

ಪು. 58 – **“ಹೊಲೆಯ ಹೊಲತಿ ಇವರವರಲ್ಲ**
**ಹೊಲೆಗೇರಿಯೊಳು ಹೊಲೆಯ ಹೊಲತಿಯಲ್ಲ”**

(ಹೆಂಡತಿ ಮಾತಿನಂತೆ ತಂದೆ ತಾಯಿ ಬಯ್ದವ, ಗುರುಗಳನ್ನು ನಿಂದಿಸಿದವ, ಅನ್ಯ ಪುರುಷನನ್ನು ಬಯಸಿದಾಕೆ, ಮಗನನ್ನು ಪಡೆದು ಮುದಿವಯಸ್ಸಿನಲ್ಲಿ ಪತಿದ್ವೇಷ ಮಾಡುವಾಕೆ ಇವರೇ ದೊದಲಾದವರು ಹೊಲೆಯ ಹೊಲತಿಯರು)

ಪು. 59 – **“ಹೊಲೆಯ ಹೊರಗಿಹನೆ ಊರೊಳಗಿಲ್ಲವೆ**
**ಸಲೆ ಶಾಸ್ತ್ರವನು ತಿಳಿದು ಬಲ್ಲವರು ನೋಡಿ”**

(ಹಣೆಯಲ್ಲಿ ಭಸ್ಮ ಭಂಡಾರವಿಡದವ, ದಾನಧರ್ಮ ಮಾಡದವ, ಭಾಷೆಗೆ ತಪ್ಪುವವ, ಸಾಲ ವಾಪಸ್ಸು ಕೊಡದಾತ, ಪರಧನ ಪರಸತಿಯರಿಗೆ ಸೋಲುವಾತ ಇವರೇ ದೊದಲಾದವರು ಹೊಲೆಯರು).

## ರಾಮನಾಥ ಚರಿತೆ (ಸು. 1550)

ನಂಜುಂಡನ ರಾಮನಾಥ ಚರಿತದಲ್ಲಿ (ಸು. 1550) ಮಾತಂಗಿ ಎಂಬುವಳು ಸೇನೆಯ ಮುಖ್ಯಳಾಗಿ ಬಂದು ಕುಮಾರ ರಾಮನನ್ನು ಸೋಲಿಸುತ್ತಾಳೆ. ಅವಳ ಐತಿಹಾಸಿಕತೆ ಏನೋ ತಿಳಿಯದು.[5] ಅವಳ ಹೆಸರೇನೋ ಅವಳು ಮಾದರ ಜಾತಿಯವಳೆಂಬುದನ್ನು ಹೇಳುತ್ತಿದ್ದರೂ ನಂಜುಂಡನಲ್ಲಿ ಹಾಗೆಂದು ಕಂಠೋಕ್ತವಾಗಿ

---

4. ಪುರಂದರ ಸಾಹಿತ್ಯ ಭಾಗ – 5. ಸಂ: ಕೃಷ್ಣಶರ್ಮಾ ಬೆಟಗೇರಿ ಮತ್ತು ಹುಚ್ಚುರಾವ್ ಬೆಂಗೇರಿ. ಧಾರವಾಡ, 1965.

5. ವಿವರಗಳಿಗೆ ನೋಡಿ – ಜಿ. ವರದರಾಜಾರಾವ್ : ಕುಮಾರರಾಮನ ಸಾಂಗತ್ಯಗಳು. ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1966. ಪು. 337–8.

ಹೇಳಿಲ್ಲ. ಆದರೆ ಪಾಂಚಾಳಗಂಗನ ಕೃತಿಯಲ್ಲಿ ಅವಳನ್ನು 'ಮಾದರಗಿತ್ತಿ' ಎಂದೇ ಕರೆದಿದೆ. ಅವಳದು 'ಕೊಂಕಣದೇಶ' –

**ಕೊಂಕಣದೇಶದ ಮಾದರಗಿತ್ತಿಗೆ**
**ಶಂಕೆಯಿಲ್ಲದ ದಂಡ ಕೊಡೆ**
**ಬಿಂಕವ ಮುರಿವೆ ರಾಮನ ದುರ್ಗವನೆಂಮು**
**ಅಂಕಕಾತಿಯು ಬರುತಿಹಳು (ಸಂಧಿ 18, ಪದ್ಯ 35)**

ಮಹಲಿಂಗಸ್ವಾಮಿಯ ಬಾಲರಾಮನ ಸಾಂಗತ್ಯದಲ್ಲಿ ಹತಾಶಳಾಗಿ ಸತ್ತ ರತ್ನಾಜಿಯೇ ಮಾತಂಗಿಯಾಗಿ ಜನ್ಮವೆತ್ತುತ್ತಾಳೆ.

**ಹರಳರ ಕುಲದೊಳು ಜನಿಸಿದಳು ವರರೂಪು**
**ಧರೆಯೊಳು ಸರಿಯಲ್ಲವೆನಿಸಿ**
**ರತಿ ರಂಭೆಗೆ ತಿಲೋತ್ತಮೆಗೆ ಸರಿಬಾರದೆಂದೆನಿಸಿ**
**ಬೆಳಗೊಂಡು ರೂಪಾಗಿ ಬೆಳೆಯೆ (ಸಂಧಿ 18, ಪದ್ಯ 28)**

'ಹರಳರ ಕುಲ' ವೆಂದರೆ ಹರಳಯ್ಯನ ಕುಲ, ಹೊಲೆಯರ ಕುಲ. ಇನ್ನೊಂದು ಪದ್ಯದಲ್ಲಿ (ಸಂಧಿ 19, ಪದ್ಯ 251) ಇದನ್ನೇ 'ಹೊರಕುಲ'ವೆಂದಿದೆ.[6]

## ವಚನಕಾರ ಸಿದ್ಧಲಿಂಗಯತಿ[7] (ಸು. 1540)

"ಅಜ್ಞಾನಿ ಹೊಲೆಯರ"ನ್ನೂ "ಅನಾದಿ ಮಲಿನರಾಗಿ ಆದಿ ನಿರ್ಮಲರಾದೆ ವೆಂದು ನಿಮ್ಮ ಶರಣರಿಗೆ ಮಾಯಾಕರ್ಮವ ಕಲ್ಪಿಸಿ ನುಡಿವ ಮಾದಿಗರ"ನ್ನೂ ಅವನು ಟೀಕಿಸಿದ್ದಾನೆ. "ಹೊಲತಿ ಮಾದಗಿತ್ತಿ ಬಲ್ಲವಳಾದರೆ ಹಲವು ಪರಿಯಲ್ಲಿ ಅವಳೆಂಜಲ ತಿನುತಿಪ್ಪರು ನೋಡಾ ಜಗ" ಎಂದು ಒಂದು ಕಡೆ ಜನರನ್ನು ಲೇವಡಿ ಮಾಡಿದ್ದಾರೆ. ಚೆನ್ನಯ್ಯ, ಕಕ್ಕಯ್ಯರನ್ನು ಅವರು ಎಲ್ಲಿಯೂ ಸ್ಮರಿಸಿಲ್ಲ. "ಜಂಗಮ ರಿದ್ದಲ್ಲಿ ಜಾತಿ ವಿಜಾತಿಯುಂಟೆ?" "ಜಾತಿ ವರ್ಣಾಶ್ರಮ ನಾಮರೂಪಿಲ್ಲದ... ಅಜುಹಿನ ಪರಬ್ರಹ್ಮವೇ ಶರಣಲಿಂಗ ಕಾಣಿ ಭೋ" ಎಂಬಂತಹ ಮಾತುಗಳು ಕೇವಲ ಔಪಚಾರಿಕವಾಗಿ ಬಂದಿವೆ. ಕೆಳವರ್ಗದ ಶಿವಭಕ್ತರ ಬಗ್ಗೆ, ಕೆಳವರ್ಗದವರ ಬಗ್ಗೆಯಾಗಲಿ ಅಂತಹ ಗೌರವ, ಪ್ರೀತ್ಯಾದರಗಳು ಅವರ ವಚನಗಳಲ್ಲಿ ವ್ಯಕ್ತವಾಗಿಲ್ಲ.

---

6. ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿಯವರ ಕೃತಿಗಳ ಹಸ್ತಪ್ರತಿಗಳಿಂದ ನನಗೆ ಬೇಕಾದ ಭಾಗಗಳನ್ನು ಒದಗಿಸಿದ ಡಾ. ಜಿ. ವರದರಾಜಾರಾಯರಿಗೆ ನಾನು ಕೃತಜ್ಞ ನಾಗಿದ್ದೇನೆ.

7. ಟಿ.ಎಲ್. ಬ್ಯಾಡಗಿ, ಎಸ್.ಆರ್. ಗುಂಜಾಳರ "ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನ ಪದಪ್ರಯೋಗ ಕೋಶ"ದ (ಧಾರವಾಡ, 1976) ಉಲ್ಲೇಖ ಗಳನ್ನು ನಾನು ಬಳಸಿಕೊಂಡಿದ್ದೇನೆ.

ಸಿದ್ಧಲಿಂಗಯತಿಗಳು ಆ ದೃಷ್ಟಿಯಿಂದ ಸಾಂಪ್ರದಾಯಕ ಮೌಲ್ಯಗಳ ಪ್ರತಿಪಾದಕರಾಗಿ ತೋರುತ್ತಾರೆ.

## ಚೆನ್ನಬಸವಾಂಕನ (ಸು. 1550) ಮಹಾದೇವಿಯಕ್ಕನ ಪುರಾಣ[8]

ಕಕ್ಕಯ್ಯ, ಹಳ್ಳಯ್ಯ, ಶಿವನಾಗಮಯ್ಯಗಳ ಜೊತೆ, 'ದೊಡ್ಡಯ್ಯ' ಎಂಬ ಅಸ್ಪೃಶ್ಯ ಶಿವಭಕ್ತನ ಹೆಸರಿದೆ. ಅವನು ಮಿಂದ ನೀರಿನಿಂದ ಬ್ರಾಹ್ಮಣರ ಕುಷ್ಟರೋಗ ಪರಿಹಾರವಾಯಿತೆಂದು ಹೇಳಿದೆ. 'ದೊಡ್ಡಯ್ಯ' ಯಾರೋ ತಿಳಿಯದು. (=ಹಿರಿಯಯ್ಯ, ಅಸ್ಪೃಶ್ಯ?)

## ಸಿಂಗಿರಾಜನ (ಸು. 1500) ಬಸವರಾಜ ಚಾರಿತ್ರ[9]

ಕೆಳಜಾತಿಯ ಕಬ್ಬಿಲಿತಿಯೊಬ್ಬಳು ಹೆಂಡದ ಮಡಕೆಗೆ ವಿಭೂತಿಯನ್ನು ಬಳಿದು ಕೊಂಡೊಯ್ಯುತ್ತಿದ್ದುದನ್ನು ಚಾಡಿಗಾರರು ಹಾಸ್ಯಮಾಡಿದಾಗ, ಬಸವ ಹೆಂಡವನ್ನು ಹಾಲಾಗಿ ಮಾಡಿದ ಪವಾಡದ ಉಲ್ಲೇಖವಿದೆ. (25.21). ಶಿವನಾಗಿಮಯ್ಯನ ಕತೆಯಲ್ಲಿ ಹೀನಜಾತಿ ಉತ್ತಮ ಜಾತಿಗಳ ವಿಷಯ ಮತ್ತೆ ಬಂದಿದೆ. 'ಭವಿಯಂತ್ಯಜ, ಶಿವಭಕ್ತನೆಯಗ್ರಜ': ಭವಿಯೇ ಹೊಲೆಯ, ಶಿವಭಕ್ತನೇ ಉತ್ತಮ ಕುಲೀನ ಎಂಬುದನ್ನು ತೋರಿಸಲು, ಶಿವನಾಗಮಯ್ಯನ ಕೈಯಿಂದ ಬಸವಣ್ಣ ಹಾಲನ್ನು ಕರೆದ ಪವಾಡ ನಿರೂಪಿಸುತ್ತಾನೆ (28.61; 28.69).

## ಸುರಂಗನ ತ್ರಿಷಷ್ಟಿ ಪುರಾತನ ಚಾರಿತ್ರಂ ಕಾವ್ಯ[10] (ಸು. 15–16ನೇ ಶ)

ತಿರುನಾಳ್ಪೋವರ್ ಒಬ್ಬ 'ಪಿರಿಯ ಶಿವಭಕ್ತ'; ಶಿವಭಕ್ತರ ಬಳಿ ಕೂಲಿ ಕೆಲಸ ಅವನ ವೃತ್ತಿ. ಒಬ್ಬ ಶಿವಬ್ರಾಹ್ಮಣ ಅವನಿಗೆ ಒಂದು ತಿಂಗಳ ಕೂಲಿ ಕೊಟ್ಟು ತನ್ನ ಗದ್ದೆಯನ್ನು ಕೊಯ್ದು ಕೊಡಲು ಹೇಳುತ್ತಾನೆ. ಪೊನ್ನಾಂಬಲಕ್ಕೆ ಅವನು ತಿರುನಾಳ್ ಉತ್ಸವ ನೋಡಲು ಹೋಗಲು ಅನುಕೂಲವಾಗುವಂತೆ ಶಿವನ ಭೂತಗಣ ಬಂದು ಗದ್ದೆಯನ್ನು ಕೊಯ್ದು ಕೆಲಸ ಮುಗಿಸಿಕೊಡುತ್ತವೆ.

ಪೊನ್ನಾಂಬಲದಲ್ಲಿ ದೂರದಲ್ಲೇ ನಿಂತು ಉತ್ಸವ ನೋಡುತ್ತಾನೆ. ಶಿವ ನಂದಿಗೆ ಹೇಳಿ ಅವನನ್ನು ಅಲ್ಲಿಗೆ ಬಾವಿಯ ನೀರಲ್ಲಿ ಅದ್ದುವಂತೆ ಮಾಡುತ್ತಾನೆ. ಹೊಲೆಯನ ರೂಪ ಹೋಗಿ ವಿಪ್ರನ ರೂಪ ಬರುತ್ತದೆ. ತಿರುನಾಳ್ಪೋವರನಿಗೆ ಶಿವ ಗಣಪದವಿ ಕೊಡುತ್ತಾನೆ.

---

8. ಸಂ: ಬಿ.ಎನ್. ಚಂದ್ರಯ್ಯ, ಮೈಸೂರು. 1968.
9. ಸಂ: ಎಚ್. ದೇವೀರಪ್ಪ, ಮೈಸೂರು. 1970.
10. ಸಂ: ಆರ್. ಸಿ. ಹಿರೇಮಠ, ಧಾರವಾಡ. 1966

## ಬಸವ ಪವಾಡ (ಸು. 1650)[11]

ಅಜ್ಞಾತ ಕವಿಯೊಬ್ಬ ಬರೆದಿರುವ 'ಬಸವ ಪವಾಡ' ಕೃತಿಯಲ್ಲಿ ಹಳ್ಳಯ್ಯನ ಕತೆ ಬಂದಿದೆ (ಸಂಧಿ 4). ಒಮ್ಮೆ ಅಸ್ಪೃಶ್ಯಭಕ್ತ ಹಳ್ಳಯ್ಯ ಬಸವನನ್ನು ಕಂಡು ಶರಣು ಎಂದಾಗ ಬಸವ ಶರಣು ಶರಣು ಎಂದು ಎರಡು ಸಾರಿ ಹೇಳಿದ್ದು ಅದೇ ಹಳ್ಳಯ್ಯನಿಗೆ ಭಾರವಾಗಿ ತೋರಿತು. ಅವನೂ ಅವನ ಹೆಂಡತಿ ಕಲ್ಯಾಣಮ್ಮನೂ ಸೇರಿ ಚಮ್ಮಾವುಗೆ ಮಾಡಿ ಕೊಂಡೊಯ್ದು ಬಸವನಿಗೆ ಅರ್ಪಿಸಿದರು. ಬಸವ ಅವರು ತಂದ ಪಾದರಕ್ಷೆಯನ್ನು ತಲೆಮೇಲೆ ಹೊತ್ತು ಮೆರೆದ. ಮಧುವರಸ ಎಂಬ ಬ್ರಾಹ್ಮಣ ಜಂಬ ದಿಂದ ಅವನ್ನು ಮೆಟ್ಟಿದ್ದರಿಂದ ಕುಷ್ಠರೋಗ ಬಂದಿತು. ಅವನ ದಾಸಿ ಅರಿಯದೆ ತಂದ ಹಳ್ಳಯ್ಯನ ಮನೆಯ ಬಚ್ಚಲ ನೀರಿಂದ ಆ ಕುಷ್ಠ ಪರಿಹಾರವಾಯಿತು. ಬ್ರಾಹ್ಮಣ ಮಧುವರಸ ಲಿಂಗದೀಕ್ಷೆ ಪಡೆದು, ತನ್ನ ಮಗಳನ್ನು ಹರಳಯ್ಯನ ಮಗನಿಗೆ ಕೊಟ್ಟು ಮದುವೆಮಾಡಲು ನಿರ್ಧರಿಸಿದ, ಮದುವೆಯೂ ಆಯಿತು. ("ಮಧುವರಸಯ್ಯ ಲಿಂಗವ ಕಟ್ಟಿ ಹಳ್ಳಯ್ಯನ । ಸದನವ ಹೊಕ್ಕು ತನ್ನ ಮಗಳ । ಮುದದಿಂದಲಾತನ ಮಗನಿಗಿತ್ತೊಯಿ । ತಂದು ಮದುವೆಯ ಮಾಡಿದರಯ್ಯ"). ಬಿಜ್ಜಳ ಕೋಪದಿಂದ ಅವರನ್ನು ಹೂಟೆಗಟ್ಟಿ ಎಳೆಸಿದ. ಅದೇ ಮೂಲವಾಗಿ ಶಿವಭಕ್ತರಿಂದ ಬಿಜ್ಜಳನ ಕೊಲೆಯಾಯಿತು.

## ಮರುಳಸಿದ್ಧ ಚಾರಿತ್ರ (1582)

ದೇವಕವಿಯ ಮರುಳಸಿದ್ಧ ಚಾರಿತ್ರದಲ್ಲಿ ಮರುಳಸಿದ್ಧನೆಂಬ ಶಿವಭಕ್ತನ ಬದುಕು, ಪವಾಡಗಳ ವಿವರಗಳಿವೆ. ಮರುಳಸಿದ್ಧನು ಬಳ್ಳಾರಿ ಜಿಲ್ಲೆಯ ಕಗ್ಗಲ್ಲಪುರದ ಲಿಂಗವಂತ ಹರಿಜನರಾದ ಕೂಚಿಮಾರ ಸುಪ್ರಭೆಯರಿಗೆ (ಇವರು 'ಮಚ್ಚೆ ಕಾಯಕ ದವರು') ಜನಿಸಿದ ಮಹಾಶರಣ. ಹುಟ್ಟಿದಾಗಲೇ ತಂದೆ ತಾಯಿಗಳಿಗೆ ಮರಣ ಸಂಭವಿಸಿದ್ದರಿಂದ ಮಗು ಊರಿನ ಗೌಡನಾದ ಬಾಚಿಗೌಡನಿಗೆ ದೊರಕಿ ಅಲ್ಲಿ ಬೆಳೆಯುತ್ತದೆ. ಗೌಡನ ಸಂಪತ್ತು ವೃದ್ಧಿಸುತ್ತದೆ. ಊರಲ್ಲಿ ನಡೆಯುತ್ತಿದ್ದ ಮಾರಿಹಬ್ಬ ವನ್ನು ಪ್ರತಿಭಟಿಸಿ ಊರನ್ನು ತ್ಯಜಿಸಿ ದೇಶಸಂಚಾರಿಯಾಗುತ್ತಾನೆ. ಹಲವು ಪವಾಡ ಗಳು ಅವನಿಂದ ಸಂಭವಿಸುತ್ತವೆ. ರೇವಣಸಿದ್ಧನಿಂದ ದೀಕ್ಷಿತನಾಗಿ ಕೊಲ್ಲಾಪುರದ ಮಾಯೆಯನ್ನು ಗೆಲ್ಲುತ್ತಾನೆ. ಅವನು ನೆಲಸಿದ ಮಠದ ಉತ್ತರಾಧಿಕಾರವನ್ನು ತರಳಬಾಳು ಸಿದ್ಧಯ್ಯನಿಗೆ ಬಿಟ್ಟುಕೊಟ್ಟು ಅದೇ ಬಳ್ಳಾರಿ ಜಿಲ್ಲೆಯ ಉಜ್ಜಯಿನಿಯಲ್ಲಿ ಲಿಂಗೈಕ್ಯನಾಗುತ್ತಾನೆ. ತರಳಬಾಳು ಸಿದ್ಧಯ್ಯನೇ ಈಗಿನ ಸಿರಿಗೆರೆ ಮಠದ ಮೂಲ ಗುರುಗಳೆಂದು ನಂಬುತ್ತಾರೆ. ಮರುಳ ಸಿದ್ಧನು ಸಂಚರಿಸಿದ ಜಾಗಗಳಲ್ಲೆಲ್ಲ ಅವನ ಕುರುಹಾಗಿ ಅನೇಕ ಸ್ಮಾರಕಗಳನ್ನು ಜನ ತೋರುತ್ತಾನೆ.

---

11. ಸಂ: ಬಿ.ಎನ್. ಚಂದ್ರಯ್ಯ, ಮೈಸೂರು. 1967.

ಮಾರಿಹಬ್ಬ, ಪಶುಬಲಿ, ಯಜ್ಞಯಾಗ, ಮೋಸದ ವಿದ್ಯೆಗಳನ್ನು ಪ್ರತಿಭಟಿಸಿ, ಪವಾಡಗಳನ್ನು ಮೆರೆದು ಜನರನ್ನು ತನ್ನತ್ತ ಸೆಳೆದುಕೊಂಡ ಮರುಳಸಿದ್ಧ ಐತಿಹಾಸಿಕ ವ್ಯಕ್ತಿಯಾಗಿರುವ ಸಂಭವವಿದೆಯಾದರೂ ಅವನ ಕಾಲವನ್ನು ನಿರ್ದಿಷ್ಟಗೊಳಿಸಲು ಆಧಾರಗಳು ಇನ್ನೂ ಸಾಲವು.

ನಿಶ್ಚಿತವಾಗಿಯೂ ಹದಿನಾರನೇ ಶತಕಕ್ಕಿಂತ ಹಿಂದಿನ ವ್ಯಕ್ತಿಯಾದ ಅವನು ರೇವಣಸಿದ್ಧನ ಶಿಷ್ಯನಾಗಿದ್ದುದು ನಿಜವಾದರೆ ಹನ್ನೆರಡನೇ ಶತಕಕ್ಕೆ ಸೇರುವ ಅವನು ಲಿಂಗವಂತ ಹರಿಜನರ ಮನೆಯಲ್ಲಿ ಹುಟ್ಟಿ ಮಹಾ ಶಿವಭಕ್ತನಾಗಿ ಬೆಳೆದು ಇಂದಿನ ಪ್ರಭಾವಶಾಲೀ ಮಠವೊಂದರ ಮೂಲ ಸ್ಥಾಪನೆಗೆ ಕಾರಣನಾಗಿರುವ ಸಂಗತಿ ಗೌರವಾರ್ಹ ಉಲ್ಲೇಖಕ್ಕೆ ಅರ್ಹವಾಗಿದೆ. ಅವನು ಹನ್ನೆರಡನೆಯ ಶತಮಾನದವ ನೆಂಬುದಕ್ಕೆ ಹೆಚ್ಚಿನ ಆಧಾರಗಳು ಬೇಕಾಗಿವೆ.

ಸುತ್ತೂರುಮಠಕ್ಕೆ ಶಿಷ್ಯನಾಗಿದ್ದನೆಂದು ಹೇಳಲಾದ ಮಲೆಯ ಮಾದೇಶ್ವರ ಒಬ್ಬ ಹರಿಜನನಾಗಿದ್ದನೆಂದು ಕೆಲವರು ಮಾಡುವ ವಾದವನ್ನು ತಿರಸ್ಕರಿಸುವವರೂ ಇದ್ದಾರೆ. ಇಲ್ಲಿನ ಕೆಲವು ವಿವರಗಳು "ವಿಶ್ವಬಂಧು ಮರುಳಸಿದ್ಧ ಹಾಗೂ ಆತನ ಪರಂಪರೆ" (ಸಂ: ಎಚ್. ದೇವೀರಪ್ಪ ಮತ್ತು ಮಹಾದೇವ ಬಣಕಾರ, ಸಿರಿಗೆರೆ. 1974) ಎಂಬ ಪ್ರಶಸ್ತಿ ಕೃತಿಯಿಂದ.

## ಸರ್ವಜ್ಞನ ವಚನಗಳು (ಸು. 1550–1600)

'ವರ್ಣ'ದ ಉತ್ತಮತ್ವದ ಬಗ್ಗೆ ಸರ್ವಜ್ಞನಿಗೆ ಸ್ಪಷ್ಟ ಕಲ್ಪನೆಗಳಿವೆ. ಹುಟ್ಟಿನಿಂದ ಅಲ್ಲ, ಗುಣದಿಂದ ವ್ಯಕ್ತಿ ಉತ್ತಮ ವರ್ಣಿಯೆನ್ನಿಸಿಕೊಳ್ಳುತ್ತಾನೆ.

**ಉತ್ತಮದ ವರ್ಣಗಳನ್ನುತ್ತಮರೆನಬೇಡ**
**ಮತ್ತೆ ತನ್ನಂತೆ ಬಗೆವರನೆಲ್ಲರ**
**ನುತ್ತಮರೆನ್ನು ಸರ್ವಜ್ಞ॥**

ಬದುಕಿರುವ ಜನರನ್ನು ಅನ್ಯಾಯವಾಗಿ ಬಡಜನರನ್ನಾಗಿ ಮಾಡಿ ಹಾಳು ಮಾಡುವವರು ಹೊಲೆಯರಿಗಿಂತ ಕೀಳರೆಂದು ಒಂದು ಕಡೆ ಹೇಳಿದ್ದಾನೆ.

**ಸತ್ತುದನು ತಿಂಬಾತ ಎತ್ತಣದ ಹೊಲೆಯನು**
**ಒತ್ತಿ ಜೀವವನು ಕೊಱಿ ಕೊಱಿದು ತಿಂಬಾತ**
**ನುತ್ತಮದ ಹೊಲೆಯ ಸರ್ವಜ್ಞ॥**

ಅವನ ಪ್ರಕಾರ ನಿಜವಾದ ಯೋಗಿಗೆ ಕುಲ ಎಂಬುದಿಲ್ಲ. ಅಷ್ಟೇ ಅಲ್ಲ, ಸ್ವರ್ಗದಲ್ಲಿ ಹೊಲೆಗೇರಿ ಎಂಬುದೇ ಇಲ್ಲ. ಜ್ಞಾನಿಗಳು ಕಲ್ಪಿಸಿರುವ ದಿವ್ಯ ಲೋಕದಲ್ಲಿ ಹೊಲೆಗೇರಿಯಿಲ್ಲ. ಹೊಲೆಗೇರಿ ಮನುಷ್ಯ ನಿರ್ಮಿಸಿದ್ದು, ಒಂದು ಕೃತಕ ವ್ಯವಸ್ಥೆ.

**ಕುಲವಿಲ್ಲ ಯೋಗಿಗೆ ಫಲವಿಲ್ಲ ಜ್ಞಾನಿಗೆ**
**ತೊಲೆಗಂಬವಿಲ್ಲ ಗಗನಕ್ಕೆ ಸ್ವರ್ಗದಲಿ**
**ಹೊಲೆಗೇರಿಯಿಲ್ಲ ಸರ್ವಜ್ಞ॥**

ಹೊಲೆಯರು ಹೆಂಡಕ್ಕೆ ತಾವು ದುಡಿದುದನ್ನೆಲ್ಲ ಹಾಕುವುದನ್ನು ಒಂದು ಕಡೆ ಗಮನಿಸಿದ್ದಾನೆ.

**ಹೆಂಡಕ್ಕೆ ಹೊಲೆಯ ತಾ ಕಂಡಕ್ಕೆ ಕಟುಗ ತಾ**
**ದಂಡಕ್ಕೆ ಕೃಷಿಗ ಹಾರುವನು ದುಡಿದು ತಾ**
**ದ(ಪಿ?)ಂಡಕ್ಕೆ ಇಡುವ ಸರ್ವಜ್ಞ॥**

ಬ್ರಾಹ್ಮಣನಿಗಿಂತ ಎಷ್ಟೋ ಬಾರಿ ಹೊಲೆಯನೇ ಶ್ರೇಷ್ಠ.

**ಕೊಂದು ತಿನ್ನುವ ಹೊಲೆಯನೆಂದು ನೀನೆನಬೇಡ**
**ನೊಂದ ಜೀವವನು ತಾನ್ಹರಿವ ಹಾರುವನು**
**ಕೊಂದಾದ ಹೊಲೆಯ ಸರ್ವಜ್ಞ॥**

ಮನುಷ್ಯ ಪಶು ಪಕ್ಷಿಗಳಿಗೆಲ್ಲ ಹಸಿವು ಬಾಯಾರಿಕೆ ನಿದ್ರೆ ಮೈಥುನ ಸಮಾನವಾಗಿರುವಾಗ, 'ಕುಲ'ದ ಪ್ರಶ್ನೆಯೂ, ಶ್ರೇಷ್ಠ ಕನಿಷ್ಠ ಎಂಬ ಪ್ರಶ್ನೆಯೂ ಅನುಚಿತವಾಗುತ್ತದೆ.

**ಹಸಿವು ತೃಷೆ ನಿದ್ರೆಗಳು ವಿಷಯ ಮೈಥುನ ಬಯಕೆ**
**ಪಶುಪಕ್ಷಿ ನರಗೆ ಸವನಿರಲು ಕುಲವೆಂಬ**
**ಘಸಣೆಯೆತ್ತಣದು ಸರ್ವಜ್ಞ॥**

ಜಾತಿಹೀನನ ಮನೆಯಲ್ಲೂ 'ಜ್ಯೋತಿ' ಇರಲು ಸಾಧ್ಯವೆಂಬುದನ್ನು ಮನಗಂಡಿದ್ದಾನೆ. ಜಾತಿ, ವಿಜಾತಿ ಎಂಬ ಕಲ್ಪನೆಯೇ ಮೂರ್ಖತನದ್ದು.

**ಜಾತಿಹೀನನ ದುನೆಯ ಜ್ಯೋತಿ ತಾ ಹೀನವೇ**
**ಜಾತಿ ವಿಜಾತಿಯೆಂದೆನಬೇಡ ದೇವನೊಲಿ**
**ದಾತನೇ ಜಾತ ಸರ್ವಜ್ಞ॥**

ಶಿವನನ್ನು ಒಲಿದವನೇ, ಅಥವಾ ಶಿವ ಒಲಿದವನೇ 'ಜಾತ', ಉತ್ತಮ ಕುಲಜ. ಮನುಷ್ಯರೆಲ್ಲ ಸಮಾನ; ಎಲ್ಲರಿಗೂ ನಡೆಯಲು ಇರುವ ಭೂಮಿ ಒಂದೇ, ಕುಡಿಯಲು ಇರುವ ನೀರು ಒಂದೇ, ಸುಡುವ ಅಗ್ನಿ ಒಂದೇ. ಕುಲ, ಗೋತ್ರ ಎಂಬ ಭೇದ ಪೂರ್ಣ ಕಲ್ಪಿತವಾದುದು.

**ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು**
**ಸುಡುವಗ್ನಿಯೊಂದೆ ಇರುತಿರಲು ಕುಲಗೋತ್ರ**
**ನಡುವೆ ಎತ್ತಣದು ಸರ್ವಜ್ಞ॥**

ಹೊಲೆಯನಿಗೆ ಕೊಟ್ಟ ಸಾಲ, ಒಲೆಯ ಮೇಲಿನ ಹಾಲು ಇವು ನಿಲ್ಲುವುದಿಲ್ಲವೆನ್ನುತ್ತಾನೆ. ("ಹೊಲೆಯಗಿತ್ತಾ ಸಾಲ ಒಲೆಯ ಮೇಲಿನ ಹಾಲು... ಇವು ನಾಲ್ಕು ನಿಲಲಿಲ್ಲವಯ್ಯ ಸರ್ವಜ್ಞ"). ಸ್ವರ್ಗದಲ್ಲಿ ಹೊಲೆಗೇರಿ ಹೇಗೆ ಇಲ್ಲವೋ ಹಾಗೆ ಮಾದಿಗರೂ ಇಲ್ಲ ("ಆದಿಯಲಿ ಜಿನನಿಲ್ಲ.... ಸ್ವರ್ಗದಲಿ ಮಾದಿಗರೆ ಇಲ್ಲ ಸರ್ವಜ್ಞ"). ಕಮ್ಮೆ, ಸಾದ ಜಾತಿಯವರು ಮಾದಿಗರಿಗಿಂತ ಹೀನ ಸ್ವಭಾವದವರು ("ಮಾದಿಗಗು ಕಮ್ಮೆಗೂ ಭೇದ ಒಂದುಂಟಯ್ಯ । ಮಾದಿಗ ಕೊಲುವ ಆಗದರ, ಕಮ್ಮೆ ತನ । ಗಾದವರ ಕೊಲುವ ಸರ್ವಜ್ಞ"). ಎಲ್ಲರಿಗೂ ಒಂದೇ ಬಗೆಯ ಅಂಗಗಳಿರುವಾಗ ಭವಿ ಭಕ್ತ ಶ್ವಪಚ ಶೂದ್ರರೆಂಬ ಭೇದವೇ ಅನುಚಿತ.

**ಅವಯವಗಳೆಲ್ಲರಿಗೆ ಸವನಾಗಿ ಇರುತಿರಲು**
**ಭವಿ ಭಕ್ತ ಶ್ವಪಚ ಶೂದ್ರರಿವರೆಂತೆಂಬ**
**ಕದನವೆತ್ತಣದು ಸರ್ವಜ್ಞ॥**

ಯಾತರ ಹೂವಾದರೂ ಅದು ಸುವಾಸನೆ ಕೊಟ್ಟರೆ ಸಾಕು, ಶ್ರೇಷ್ಠ.

**ಯಾತರದು ಹೂವೇನು ನಾತರದು ಸಾಲದೇ**
**ಜಾತಿ ವಿಜಾತಿಯೆನಬೇಡ ದೇವನೊಲಿ**
**ದಾತನೇ ಜಾತ ಸರ್ವಜ್ಞ॥**

ಕೊಂದು ತಿನ್ನುವುದು ಹೊಲೆಯರ ಸ್ವಭಾವ. ಅವರಿಗಿಂತ, ಬದುಕಿರುವವರನ್ನೇ ತಿನ್ನುವವರು ಅಧಮರು.

**ಕೊಂದು ತಿಂಬಾ ಭಾಷೆ ಸಂದಿಹುವು ಹೊಲೆಯರಿಗೆ**
**ಸಂದುದಲ್ಲದನು ತಿನ್ನದ ಹಾರುವನು**
**ಕೊಂದನೇಕಯ್ಯ ಸರ್ವಜ್ಞ॥**

**ಸಾದರಿಗೆ ಮಾದರಿಗೆ ಭೇದವೇನಿಲ್ಲಯ್ಯ**
**ಮಾದಿಗನು ತಿಂಬ ಸತ್ತುದನು, ಸಾದ ತನ**
**ಗಾದವರ ತಿಂಬ ಸರ್ವಜ್ಞ॥**

**ಸತ್ತ ಕತ್ತೆಯ ಹೊತ್ತರೆತ್ತಣದ ಹೊಲೆಯನು**
**ಉತ್ತಮನೆಂದು ಹೆರರೊಡವೆ ಹೊತ್ತರವ**
**ನಿತ್ಯವೂ ಹೊಲೆಯ ಸರ್ವಜ್ಞ॥**

ದೈವಕ್ಕೆ ಬಾಗದವನೇ ನಿಜವಾದ ಮಾದಿಗ, ಹುಟ್ಟು ಮಾದಿಗ ಮಾದಿಗ ಅಲ್ಲ.

**ಭೂತೇಶಗೆರಗುವನು ಜಾತಿ ಮಾದಿಗನಲ್ಲ**
**ಜಾತಿಯಲಿ ಹುಟ್ಟಿ ಶಿವನಿಗೆ ಶರಣೆನ್ನ**
**ದಾತ ಮಾದಿಗನು ಸರ್ವಜ್ಞ॥**

## ಶಂಕರದೇವನ (ಸು. 1679) ಪುನರ್ದೀಕ್ಷೆಯ ರಗಳೆ[12]

ಹೀನಕುಲದವನಾದ ಶಿಷ್ಯನ ಮನೆಗೆ ಹೋಗಿ ಉಣ್ಣದ ವೀರಶೈವ ಗುರುವನ್ನು ಖಂಡಿಸಿದ್ದಾನೆ ("ಅಕ್ಕುಲಜನೆಂದು ಶಿಷ್ಯನ ಮನೆಯೊಳನ್ನಮಂ । ಹೊಕ್ಕುಣದಧಮರಿಗೆ ಸಿಕ್ಕದು ಪುನರ್ದೀಕ್ಷೆ").

## ರುದ್ರಕವಿಯ ಕರಸ್ಥಲ ನಾಗಲಿಂಗನ ಚರಿತ್ರೆ[13]

ಸು. 1430ರಲ್ಲಿದ್ದ ನೂರೊಂದು ವಿರಕ್ತದಲ್ಲಿ ಒಬ್ಬನಾದ ನಾಗಲಿಂಗನ ಕತೆ ಈ ಕೃತಿಯಲ್ಲಿದೆ. ಒಮ್ಮೆ ಆತ ತನ್ನ ಗುರುವೊಂದಿಗೆ ಗುಮ್ಮಣಪುರಕ್ಕೆ (=ಗುಮ್ಮಳಾಪುರ) ಬಂದಾಗ ಒಬ್ಬ ಹೆಣ್ಣು ನಾಗಲಿಂಗನನ್ನು ನುಡಿಸಿದಳು. ಅಸ್ಪೃಶ್ಯ ಜಾತಿಯ ಅವಳು ತನ್ನ ಕುಷ್ಟರೋಗದ ಗಂಡನಿಗೆ ಪಕ್ಕದ ಊರಿನಿಂದ ಔಷಧ ತರುತ್ತಿದ್ದಳು. ನಾಗಲಿಂಗ ಹಾಲನ್ನು ತರುವಂತೆ ಹೇಳಿ ಆ ಪಾತ್ರೆಯ ತುಂಬ ಮೂತ್ರ ಮಾಡಿಬಿಟ್ಟ. ಅದನ್ನು ಸೇವಿಸಿದ ರೋಗಿಗೆ ಆರೋಗ್ಯ ಮರುಕಳಿಸಿತು. ದಂಪತಿಗಳಿಬ್ಬರೂ ಬಂದು ಆ ವಿರಕ್ತನನ್ನು ತಮ್ಮ ಮನೆಗೆ ಕರೆದರು. ನಾಗಲಿಂಗನ ಗುರು ಶಾಂತವೀರಯ್ಯ ಹೊಲೆಯನ ಮನೆಗೆ ಹೋಗಲು ನಿರಾಕರಿಸಿದ. ನಾಗಲಿಂಗನು ಗುರುವಿನ ಆಜ್ಞೆ ಮೀರಿ ಹೊಲೆಯನ ಮನೆಗೆ ಹೋಗಿಬಿಟ್ಟ. ವೇದಶಾಸ್ತ್ರಗಳನ್ನು ಮೀರಿ ನಡೆಯುವಾತ, ತಂದೆ ವಾಕ್ಯವನ್ನು ಮೀರಿದವ, ಗೋಗಳ ಸೆರೆಯಾದ್ದನ್ನು ನೋಡಿಯೂ ಸುಮ್ಮನಿರುವ ಕ್ಷತ್ರಿಯ, ಸಂಜೆ ಉಣ್ಣುವ ವೈಶ್ಯ–ಇವರು ಚಂಡಾಲರು, ಹುಟ್ಟಿನಿಂದ ಬಂದವರು ಹೊಲೆಯರಲ್ಲವೆಂದು ವಾದಿಸಿದ. ಗುಮ್ಮಳಾಪುರ ಕ್ಷೇತ್ರದಲ್ಲಿ ಎಲ್ಲವೂ ಲಿಂಗಮಯ, ಪವಿತ್ರ ಎಂದೂ ವಾದಿಸಿದ ನಾಗಲಿಂಗಯ್ಯನನ್ನು ಗುರು ಹುಚ್ಚನೆಂದೇ ತಿಳಿದ. ಹೀನರ ಮನೆಗೆ ಕರಸ್ಥಲದ ನಾಗಲಿಂಗಯ್ಯ ಬಂದ ಸುದ್ದಿ ಕೇಳಿ ಶಿವಭಕ್ತರೆಲ್ಲ ಅಲ್ಲಿಗೆ ಧಾವಿಸಿದ್ದರು. ಹೊಲೆಯನ ಮನೆಯಲ್ಲಿರುವುದು ಅನುಚಿತ ಎಂದು ಅವರು ತಮ್ಮ ಮನೆಗೆ ಕರೆದಾಗ ಅವನು ಕೋಪದಿಂದ ತನ್ನ ಶಲ್ಯವನ್ನು ಎಸೆದ ತಕ್ಷಣ ಅದು ಹಾವಾಗಿ ಭೋರ್ಗರೆಯಿತು. ಜನ ಓಡಿ ಹೋದರು. ಹೊಲೆಯನ ಮನೆಯಲ್ಲಿ ಭೋಜನ ಮಾಡದ ಶಿವಭಕ್ತರಿಗೆ ಬುದ್ಧಿಕಲಿಸಬೇಕೆಂದು ಅವರ ಮನೆಯಲ್ಲಿ ಉಣ್ಣುತ್ತಿರುವಾಗ ವಾಂತಿಮಾಡಿಕೊಂಡ. ಈ ಗುರುಪ್ರಸಾದವನ್ನು ನೀವು ತೆಗೆದುಕೊಳ್ಳಿ ಎಂದಾಗ ಅವರೆಲ್ಲ ಓಡಿಬಿಟ್ಟರು, ಆದರೆ ಕುಷ್ಟರೋಗ ಪರಿಹಾರ ಮಾಡಿಕೊಂಡಿದ್ದ ಹೊಲೆಯ ಭಕ್ತ ಅದನ್ನು ಭಕ್ತಿಯಿಂದ ಸೇವಿಸಿದ. (ಸಂಧಿ ನಾಲ್ಕು). ಐತಿಹಾಸಿಕ ವ್ಯಕ್ತಿ ನಾಗಲಿಂಗನ ವ್ಯಕ್ತಿತ್ವ ಅಪೂರ್ವವಾದುದು.

---

12. ಸಂ: ಎಂ. ಎಸ್. ಸುಂಕಾಪುರ, ಧಾರವಾಡ. 1976, ಪು. 321.

13. ಸಂ: ಕೆ.ಆರ್. ಶೇಷಗಿರಿ, ಮೈಸೂರು, 1972.

## ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ[14] (ಕ್ರಿ.ಶ. 1672)

ಶಾಂತಲಿಂಗದೇಶಿಕ ಹೇಳಿರುವ ಅನೇಕ ಕತೆಗಳಲ್ಲಿ ಹರಿಜನ ಭಕ್ತರ ಕತೆಗಳೂ ಸೇರಿವೆ. ಶಿವ ಮಾದಾರ ಚನ್ನಯ್ಯನ ಮನೆಯಲ್ಲಿ ಉಂಡದ್ದು (1, ಪು. 146), ಮಾದಾರ ಕುಲದಲ್ಲಿ ಹುಟ್ಟಿ ಲಿಂಗದೀಕ್ಷೆ ಪಡೆದ ಹಳ್ಳಯ್ಯನು ಬಸವನಿಗೆ ಮಾಡಿದ ಪಾದರಕ್ಷೆಯನ್ನು ಮಧುರಸನ ಮೆಟ್ಟಿ ರೋಗ ತಂದುಕೊಂಡು ಬಳಿಕ ಹಳ್ಳಯ್ಯನ ಬಚ್ಚಲ ನೀರಿನಿಂದ ಮುಕ್ತನಾದುದು, ಹಳ್ಳಯ್ಯ ಮಧುವರಸರ ಬೀಗತನದ ವಿಷಯ ಕೇಳಿದ ಬಿಜ್ಜಳನು ಅವನ ಕಣ್ಣು ಕೀಳಿಸಿ ಬಳಿಕ ತಾನೇ ಲಿಂಗವಂತರಿಂದ ಹತನಾದ ಕತೆ ಇಲ್ಲಿದೆ (1. ಪು. 229–30) ನಾವದಿಗೆ ಊರಿನ 'ಹಿರಿಯಕುಲ'ದಲ್ಲಿ ಹುಟ್ಟಿದ ಗುಡ್ಡಮ್ಮ ಕುಷ್ಟೆಯಾಗಿದ್ದುದನ್ನು ಕಂಡ ಬ್ರಾಹ್ಮಣರು "ಮೈಗೆಟ್ಟವಳು ಪೊಲತಿ ನೀನು" ಅಗ್ರಹಾರದಲ್ಲಿರಬೇಡ ಎಂದುದನ್ನೇ ಸವಾಲಾಗಿ ತೆಗೆದುಕೊಂಡ ಆಕೆ ಶಿವನನ್ನು ಒಲಿಸಿ ಆರೋಗ್ಯ ಪಡೆದುದು, ವಿಪ್ರರಿಗೆ ಕುಷ್ಟ ಬಂದು ಗುಡ್ಡಮ್ಮನ ಅನುಗ್ರಹದಿಂದ ಅವರು ರೋಗದಿಂದ ಮುಕ್ತರಾದುದು ಈ ಕತೆಯೂ ಇಲ್ಲಿದೆ. (1. ಪು. 386) ಕಕ್ಕಯ್ಯನ ಸತಿ ಮಲ್ಲಿದೇವಿಯಲ್ಲಿ ಮಾದಾರ ಧೂಳಯ್ಯ ಮಗನಾಗಿ ಹುಟ್ಟಿದ; ಕಕ್ಕಯ್ಯನ ಸೋದರಿಯ ಮಗಳು ದಾರುಕೆಯನ್ನು ಅವನು ಮದುವೆಯಾದ; ಅವರಿಗೆ ಹುಟ್ಟಿದ ಮಗುವೇ ವರದಾನಿ (ಗುಡ್ಡವ್ವೆ). ಒಮ್ಮೆ ಧೂಳಯ್ಯ ಪಾದರಕ್ಷೆ ಹೊಲೆಯುತ್ತಿರುವಾಗ ಶಿವ ಕಾಣಿಸಿದರೂ ಮಾತಾಡಿಸಲಿಲ್ಲ (2. ಪು. 37–8). ತಿರುನಾಳ್ಪೋವರನ ಕತೆಯೂ (2. ಪು. 117–8) ಉರಿಲಿಂಗ ಪೆದ್ದಿಯ ಕತೆಯೂ ಇಲ್ಲಿದೆ (2. ಪು. 39–40) ಬಂಗಾಳ ದೇಶದ ದೊರೆ ಸುಯಿದಾನಿಯು ಹೊಲೆಯರ ಭಕ್ತರ ಮನೆಗೆ ಊಟಕ್ಕೆ ಹೋಗಲು ನಿರಾಕರಿಸಿ, ಆ ಪಾಪದಿಂದ ನಾಯಿಯಾಗಿ ಹುಟ್ಟಿ ಹಾವಿನಹಾಳ ಕಲ್ಲಯ್ಯನ ಮನೆಯಲ್ಲಿರುತ್ತ ಮುಂದೆ ಕಲ್ಲಯ್ಯನ ಮಹಿಮೆಯಿಂದಾಗಿ ಆ ನಾಯಿ ವೇದವನ್ನು ಹೇಳಲು ಸಮರ್ಥವಾಯಿತು. (2. ಪು. 429–30) ಸಾಮವೇದಿ ಶ್ವಪಚಯ್ಯರ ಕತೆಯೂ ಇಲ್ಲಿದೆ (2. ಪು. 435–6). ಶಿವನಾಗಮಯ್ಯನ ಕೈಯಿಂದ ಬಸವ ಹಾಲು ಕರೆದ ಕತೆಯೂ ಇದೆ (2. ಪು. 437–8) "ಶಿವನಾಗಮಯ್ಯನವರೆಂಬ ಹಿರಿಯ ಭಕ್ತರ ಒಂದು ರೋಮಕ್ಕೆ ವಿಪ್ರರು ಎಣೆಯಲ್ಲವೆಂದು" ಬಸವಣ್ಣ ಹೇಳುತ್ತಾನೆ. 'ಹಿರಿಯ ಭಕ್ತರ' – ಎಂದರೆ ದಲಿತ ಶಿವಭಕ್ತರ ಪ್ರಸಾದವನ್ನು ತಂದು ಬ್ರಾಹ್ಮಣರ ಪ್ರತಿಭಟನೆ ಎದುರಿಸಿದ ಬಿಬ್ಬಿಬಾಚಯ್ಯನ ಕತೆ, ತನ್ನ ಮನೆಗೆ ಹೊಲೆಯನನ್ನು ಬಿಟ್ಟುಕೊಂಡದಕ್ಕೆ ಬ್ರಾಹ್ಮಣರಿಂದ ಬಹಿಷ್ಕಾರ ಪಡೆದ ಕೆಂಭಾವಿ ಭೋಗಣ್ಣನ ಕತೆ ಇಲ್ಲಿವೆ (2, ಪು, 437, 439).

## ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು (16ನೇ ಶ.)

ಆಯಾ ಜಾತಿಯ ವ್ಯಕ್ತಿ ತನ್ನ ಜಾತಿಯ ನಿಯಮದಂತೆ ನಡೆದುಕೊಳ್ಳುವುದೇ

14. ಭಾಗ 1, ಭಾಗ 2. ಸಂ: ಆರ್.ಸಿ. ಹಿರೇಮಠ ಮತ್ತು ಎಂ.ಎಸ್. ಸುಂಕಾಪುರ. ಧಾರವಾಡ, 1964 ಮತ್ತು 1968.

ಶ್ರೇಯಸ್ಕರವೆನ್ನುತ್ತಾನೆ ಈತ. "ಆರಾದಡೂ ಆಗಲಿ, ತಮ್ಮ ಕುಲ ಗೋತ್ರ ಜಾತಿ ಧರ್ಮ ಆಚಾರ ತಪ್ಪಿ ನಡೆವಡೆ ಅವರು ಅನಾಚಾರಿಗಳೆಂದು ಮುಖವ ನೋಡಲ್ಲೆಂದು ನೋಡಾ..." (ಸಂ: ಎಚ್. ಪಿ. ಮಲ್ಲೇದೇವರು. ಧಾರವಾಡ, 1975, ಪು. 44).

## ಷಣ್ಮುಖಸ್ವಾಮಿಗಳ ವಚನಗಳು[15] (17ನೇ ಶ.)

ಹದಿನೇಳನೇ ಶತಮಾನದ ಈ ವಚನಕಾರ ತನ್ನ ವಚನಗಳಲ್ಲಿ ಮಾದಾರ ಚನ್ನಯ್ಯ ಡೋಹರ ಕಕ್ಕಯ್ಯರನ್ನು ಸ್ಮರಿಸುತ್ತ, ಅವರ ಎಂಜಲನ್ನು ತಾನು ತಿನ್ನಲು ಸಿದ್ಧವೆಂದೂ ಶ್ವಪಚಯ್ಯನ ಆಳು ತಾನೆಂದೂ ಹೇಳಿಕೊಳ್ಳುತ್ತಾನೆ (ಪು. 134). ಅವನ ಪ್ರಕಾರ ಜಂಗಮಕ್ಕೆ 'ಜಾತಿ ಬಂಧುಗಳಿಲ್ಲ' (ಪು. 108). ಹೊಲೆಯ ಮಾದಿಗ ಮಾತುಗಳು ನಿಂದಾರ್ಥದಲ್ಲಿ ಹಲವೆಡೆ ಬಳಕೆಯಾಗಿವೆ.

ಪ್ರಾಚೀನ ಅಸ್ಪೃಶ್ಯ ಶಿವಭಕ್ತರ ಬಗ್ಗೆ ತೋರಿರುವ ಗೌರವ ಭಾವನೆ ಹೆಚ್ಚಾಗಿ ಔಪಚಾರಿಕವೆಂದು ತೋರುತ್ತದೆ.

## ಶಿವಲಿಂಗಕವಿಯ ಅಮುಗಿದೇವಯ್ಯಗಳ ಸಾಂಗತ್ಯ[16] (17ನೇ ಶ.)

ಇದರಲ್ಲಿ ವೇಶ್ಯಾ ಸಿದ್ಧಾಂತವನ್ನು ತಾಯಿ ತನ್ನ ಮಗಳಿಗೆ ಬೋಧಿಸುವಾಗ, ಹಣವುಳ್ಳವನೇ ಕುಲಜ, ಹಣವಿಲ್ಲದವನೇ ಹೊಲೆಯ ಎಂಬ ನೀತಿಯನ್ನು ಹೇಳುತ್ತಾಳೆ – "ಹೊಲೆಯಗೆ ಹಣವಿರೆ ಕುಲವುಳ್ಳವನೆಂದರಿ । ಕುಲಜ ಬಡವನಾಗಿ ಬರಲು । ಹೊಲೆಯನೆಂದರಿವುದು ಸುಲಭ ಸೂಳೆಯರಿಗೆ । ನೆರೆನಂಬು ನಂಬೆಲೆ ಮಗಳೆ" (ಪು. 52). ಶಿವಭಕ್ತನಿಗೆ ಜಾತಿ ಸೂತಕ, ಜನನ ಸೂತಕ, ಪ್ರೇತಸೂತಕ ಗಳಿಲ್ಲ ಎಂಬ ಮಾತು ಒಂದು ಕಡೆ ಬಂದಿದೆ (ಪು. 79).

## ರಾಘವಾಂಕ ಚರಿತ್ರೆ

ಗೋಕರ್ಣದಲ್ಲಿ ಹುಟ್ಟುಗುರುಡಿಯೂ ಕುಷ್ಠಾಂಗಿಯೂ ಮಲಮೂತ್ರಗಳಿಂದ ನಾರುತ್ತಿದ್ದವಳೂ ಆದ ಚಾಂಡಾಲಿಗೆ ಕೈಲಾಸ ಪ್ರಾಪ್ತವಾದುದರ ಕತೆ ಇದೆ (10.31–42). ಸೌಮಿನಿಯೆಂಬ ಬ್ರಾಹ್ಮಣ ಸ್ತ್ರೀ ವಿಧವೆಯಾಗಿ, ಬಳಿಕ ಶೂದ್ರನೊಬ್ಬನ ಸಂಗಮಾಡಿ ಗರ್ಭಿಣಿಯಾಗಲು ಬಳಗವೆಲ್ಲ ಅವಳನ್ನು ಹೊರಕ್ಕೆ ಅಟ್ಟಿದರು. ಶೂದ್ರನ ಜೊತೆ ಸೇರಿ ಮಾಂಸ ತಿಂದು ಸುರೆ ಕುಡಿದು ಮಹಾಪಾಪಿಯಾಗಿ ಕೊನೆಗೆ ಒಂದು ಶಿಶುವನ್ನು ಹೆತ್ತಳು. ಒಮ್ಮೆ ಗಂಡ ಇಲ್ಲದಿರುವಾಗ ಮಾಂಸದ ಆಸೆಯಾಗಿ ರಾತ್ರಿ ಒಂದು ಹಸುವಿನ ಕರುವನ್ನು ಕೊಂದು, "ಪಶು ಹತ್ಯೆಯಾಯಿತು ಶಿವ ಶಿವಾ" ಎಂದು ಉದ್ಗರಿಸುತ್ತ, ಮಾಂಸವನ್ನು ಬೇಯಿಸಿ ತಿಂದು ಬಿಟ್ಟಳು. ಬೆಳಿಗ್ಗೆ ಕರುವನ್ನು

15. ಸಂ: ಹ. ನಂ. ವಿಜಯಕುಮಾರ. ಹುಮನಬಾದ, 1977.

16. ಸಂ: ಎಚ್. ತಿಪ್ಪೇರುದ್ರಸ್ವಾಮಿ. ಮೈಸೂರು. 1965.

ಹುಲಿ ತಿಂದಿತು ಎಂದು ಸುಳ್ಳು ಹೇಳಿದಳು. ಕೆಲದಿನದ ಮೇಲೆ ಅವಳು ಸತ್ತಳು. ಯಮ ಅವಳು ಮಾಡಿದ ಪಾಪಕ್ಕೆ ಚಾಂಡಾಲಿಯಾಗಿ ಹುಟ್ಟಲಿ ಎಂದೂ, ಒಮ್ಮೆ 'ಶಿವಾ ಶಿವಾ' ಎಂದುದಕ್ಕೆ ಶಿವಲಿಂಗ ಪೂಜಾ ಫಲ ದೊರಕಲಿ ಎಂದೂ ನೇಮಿಸಿದ. ಅವಳು ಹುಟ್ಟುಗುರುಡಿ ಚಾಂಡಾಲಿಯಾಗಿ ಜನಿಸಿದಳು. ತಂದೆ ತಾಯಿಗಳು ಕುಡಿಯಬಾರದ್ದನ್ನು ಕುಡಿಸಿ ತಿನ್ನಬಾರದ್ದನ್ನು ತಿನ್ನಿಸಿ ಬೆಳೆಸಿದರು. ಬಾಲ್ಯದಲ್ಲೇ ಕುಷ್ಟ; ಕೀವಿನಿಂದ ಹುಳು ಸುರಿದವು. ತಾಯ್ತಂದೆಗಳು ಸತ್ತರು. ಪಾಪಿ ಎಂದು ಅವಳನ್ನು ಅವಳ ಸೋದರರು ಹೊರಗೆ ಅಟ್ಟಿದರು. ಹೊಲೆಗೇರಿಯಲ್ಲಿ ಎಂಜಲು ತಿನ್ನುತ್ತ, ಹಳೆಯ ಬಟ್ಟೆ ಉಟ್ಟು ತೊಂಬತ್ತು ವರ್ಷ ಕಳೆದ ಅವಳು ಹೇಗೋ ಗೋಕರ್ಣಕ್ಕೆ ಬಂದಳು. ಅವಳ ಕೈಗೆ ಯಾರೋ ಎಸೆದ ಬಿಲ್ವಪತ್ರೆಯನ್ನು ಅವಳು ತಿನ್ನಲು ಅಯೋಗ್ಯ ಎಂದು ಎಸೆದಾಗ ಅದು ಅಕಸ್ಮಾತ್ ಲಿಂಗದ ಮೇಲೆ ಬಿದ್ದಿತು. ಆ ದಿನ ಶಿವರಾತ್ರಿ, ಅವಳು ಅನಿವಾರ್ಯವಾಗಿ ಉಪವಾಸವೂ ಇರಬೇಕಾಯ್ತು. ಹೀಗಾಗಿ ಅವಳು ಸಾವಿನಲ್ಲಿ ಸದ್ಗತಿ ಪಡೆದಳು.

## ಕಂಠೀರವ ನರಸರಾಜ ವಿಜಯ (ಕ್ರಿ.ಶ. 1684)

ಶ್ರೀರಂಗಪಟ್ಟಣವನ್ನು ವರ್ಣಿಸುತ್ತ ಅಲ್ಲಿ ತಾಳಧಾರಿ, ಮದ್ದಳಿಗ, ನಾಗಸ್ವರ ಮೌರಿ ವಾದಕರು, ಆಳಾಪಿಗ, ನಟುವಿಗ, ಜೋಗಿ ಇವರ ಮನೆಗಳ ಬೀದಿಗಳಿದ್ದಂತೆ 'ಮಚ್ಚಿಗರ' ಮನೆಗಳ ಬೀದಿಯೂ ಇದ್ದಂತೆ ವರ್ಣನೆಯಿದೆ.

## ಇಮ್ಮಡಿ ಗುರುಸಿದ್ಧನ "ಮುರಿಗೆ ತಾರಾವಳಿ"[17] (ಕ್ರಿ.ಶ. ಸು, 1720)

ಕ್ರಿ.ಶ. 1700ಕ್ಕಿಂತ ಸ್ವಲ್ಪ ಹಿಂದೆ ನಡೆದ ಘಟನೆಯೊಂದನ್ನು ಕವಿ ಹಿಡಿದಿಟ್ಟಿದ್ದಾನೆ. ಒಬ್ಬ ಜಂಗಮ ಶಿವಭಕ್ತೆಯನ್ನು ತ್ಯಜಿಸಿ ಒಬ್ಬ ಹೊಲತಿಯ ಸ್ನೇಹವನ್ನು ಮಾಡಿ ತನ್ನ ಕೊಡೆಗೆ ಕೆರ, ಮೂಳೆಗಳನ್ನು ಕಟ್ಟಿಕೊಂಡು ತನ್ನ ಜೊತೆ ಸೇರಿದವರೇ ತನ್ನವರು, ತನ್ನನ್ನು ಒಪ್ಪದವರೇ ಅನ್ಯರೆಂದು ಹೇಳಿಕೊಂಡು ತಿರುಗುತ್ತಿದ್ದ. ಮುಂದೆ ಶಾಂತವೀರ ಎಂಬ ಗುರುಗಳು ಅವನನ್ನು ಸನ್ಮಾರ್ಗಕ್ಕೆ ತಂದರು.

ಗದಗಿನ ಒಬ್ಬ ಬಣಜಿಗನು 'ಕೊರವಿ' ಯೊಬ್ಬಳಿಗೆ ಲಿಂಗವನ್ನು ಕಟ್ಟಿ (ಕೊರವ ತೀರ ಕೆಳಗಿನ ಜಾತಿ) ಅವಳೊಡನೆ ಸಂಸಾರ ಮಾಡುತ್ತ, ಶಾಂತವೀರ ಗುರುಗಳನ್ನು ತನ್ನ ಮನೆಗೆ ಕರೆದಾಗ ಅವರು ಒಪ್ಪಿದರು. ಜನ ಭವಿಯ ಮನೆಗೆ ಹೋಗಬೇಡಿ ಎಂದು ಆಕ್ಷೇಪಿಸಿದಾಗ, ಶಾಂತವೀರರು ಒಪ್ಪದೆ, ಆಕೆಗೆ ಲಿಂಗಧಾರಣೆಯಾಗಿರುವುದರಿಂದ ಆ ಭಕ್ತರ ಮನೆಗೆ ಹೋಗುವುದು ಆಗಮ ಸಮ್ಮತವಾದುದು ಎಂದು ವಾದಿಸಿದರು (ಪು. 281–2).

---

17. ಸಂ: ಎಸ್. ವಿದ್ಯಾಶಂಕರ. ಚಿತ್ರದುರ್ಗ, 1978.

## ಶ್ರೀ ವಿಜಯದಾಸರು (18ನೇ ಶ.)

58ನೇ ಸುಳಾದಿಯಲ್ಲಿ 'ಮಾತಂಗಿ' ಎಂಬ ದೇವತೆಯ ಹೆಸರಿದೆ. 'ಹೊಲೆಯ', 'ಹೊಲತಿ' ಯಾರು ಎಂಬ ವಿವೇಚನೆ ಎರಡು ಸುಳಾದಿಗಳಲ್ಲಿದೆ (59, 60)

**ಹೊಲತಿ ಮತ್ತಾವಳೊ ಹೊಲಗೇರಿಯೊಳಗಿಲ್ಲ**
**ಹೊಲಗೇರಿಯೊಳಗಿದ್ದ ಹೊಲೆ ಹೊಲತೆ ಎಲ್ಲ**
**ಕುಲವೇ ಅವಳಾದರೂ ಹಳಿಯುವದಿನ್ಯಾಕೆ ಅವಳು**
**ಒಳಗೆ ಬಾರಳು ನಡ್ಮೊಳಗೆ ತಿರುಗಬಲ್ಲಳೀ**

..........................

**ಇಳೆಯೊಳಗೆ ಮಹಾಹೊಲತಿಯ ನಡತಿಯ**
**ನೆಲೆಯ ತಿಳಿದು ಸ್ನೇಹ ಬಳಿಸಿರೊ ಸಜ್ಜನರು**
**ಬಲುದೈವ ವಿಜಯವಿಠ್ಠಲನ ಪದಾಬ್ಜಕೆ (ಭಕ್ತಿ)**
**ತಿಳಿಯದವಳು ಶುದ್ಧ ಹೊಲತಿ ಕಾಣಿರೊ ನಿತ್ಯ**

(ಮಕ್ಕಳನ್ನು ಪ್ರೀತಿಸದವಳು, ಗಂಡನಲ್ಲಿ ಭಕ್ತಿ ಮಾಡದವಳು, ಕಡಬಡ್ಡಿ ಮಾಡುವವಳು, ಮದ್ದಿಕ್ಕಿ ಕೊಲ್ಲುವವಳು, ಕದ್ದು ತಿನ್ನುವವಳು, ಹುಟ್ಟಿದ ಮನೆಗೆ ಅಪಕೀರ್ತಿ ತರುವಾಕೆ ಇವರೇ ಮೊದಲಾದವರು ನಿಜವಾದ ಹೊಲತಿಯರು).

ಹಾಗೆಯೇ "ಹೊಲೆಯನಾವನೊ ಈ ಕಲಿಯುಗದೊಳಗೆ" – ಕೋಪ ಬಿಡದವನು, ಹುಸಿ ನುಡಿದವನು, ವಂಶಾವಳಿ ಕೆಡಿಸುವವನು, ಅನ್ನದಾನ ಮಾಡದವ, ಕನ್ನಿಕೆಯನ್ನು ಮಾರಿಕೊಂಡು ಉಣ್ಣುವವ, ಬೆನ್ನಿಗೆ ಬಿದ್ದವನನ್ನು ಒಪ್ಪಿಸಿಕೊಡುವಾತ, ಕವಿಗಳ ನಿಂದಿಸುವಾತ, ನೀರುಳ್ಳಿ ತಿನ್ನುವವ, ಹೊತ್ತು ಹುಟ್ಟಿದರೂ ಮಲಗಿರುವಾತ ಇವರೇ ಮೊದಲಾದವರು ಹೊಲೆಯರು.

**ಕ್ರಿ.ಶ. 1430ರ ಲಕ್ಷಣ ದಂಡೇಶನು ತನ್ನ ಶಿವತತ್ವ ಚಿಂತಾಮಣಿಯಲ್ಲಿ** (38: 141–3) ಕಡೂರು ತಾಲೂಕಿನ ಬಳ್ಳೆಕೆರೆ ಗ್ರಾಮದ ಘಟನೆಯೊಂದನ್ನು ದಾಖಲಿಸಿದ್ದಾನೆ. ನಾಗರಸ ಎಂಬ ಗುರು ಅಂತ್ಯಜನೊಬ್ಬನಿಗೆ ಲಿಂಗೋಪದೇಶ ಮಾಡಿದಾಗ ಊರಿನ ಜನರ ಬಹಿಷ್ಕಾರಕ್ಕೆ ಒಳಗಾದ; ಗುರು ಶಿಷ್ಯ ಇಬ್ಬರೂ ಊರು ಬಿಡುತ್ತಾರೆ. ಪರಿಣಾಮ–ಆ ಊರಿನ ಬಾವಿಯ ನೀರು ಬಗ್ಗಡಗೊಂಡು ಉಪ್ಪು ನೀರಾಯ್ತು. ಜನ ಪಶ್ಚಾತ್ತಾಪ ಪಟ್ಟು ಅವರಿಬ್ಬರನ್ನೂ ಕ್ಷಮೆ ಕೋರಿ ಕರೆತಂದಾಗ, ಗುರುಗಳು ಅಂತ್ಯಜ ಶಿವಭಕ್ತನ ಪಾದೋದಕವನ್ನು ಬಾವಿಗೆ ಹಾಕಿದಾಗ ನೀರು ಎಂದಿನಂತೆ ಸಿಹಿ ಆಯ್ತು. ಜನರು ಅಂತ್ಯಜ ಶಿವಭಕ್ತನ ಪಾದೋದಕ ಸೇವಿಸಬೇಕಾಯ್ತು! (ನೀರು ಬಗ್ಗಡಗೊಂಡದ್ದು ಕಲ್ಪಿತವಾಗಿದ್ದರೂ ಆ ಅತ್ಯಂತ ಅಪೂರ್ವ ಘಟನೆ ಒಟ್ಟಾರೆ ನಿಜ.)

**ಅಂತ್ಯಜನಿಗೆ ವೇದ :** ಅದೇ ಕಾಲದಲ್ಲಿದ್ದ ಗುಬ್ಬಿಯ ಮಲ್ಲಣಾರ್ಯನು (ಇವನ ಕೃತಿ 'ಗಣಭಾಷಿತ ರತ್ನಮಾಲೆ') ಪುಲ್ಕಸ ಜಾತಿಯ ಅಂತ್ಯಜನಿಗೆ ವೇದವನ್ನು ಕಲಿಸಿದಂತೆ ಮುಂದಿನ ಕೃತಿಗಳಲ್ಲಿ ದಾಖಲಾಗಿದೆ.

# ಅನುಬಂಧ – III

## ಹೊಲೆಯಾಳುಗಳ ಮಾರಾಟ

ಹಿಂದಿನ ಉಪನ್ಯಾಸಗಳಲ್ಲಿ ಪ್ರಾಚೀನ ಕರ್ನಾಟಕದಲ್ಲಿದ್ದ ದಾಸ್ಯ ಪದ್ಧತಿಯನ್ನೂ ದಾಸರನ್ನು ಅಥವಾ ತೊತ್ತುಗಳನ್ನು (Slaves) ಸಂತೆಗಳಲ್ಲಿ ಪ್ರಾಣಿಗಳ ಜೊತೆ ಇಟ್ಟು ಮಾರಾಟಮಾಡುತ್ತಿದ್ದ ವಿಷಯವನ್ನೂ ಪ್ರಸ್ತಾಪಿಸಿದ್ದೇನೆ. ಮಾರಾಟಕ್ಕಿದ್ದ ತೊತ್ತುಗಳ ತಲೆಗೆ ಹುಲ್ಲನ್ನು ಕಟ್ಟಿರುತ್ತಿದ್ದರೆಂಬುದನ್ನೂ ಸೂಚಿಸಿದ್ದೇನೆ. (ಇದು, ಅವರು ಪ್ರಾಣಿಗಳಿಂದ ಬೇರೆ ಅಲ್ಲವೆಂಬುದರ ಸೂಚನೆ ಇರಬಹುದು). ಈ ಅನುಬಂಧದಲ್ಲಿ ತೊತ್ತುಗಳನ್ನು ಸಂತೆಯಲ್ಲಿ ಎತ್ತು ಕುದುರೆಗಳ ಜೊತೆ ಮಾರಾಟಕ್ಕಿಡುತ್ತಿದ್ದ ಉಲ್ಲೇಖವಿರುವ ಕ್ರಿ.ಶ. 1430ರ ಒಂದು ಶಾಸನದ (ಈ ತೊತ್ತುಗಳು ಬಹುಶಃ ಹೊಲೆಯರೇ) ಮತ್ತು ತೊತ್ತುಗಳಾಗಿದ್ದ ಹೊಲೆಯರ ಮಾರಾಟದ ಮೂರು ಕ್ರಯ ಪತ್ರಗಳ ಪಾಠವನ್ನು ಕೊಡುತ್ತೇನೆ.

### ಎಪಿಗ್ರಾಫಿಯ ಕರ್ನಾಟಿಕ. X. ಬೌರಿಂಗ್‌ಪೇಟೆ. 72, ಕ್ರಿ.ಶ. 1430 (ಮರಗಲ್ಲು ಗ್ರಾಮದ ಶಾಸನ)

"ಸಾಧಾರಣ ಸಂವತ್ಸರ ಜೇಷ್ಠ ಬ 13ರಲು ಶ್ರೀಮನ್ ಮಹಾರಾಜಾಧಿರಾಜ ಪರಮೇಶ್ವರರ್ ವಾರಿರಾಯ ಕಠಾರಿತ್ರಿಣೇತ್ರ ಪೂರ್ವ ದಕ್ಷಿಣ ಪಶ್ಚಿಮ ಉತ್ತರ ಚತುಸ್ಸಮುದ್ರಾಧಿಪತಿ ಶ್ರೀ ವೀರವಿಜಯ ಮಹಾರಾಯರ ಕುಮಾರ ದೇವರಾಯರ್ ಸಿಂಹಾಸನದಲ್ಲಿ ಲಕ್ಕಂಣವೊಡೆಯರ ಮುಳಬಾಗಿಲ ತೆಕಲನಾಡ ಜುಂಜಿರುಗಂಣಗಳಿಗೆ ಸಲ್ಲುವ ಮರಗಳು ಅಯಿವತ್ತಾಱು ದೇಶದ ಸಾಲು ಮೂಲೆ ಸಮಸ್ತ ಹಲರು ಪಂಚಾಳ ಸಹಿತವಾಗಿ ಕೂಡಿ ಸಂತೆಯ ಕಟ್ಟಿಸಿದ ಸಂಬಂಧ ಆ ಸಂತೆಯ ಪಟ್ಟಣಸ್ವಾಮಿ ಚಿಯಿಯ ಬಸ್ಸಿಸೈಟ್ಟಿಗೆ ಮಾನ್ಯವಾಗಿಸಲು ಹ ಹೊಲನು ಖಂ ॥ ಗದ್ದೆ ಖಂ ॥

ಸಡುದರಿಸಿನವೊಳಗಾದವರುಂ... ಕೊತ್ತು **ಯೆತ್ತು ತೊತ್ತು ಕುದುರೆ ಕೊಂಡರೂ** ಮಾಱುದಡೂ ಸರ್ವಮಾಂನ್ಯ ಕಬ್ಬಿಣ ಕೆಲಸ ಮರಕೆಲಸ ಅಕ್ಕಸಾಲೆ ಅಸಗ ನಾವಿಂದ

ಹೊಲೆಯನುಯಿಂತಿವರು ಸರ್ವಮಾಂನ್ಯ ಸಲಿಸುವರು ಯೀ ಸಾಸನ ಮರಿಯಾದಿಗೆ ತಪ್ಪಿದವರು ಗಂಗೆಯ ತಡಿಯ ಕಪಿಲೆಯಂ ಕೊಂದ ಪಾಪದಲಿ ಹೋವರು ಹಿಜೆಯ ಮ... ದಲಿ ಕಾಡಿಗೆಯನಿಕ್ಕಿದ ಪಾ... ಪೋವರು."

## ಹೊಲೆಯರ ಮಾರಾಟದ ಕ್ರಯ ಪತ್ರಗಳು

ಶೃಂಗೇರಿ ಮಠದ ಕಡತಗಳಲ್ಲಿರುವ ಈ ಮುಂದಿನ ಕ್ರಯಪತ್ರ ಅಥವಾ ಕ್ರಯ ಚೀಟಿಗಳು ಡಾ. ಎಂ.ಕೆ. ಶಾಸ್ತ್ರಿಯವರ ಮೂಲಕ ಲಭಿಸಿವೆ. ಅವರು Indian Council of Historical Research ಎಂಬ ಸಂಸ್ಥೆಗಾಗಿ ಸಿದ್ಧಪಡಿಸಿರುವ Selections from the Kaditas of the Shringeri Matha ಎಂಬ ಅಪ್ರಕಟಿತ ಕೃತಿಯಲ್ಲಿ ಇವು ಸೇರಿವೆ. (ಅಧ್ಯಾಯ 11). ಈ ಮೂರರಲ್ಲೂ ಜಮೀನುದಾರರು ತಮ್ಮ ಸ್ವಂತ ಪಿತ್ರಾರ್ಜಿತ ಆಸ್ತಿಗಳನ್ನು ಹೊಲೆಯರನ್ನು ಇತರರಿಗೆ ಮಾರಾಟಮಾಡಿ ಕ್ರಯಚೀಟುಗಳನ್ನು ಬರೆದು ಕೊಟ್ಟ ವಿಷಯವಿದೆ. ಆ ಕ್ರಯಚೀಟುಗಳ ಒಂದೊಂದು ಪ್ರತಿಯನ್ನು ಶೃಂಗೇರಿ ಮಠದಲ್ಲಿಡುತ್ತಿದ್ದರು.

### ಕ್ರಯಚೀಟು 1 (16.4.1710)

"ಶುಭಮಸ್ತು. ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೆ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಯ ಶಂಭವೆ.

ಸ್ವಸ್ತಿಶ್ರೀ ಜಯಾಭ್ಯದಯ ಶಾಲಿವಾಹನ ಶಕವರುಶ 1631ನೆಯ ವರ್ತ್ತಮಾನಕ್ಕೆ ಸಲುವ ವಿಕ್ರುತ್ತಿ ಸಂ ಚಯಿತ್ರ ಬ 14 ಯು ರವಿವಾರದಲು ವಿಶ್ವಾಮಿತ್ರಗೋತ್ರದ ಆಶಾಲಾಯನದ ಸೂತ್ರದ ರುಕುಶಾಖೆಯ ಮಾಧವಭಟ್ಟರ ಪಉತ್ರರಾದ ವಾಸುದೇವ ಭಟ್ಟರ ಪುತ್ರರಾದ ಗಣೇಶಭಟ್ಟರಿಗೆ ಭಾರದ್ವಾಜ ಗೋತ್ರದ ಆಶ್ಲಾಯನದ ಸೂತ್ರದ ರುಕುಶಾಖೆಯ ಕುರುವದ ನಾರಣ ಹೆಬಾರನ ಪಉತ್ರನಾದ ಅಪ್ಪಯ ಹೆಬ್ಬಾರನ ಪುತ್ರನಾದ ಮಲ್ಯೆಯ ಹೆಬಾರನು ಕೊಟ್ಟ ಆಳು ಅಪ್ಪಯ ಹೆಬಾರನ ಪಉತ್ರನಾದ ತ್ರಿಂಮಯ ಹೆಬಾರನ ಪುತ್ರನಾದ ವೆಂಕಪ್ಪ ಹೆಬಾರನು ಕೊಟ್ಟ ಆಳಿನ ಕ್ರಯಪಟ್ಟಿ ಕ್ರಮವೆಂತ್ತೆಂದರೆ ನಾನು ನಂನ ಆಳ ಅನುಪತ್ತ್ಯನಿಮಿತ್ಯವಾಗಿ ನನಗೆ ನಂಮ ಪಿತ್ರಂಜಿತ್ತವಾಗಿ ಬಂದ ಕಿರಡ್ಡಿಯಂಬ ಹೊಲೆಯನ ಮೊಂಮಗ ಸಂಕನ ಕುರದೆ ತ್ತಿಂಮ ಯಂಬ ಕುರದೆಯ ಗುಡ್ಡಿ ಸರಕು ಸಹಾ ವಿಶ್ವಾಮಿತ್ರ ಗೋತ್ರದ ಆಶ್ಲಾಯನದ ಸೂತ್ರದ ರುಕುಶಾಖೆಯ ಮಾಧವಭಟ್ಟರ ಪಉತ್ರನಾದ ವಾಸುದೆವಭಟ್ಟರ ಪುತ್ರನಾದ ಗಣೆಶಭಟ್ಟರಿಗೆ ನಾರಣ ಹೆಬಾರನ ಪಉತ್ರನಾದ ಉಪ್ಪಯ ಹೆಬಾರನ ಪುತ್ರನಾದ ಮಡ್ಡಿಕೆ ಮಲಯ ಹೆಬಾರನು ನಂನ ಕುರದೆಯ ಕ್ರಯಕ್ಕೆ ಕೊಟ್ಟೆನಾಗಿ ಯೀ ಕುರದೆಗೆ ಸಲುವ ಕ್ರಯದ್ರವ್ಯ ತ್ಕಾಲೊಚಿತ್ತ ಮಧ್ಯಸ್ಥ ಕಲ್ಪಿತ ಉಭಯವಾಧಿ ಸಂಪ್ರತಿಪಂನ ಲಕ್ಷಣ ಲಕ್ಷಿತ ಕ್ರಯದ್ರವ್ಯ ಗ 6 ಉಚಿತ್ತ ಗ 3.1 ಉಭಯಂ ಗ 9.1 ಯೀ ವರಹಾ

ಗಳಂನು ತ್ತೆಗದುಕೊಂಡು ವಿಶ್ರಾಮಿತ್ರ ಗೊತ್ರದ ಆಶ್ಲಾಯನದ ಸೂತ್ರದ ರುಕು ಶಾಖೆಯ ಮಾಧಭಟ್ಟರ ಪಉತ್ರರಾದ ವಾಸುದೆವಭಟ್ಟರ ಪುತ್ರನಾದ ಗಣೇಶಭಟ್ಟನಿಗೆ ಭಾರಧ್ವಾಜಗೋತ್ರದ ಆಶ್ಲಾಯನದ ಸೂತ್ರದ ರುಕುಶಾಖೆಯ ನಾರಣ ಹೆಬಾರನ ಪುತ್ರನಾದ ಅಪ್ಪು ಹೆಬಾರನ ಪುತ್ರನಾದ ಮಡಿಕೆ ಮಲ್ಲೈಯ ಹೆಬಾರನು ನಂನ ಸ್ತ್ರೀ ಪುತ್ರ ಗ್ನಾ್ಯದಿ ದಾಯಾದ್ಯ ಸಾವಂತ್ತಾನುಮತ್ತದಿಂದ ಪುರಸ್ಕರವಗಿ ಸ್ವರುಚ್ಛಾ ವಡಂಬಟ್ಟು ಕೊಟ್ಟೆನಾಗಿ ಮೆರ ಹೊಲೆಯಾಳಿನ ಕ್ರಯಪಟ್ಟೆಯಿದಕ್ಕೆ ಸಾಕ್ಷಿಗಳು ಅವಧಾನದ ಶೆಶಭಟ್ಟ ವಡೆರಭ ಶಂಕ್ರರಭಟ್ಟರು ಅಂಣ್ಣೈಭ ಮಗ ಶಾಮಿಭ ತ್ತಿಂಮಯ ಹೆಬ್ಬಾರನ ಮಗ ವೆಂಕಪ್ಪ ಕಂಮಡ್ಡಿ ಸಿಂಗಗಡೆ ಹಿಂಡ್ರುವಳಿ ವೆಂಕಗಡೆ ಕರ್ತ್ರುವಿನ ಕಂಠ ಮುಟ್ಟಿದ ವಪ್ಪಿತ್ತದ ಬರಹಾ. ಯಿವರುಭಯಾಂನುಮತ್ರದಿಂದ ಪಟ್ಟೆ ಬರದಾತ್ತ ಯಲಪ್ಪ ಜೊಯಿಸ"

ಟಿಪ್ಪಣಿ : ಕುರ(ರು)ದೆ = ಮಗ. ಇಲ್ಲಿ ಮಾರಾಟವಾಗಿರುವಾತ ದಕ್ಷಿಣ ಕನ್ನಡ ಜಿಲ್ಲೆಯ ಮೇರರು ಜಾತಿಗೆ ಸೇರಿದ ಹೊಲೆಯಾಳು ತಿಮ್ಮ. ತಿಮ್ಮನ ಮಾರಾಟದ ಬೆಲೆ ಒಟ್ಟು ಒಂಬತ್ತು ವರಹ ಮತ್ತು ಒಂದು ಹಣ. 'ಗುಡ್ಡಿ ಸರಕು ಸಹ'–ಮಾರಾಟ ಗೊಂಡ ತಿಮ್ಮನ ಜೊತೆ ಅವನ ಗುಡಿಸಲಿನ ಸರಕುಗಳೂ ಸೇರಿದ್ದುವು.

## ಕ್ರಯಚೀಟು 2 (29.1.1758)

"ಕಿರುಕೊಡ ಕ್ರುಷ್ಣಯ್ಯನ ಅನಿಗುಂದದ ದುಗಾಭಟ್ಟನ ಆಳಿನ ವ್ಯವಹಾರದ ಕ್ರಯಚಿಟು ಪ್ರತ್ತಿ. ಯೀಶ್ಚರ ಸಂವತ್ಸರದ ಪುಷ್ಯ ಬ 5 ಲ್ಲು ಶ್ರೀ ಬೆಳಂದೂರ ಪರಮೇಶ್ವರ ಹೆಬಾರನ ಪುತ್ರನಾದ ಶಂಕರನಾರಾಯಣನ ಪುತ್ರನಾದ ಕಿರುಕೊಡ ಕ್ರುಷ್ಣಯ್ಯಗೆ ಆನೆಗುಂದದ ಕ್ರುಷ್ಣಯ್ಯ ಹೆಬಾರನ ಪಉತ್ರನಾದ ರಾಮಚಂದ್ರ ಹೆಬಾರನ ಪುತ್ರನಾದ ದುಗಾಭಟರು ಬರಸಿಕೊಟ ಮೆರ್ರೆ ಹೊಲೆ ಆಳಿನ ಕ್ರಯಚಿಟಿನ ಕ್ರಮವೆಂತೆಂದರೆ ನಮಗೆ ಪಿತರಾರ್ಜಿತವಾಗಿ ಬಂದ ಚಂನನ ಹೊಲತ್ತಿ ಕೆಟ್ಟು ಆ ಹೊಲತ್ತಿಗೆ ತ್ತಪಿದ ಬಗ್ಯೆ ನಾಉ ನಂಮ ಸುಬಂಣ್ಣೈಯ ಸಹ ಕೊಟು ಬಿಡಿಸಿಕೊಂಡು ನಂಮ ಸುಬಂಣ್ಣೈಯನ ಆಳು ಮಲ್ಲುಗೆ ಯಿಟುಕೊಟ್ಟುಯಿದಲ್ಲಿ ಆ ಹೊಲತ್ತಿಗೆ ಹುಟ್ಟಿದ ಕುರ್ರುದೆಗಳ ವಲಗೆ ನಂನ ಪಾಲಿಗೆ ಬಂದ ಹಿರ್ರಿ ಕುರದೆ ಚಂನಯೆಂಬ ಕುರ್ರದೆಯನ್ನು ನಿನಗೆ ಕ್ರಯಕ್ಕೆ ಕೊಟ್ಟೆನಾಗಿ ಯಿ ಆಳಿನ ಸಲು ಕ್ರಯ ತ್ತತ್ಕಾಲೊಚಿತ್ತಹಗಿ ಕ್ರಯ ನಿರ್ನಯ ಮಾಡಿದು ಗ 6 ಆರ್ರು ವರಹಾಂನ್ನು ಸದ್ಯ ಫರ್ರಿಶ್ಚಿತ್ತೆವಾಗಿ ಸಲ್ಲೆ ಸಾಕಲ್ಯವಾಗಿ ತೆಗೆದುಕೊಂಡು ಯೀ ಆಳ ಗುಡಿ ಸರಕು ಸಹವಾಗಿ ನಿಉ ನಿಂಮ ಸಂತಾನ ಪಾರಂಪರ್ರಿಯಾಗಿ ಯಿರಿಸಿ ಬಹಾದೆಂದು ಬರಸಿಕೊಟ್ಟ ಹೊಲೆ ಆಳ ಕ್ರಯಚಿಟು ಯಿದಕೆ ಸಾಕ್ಷಿಗಳು ಆನೆಗುಂದ ಮಲ್ಲಿಕಾರ್ಜುನ ಭಟ್ರೊ ಹಂಚರ್ರಿ ಸುಭಾಭಟರ ಮಗ ಪರಮೇಶ್ವರ ಬೆಳಂಧೂರ ಕ್ರುಷ್ಣಪ ಹೆಬಾರ ಆನಿಗುಂದದ ಸುಬಂಣ್ಣೈಯ್ಯ ಹೊಸಕ್ಕೊಪದ ದೆವರಸ ಹೆಬಾರ ಉಳುವೆ ಹಿರಂಣಗಉಡ

ಕತ್ತುರಿನಾಗರ ಬರಹ ಹಾಕ್ಕಿ ಅದೆ ಸಾಕ್ಷಿಗಳ ಸಾಕ್ಷಿ ಹಾಕಿದು ವಂದೆ ಬರಹವಾಗಿ ಕಾಣುತ್ತದೆ. ಯೀ ಚಿಟು ಬರದಾತ್ತ ಶ್ರುಂಗೆರ್‍ರಿ ಸ್ತಳದ ಸೆನಭವ ವೆಂಕಟಕ್ರುಷ್ಣಯ್ಯ"

ಟಿಪ್ಪಣಿ : ಶೃಂಗೇರಿ ಮಠದ ಅಧಿಕಾರದ ವ್ಯಾಪ್ತಿಯೊಳಗೆ ಬರುತ್ತಿದ್ದ ಪ್ರದೇಶ ದಲ್ಲಿ ವ್ಯಭಿಚಾರ ಮಾಡಿದ ಹೆಂಗಸರನ್ನು ಮಠಕ್ಕೆ ತರಿಸಿ ಹಣಕ್ಕೆ ಅನ್ಯರಿಗೆ ಮಾರು ತ್ತಿದ್ದರು (ಇದು ಅಲ್ಲಿಯ ಹಲವು ಕಡತಗಳಲ್ಲಿದೆ). ಚಂನ ಎಂಬಾತನ ಹೆಂಡತಿ–ಬಹುಶಃ ವಿಧವೆ–ಅಕ್ರಮ ಸಂಬಂಧವಿಟ್ಟುಕೊಂಡದ್ದರಿಂದ ಅವಳನ್ನು ದುರ್ಗಾಭಟ್ಟ ಸುಬ್ಬಣ್ಣಯ್ಯರಿಗೆ ಮಾರಲಾಗುತ್ತದೆ. ಅವರು ಆಕೆಯನ್ನು ಸುಬ್ಬಣ್ಣಯ್ಯನ ಆಳು ಮಲ್ಲು ಎಂಬಾತನಿಗೆ ಇಟ್ಟುಕೊಳ್ಳಲು ಕೊಡುತ್ತಾರೆ. ಆಕೆಯಲ್ಲಿ ಹುಟ್ಟಿದ ಮಕ್ಕಳನ್ನು ದುರ್ಗಾಭಟ್ಟ ಸುಬ್ಬಣ್ಣಯ್ಯರು ಹಂಚಿಕೊಂಡಾಗ, ದುರ್ಗಾಭಟ್ಟ ತನ್ನ ಪಾಲಿಗೆ ಬಂದ ಹಿರಿಯ ಹುಡುಗನನ್ನು ಮಾರುತ್ತಾನೆ. ದುರ್ಗಾಭಟ್ಟನು ವಿಧವೆಯನ್ನು ಕೊಂಡು ಕೊಳ್ಳಲು ಖರ್ಚು ಮಾಡಿದ ಹಣವನ್ನು ಆಕೆಯ ಮಗನನ್ನು ಮಾರಿದ್ದರಿಂದ ಹಿಂದಕ್ಕೆ ಪಡೆದ.

## ಕ್ರಯಚೀಟು 3

"ಹಾಲುಗಾರ ಸುಬ್ಬೈಗೆ ಹೊಲೆಯಾಳ ಕ್ರಚಿಟ್ಟು. ಪ್ರಮಾಧಿಚ ಸಂವತ್ಸರದ ಪುಶ್ಯ ಶ 5 ಲ್ಲು ಶ್ರೀಮತ್ತು ಹಾಲಗಾರ ಕ್ರುಷ್ಣೈಯನ ಮಗ ಸುಬ್ಬೈಯಗೆ ಹಾಲಂಧೂರ ಸದಾಶಿವಭಟ್ರ ಮಗ ಅಂಣ್ಣೈಯ ಭಟ್ಟನು ಬರಶಿಕೊಟ್ಟ ಮೆರ ಹೊಲೆಯಾಳ ಕ್ರಯಚಿಟ್ಟಿನ ಕ್ರಮವೆಂತೆಂದರ್‍ರೆ ನಂಮ ಹಿರ್‍ರೆರ್‍ರಿಗೆ ಪಠಾಳಿ ಸುಬಂಣನಿಂದ ಕ್ರಯವಾಗಿ ಬಂದ ಮೆರ್‍ರೆ ಹೊಲೆಯ ಚಉಡನ ಪರ್‍ರುದೆ ಬುರ್‍ರುಡ ಜನ ಹೊಲತ್ತಿ ಜ 1 ಉಭ ಜ 2 ಯರಡು ಜನದ ಗುಡ್ಡಿ ಸರಕಂನ್ನು ನಿಮ್ಮಗೆ ಕ್ರಯಕ್ಕೆ ಕೊಟ್ಟ ಸಮ್ಮಂಧ ಯಿ ಆಳ ಗುಡ್ಡಿ ಸರಕ್ಕಿಗೆ ಸಲುವ ಕ್ರಯ ತತ್ಕಾಲೊಚಿತ್ತಾ ಬರದು ಗ 15 ಹದಿನೈದು ವರಹಾ ಸದ್ಯ ಪರ್‍ರಿಛೆದವಾಗಿ ಸಲೆ ಸಾಕಲ್ಯವಾಗಿ ತ್ತೆಗದುಕೊಂಡು ನಿಮಗೆ ಕ್ರಯಕ್ಕೆ ಕೊಟ್ಟೆವಾಗಿ ಯೀ ಆಳಂನ್ನು ನೀಉ ನಿಂಮ್ಮ ಸಂತ್ತಾನ ಪಾರಂಪರ್‍ರೆಯಾಗಿ ಸುಖದಿಂ ಅನುಭವಿಶಿಕೊಂಡು ಬಹರ್‍ರಿಯಂದು ನಾಉ ನಂಮ್ಮ ಸ್ತ್ರಿ ಪುತ್ರ ಗ್ನಾತ್ತಿ ದಾಯಾದಿ ಸಾವಂತ್ತಾನುಮತಂದಿ ಸುರ್‍ರುಛಾ ವಡಂಬಟ್ಟು ಬರಶಿಕೊಟ್ಟ ಹೊಲಯಾಳ ಕ್ರಯಚಿಟ್ಟು ಯಿದಕ್ಕೆ ಸಾಕ್ಷಿಗಳು ಹೊತೋದ ಮರ್‍ರಿಯಪ್ಪ."

ಟಿಪ್ಪಣಿ : "ಪರ್‍ರುದೆ" ಎಂಬುದು "ಕುರ್‍ರುದೆ" ಎಂಬುದರ ಅಪಲಿಖಿತವಿರು ವಂತೆ ತೋರುತ್ತದೆ. ಕುರು(ರ್‍ರು)ದೆ = ಮಗ (ಅಥವಾ ಮಗಳು), ಬುರ್‍ರುಡ = ಮಗ. ಇಲ್ಲಿ ಚೌಡನ ಮಗ, ಮಗಳು ಇಬ್ಬರನ್ನೂ 15 ವರಹಗಳಿಗೆ ಮಾರಲಾಗಿದೆ. ಹೊಲೆಯ ಗುಲಾಮರು ಒಬ್ಬ ಯಜಮಾನನಿಂದ ಇನ್ನೊಬ್ಬ ಯಜಮಾನನ ಬಳಿ ಹೋಗಿ ಅಲ್ಲಿ ಅವನ ಆಸ್ತಿಯಾಗುತ್ತಿದ್ದರು. ಅವರಿಗೆ ತಮ್ಮ ಮಕ್ಕಳ ಮೇಲೂ ಒಡೆತನ ವಿರಲಿಲ್ಲ.

ಮಲೆನಾಡಿನ ಸೌಂದರ್ಯ, ತುಂಗಾ ನದಿಯ ಪ್ರಶಾಂತ ವಾತಾವರಣ, ಶಂಕರ ಮತ್ತು ಅದ್ವೈತ ದರ್ಶನದ ಹಿನ್ನೆಲೆ ಇಷ್ಟನ್ನೂ ಹೊಂದಿರುವ ಶೃಂಗೇರಿ ಮಠಕ್ಕೂ ಅಲ್ಲಿ ನಡೆಯುತ್ತಿದ್ದ ಹೊಲೆಯರ ಮತ್ತು ಹೆಣ್ಣುಗಳ ಮಾರಾಟದ ಕ್ರಿಯೆಗೂ ಹೊಂದಾಣಿಕೆಯಾಗದೆ ಮನಸ್ಸು ಕಸಿವಿಸಿಗೊಳ್ಳುತ್ತದೆ.[1]

## ಗ್ರಂಥಾವಳಿ

### ಕನ್ನಡ

(ಸಂ) ಅನಂತರಂಗಾಚಾರ್ ಎನ್. : ಕರ್ನಾಟಕ ಪಂಚತಂತ್ರಂ, ಮೈಸೂರು. 1973

(ಸಂ) ಉಮಾಪತಿ ಎಸ್. : ಸಕಲೇಶ ಮಾದರಸನ ವಚನಗಳು, ದಾವಣಗೆರೆ

(ಸಂ) ಉಮಾಪತಿ ಎಸ್. : ಮಡಿವಾಳಯ್ಯನ ವಚನಗಳು, ದಾವಣಗೆರೆ. 1973

(ಪ್ರಕಾಶನ) : ಕರ್ನಾಟಕ ಸರಕಾರ. ಕುಮಾರವ್ಯಾಸ ಭಾರತ, ಬೆಂಗಳೂರು. 1958

(ಸಂ) ಕಲಬುರ್ಗಿ ಎಂ.ಎಂ. : ಕೊಂಡಗುಳಿ ಕೇಶಿರಾಜನ ಕೃತಿಗಳು ಹುಬ್ಬಳ್ಳಿ, 1978.

(ಸಂ) ಕುಲಕರ್ಣಿ ಬಿ.ಎಸ್. : ಸಮಯ ಪರೀಕ್ಷೆ. ಧಾರವಾಡ. 1958.

ಕೃಷ್ಣಮೂರ್ತಿ ಹನೂರು : ಕತ್ತಾಲ ದಾರಿ ದೂರ. ಬೆಂಗಳೂರು, 1981

ಕೃಷ್ಣಶರ್ಮಾ ಬೆಟಗೇರಿ ಮತ್ತು ಹುಚ್ಚೂರಾವ ಬೆಂಗೇರಿ : ಪುರಂದರ ಸಾಹಿತ್ಯ, V. ಧಾರವಾಡ. 1965.

ಚಂದ್ರಯ್ಯ ಬಿ.ಎನ್. : ಯಜಮಾನ್ ವೀರಸಂಗಪ್ಪನವರು. ಡಂಬಳ–ಗದಗ, 1981

(ಸಂ) ಚಂದ್ರಯ್ಯ ಬಿ.ಎನ್. : ಬಸವಪವಾಡ. ಮೈಸೂರು. 1967.

(ಸಂ) ಚಂದ್ರಯ್ಯ ಬಿ.ಎನ್. : ಮಹಾದೇವಿಯಕ್ಕನ ಪುರಾಣ. ಮೈಸೂರು, 1968.

---

1. ಹೊಲೆಯ ಗುಲಾಮರ ಮಾರಾಟಕ್ಕೆ ಮತ್ತು ಪತಿತ ಹೆಂಗಸರ ಮಾರಾಟಕ್ಕೆ ಸಂಬಂಧಿಸಿದಂತೆ ನೋಡಿ – ಎ.ಕೆ. ಶಾಸ್ತ್ರಿ : ಶೃಂಗೇರಿ ಧರ್ಮ ಸಂಸ್ಥಾನ, ಶೃಂಗೇರಿ. 1983, ಪು. 182–3; 187; 191; 193. ಹಿಂದಿನ ಕರ್ನಾಟಕದಲ್ಲಿ ನಡೆಯುತ್ತಿದ್ದ ತೊತ್ತುಗಳ ಮಾರಾಟದ ವಿವರಗಳಿಗೆ ನೋಡಿ – ಎಂ. ಚಿದಾನಂದಮೂರ್ತಿ : 'ಪ್ರಾಚೀನ ಕರ್ನಾಟಕದಲ್ಲಿ ಗುಲಾಮರ ಮಾರಾಟ.' ಪಗರಣ ಮತ್ತು ಇತರ ಸಂಪ್ರಬಂಧಗಳು. ಮೈಸೂರು, 1984. ಪು. 189–95.

ಚಿದಾನಂದಮೂರ್ತಿ ಎಂ. : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಮೈಸೂರು, 1979

ಚಿದಾನಂದಮೂರ್ತಿ ಎಂ. : ವಚನ ಸಾಹಿತ್ಯ. ಬೆಂಗಳೂರು, 1975

ಚಿದಾನಂದಮೂರ್ತಿ ಎಂ. : ಪಗರಣ ಮತ್ತು ಇತರ ಸಂಪ್ರಬಂಧಗಳು. ಮೈಸೂರು, 1984.

(ಸಂ) ತಿಪ್ಪೇರುದ್ರಸ್ವಾಮಿ ಎಚ್. : ಅಮುಗಿದೇವಯ್ಯಗಳ ಸಾಂಗತ್ಯ. ಮೈಸೂರು, 1965.

(ಸಂ) ದೇವೀರಪ್ಪ ಎಚ್ ಮತ್ತು ರಾಚಪ್ಪ ಆರ್. : ಜೇಡರ ದಾಸಿಮಯ್ಯನ ವಚನಗಳು. ಸಿರಿಗೆರೆ, 1974.

(ಸಂ) ದೇವೀರಪ್ಪ ಎಚ್. ಮತ್ತು ಮಹಾದೇವ ಬಣಕಾರ : ವಿಶ್ವಬಂಧು ಮರುಳಸಿದ್ಧ ಹಾಗೂ ಆತನ ಪರಂಪರೆ

(ಸಂ) ನರಸಿಂಹಾಚಾರ್ ಡಿ.ಎಲ್. : ವಡ್ಡಾರಾಧನೆ. ಮೈಸೂರು, 1970.

ನಾರಾಯಣ ಪಿ.ವಿ. : ವಚನ ಸಾಹಿತ್ಯ, ಒಂದು ಸಾಂಸ್ಕೃತಿಕ ಅಧ್ಯಯನ. ಗದಗ, 1983.

(ಸಂ) ಪಾವಟೆ ಇಷ್ಟಲಿಂಗಪ್ಪ ಸಿದ್ಧರಾಮಪ್ಪ ಮತ್ತು ಇತರರು : ಬಸವಪುರಾಣ. ಧಾರವಾಡ, 1969.

(ಸಂ) ಬಸಪ್ಪ ಎಸ್. : ಸಾನಂದ ಚರಿತೆ. ಮೈಸೂರು, 1975.

(ಸಂ) ಬಸಪ್ಪ ಎಸ್. : ದೀಕ್ಷಾ ಬೋಧೆ. ಮೈಸೂರು, 1972.

(ಸಂ) ಬಸಪ್ಪ ಎಸ್. : ಶಿವತತ್ವ ಚಿಂತಾಮಣಿ. ಮೈಸೂರು, 1960.

(ಸಂ) ಬಸವನಾಳ ಶಿ.ಶಿ. : ಬಸವಣ್ಣನವರ ಷಟ್ಸ್ಥಳದ ವಚನಗಳು. ಧಾರವಾಡ, 1954.

(ಸಂ) ಬಸವರಾಜ ಸಿದ್ಧಾಶ್ರಮ ಮತ್ತು ವಿದ್ಯಾಶಂಕರ ಎಸ್. : ಅಂಬಿಗರ ಚೌಡಯ್ಯನ ವಚನಗಳು, ಬೆಂಗಳೂರು. 1980.

(ಸಂ) ಬಸವರಾಜು ಎಲ್. : ಅಲ್ಲಮನ ವಚನ ಚಂದ್ರಿಕೆ. ಮೈಸೂರು, 1960.

(ಸಂ) ಎಲ್. ಬಸವರಾಜು : ಪರಮಾರ್ಥ.

(ಸಂ) ಬಸವಾರಾಧ್ಯ ಎನ್.: ಆರಾಧ್ಯ ಚಾರಿತ್ರ. ಮೈಸೂರು, 1980.

(ಸಂ) ಬಸವಾರಾಧ್ಯ ಎನ್. ಮತ್ತು ಬಸಪ್ಪ ಎಸ್. : ಹರಿಶ್ಚಂದ್ರ ಕಾವ್ಯಂ. ಮೈಸೂರು, 1975.

(ಸಂ) ಬೊಮ್ಮರಸ ಪಂಡಿತ ಎಸ್. : ಯಶೋಧರ ಕಾವ್ಯಂ. ಮರದೂರು. 1951.

ಬ್ಯಾಡಗಿ ಟಿ.ಎಲ್. ಮತ್ತು ಗುಂಜಾಳ ಎಸ್.ಆರ್. : ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನಪದಪ್ರಯೋಗ ಕೋಶ. ಧಾರವಾಡ. 1976.

(ಸಂ) ಮಲ್ಲಪ್ಪ ಬಿ. : ಕರ್ನಾಟಕ ಕಾದಂಬರಿ. ಮೈಸೂರು, 1892.

ಮಲ್ಲಾಪೂರ ಬಿ.ವಿ. : ನಯಸೇನ ಮತ್ತು ಅವನ ಕೃತಿಗಳು. ಧಾರವಾಡ, 1978.

(ಸಂ) ಮಲ್ಲೇದೇವರು ಎಚ್.ಪಿ. : ಉರಿಲಿಂಗಪೆದ್ದಿಗಳ ವಚನಗಳು. ಧಾರವಾಡ, 1975.

(ಸಂ) ಮಲ್ಲೇದೇವರು ಎಚ್.ಪಿ. : ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು, ಧಾರವಾಡ. 1975.

(ಸಂ) ಮಹೀಶವಾಡಿ ಬಿ.ಬಿ. : ಸಮ್ಯ್ತಕ್ವ ಕೌಮುದಿ, ಧಾರವಾಡ, 1976.

"ಮಾಯಾಪ್ರಸಾದ" : ಪರಮಪ್ರಸಾದಿ ಮಹಾಶಿವಶರಣ ಕಕ್ಕಯ್ಯ. ಬೆಂಗಳೂರು, 1980.

(ಸಂ) ಮಾಳವಾಡ ಸ.ಸ. : ರಾಘವಾಂಕ ಚರಿತೆ. ಧಾರವಾಡ, 1954.

ವರದರಾಜಾರಾವ್ ಜಿ. : ಕುಮಾರರಾಮನ ಸಾಂಗತ್ಯಗಳು. ಮೈಸೂರು, 1966.

(ಸಂ) ವಿಜಯಕುಮಾರ್ ಹ,ನಂ. ಷಣ್ಮುಖಸ್ವಾಮಿಯ ವಚನಗಳು. ಹುಮ್ನಾಬಾದ, 1977.

ವಿದ್ಯಾಶಂಕರ ಎಸ್. : ಚೇರಮನ ಕಥೆಯ ತೌಲನಿಕ ಅಧ್ಯಯನ, ಬೆಂಗಳೂರು, 1982

(ಸಂ) ವಿದ್ಯಾಶಂಕರ ಎಸ್. ಮತ್ತು ಶಿವಣ್ಣ ಎಸ್. : ಭೋಗಣ್ಣನ ಸಾಂಗತ್ಯ. ಬೆಂಗಳೂರು, 1978.

(ಸಂ) ವೆಂಕಣ್ಣಯ್ಯ ಟಿ.ಎಸ್. : ಬಸವರಾಜದೇವರ ರಗಳೆ. ಮೈಸೂರು, 1976.

ಶಾಂತರಸ: ಬಸವಪೂರ್ವಯುಗದ ಶರಣರು, ರಾಯಚೂರು, 1972.

(ಸಂ) ಶಾಂತಿರಾಜಶಾಸ್ತ್ರೀ ಎ. : ತತ್ವರತ್ನಪ್ರದೀಪಿಕೆ. ಮೈಸೂರು, 1955.

(ಸಂ) ಶಾಮರಾವ್. ಟಿ.ಎಸ್. ಮತ್ತು ನರಸಿಂಹಾಚಾರ್ ಡಿ.ಎಲ್. : ಸುಕುಮಾರ ಚರಿತಂ. ಶಿವಮೊಗ್ಗ, 1954.

(ಸಂ) ಶಾಮಾಶಾಸ್ತ್ರಿ ಆರ್. : ಧರ್ಮಾಮೃತ I ಮತ್ತು II.

(ಸಂ) ಶಿವಮೂರ್ತಿಶಾಸ್ತ್ರೀ ಬಿ. : ವೀರೇಶ ಚರಿತೆ. ಬೆಂಗಳೂರು, 1966.

(ಸಂ) ಶಿವರುದ್ರಪ್ಪ ಜಿ.ಎಸ್. : ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ, ಬೆಂಗಳೂರು, 1977.

(ಸಂ) ಶೇಷಗಿರಿ ಕೆ.ಆರ್. : ಕರಸ್ಥಲದ ನಾಗಲಿಂಗನ ಚರಿತ್ರೆ. ಮೈಸೂರು, 1972.

(ಸಂ) ಶ್ರೀ ಪ್ರಭುಸ್ವಾಮಿಗಳು : ಗಣಭಾಷಿತ ರತ್ನಮಾಲೆ. ಧಾರವಾಡ, 1948.

(ಸಂ) ಸಣ್ಣಯ್ಯ, ಬಿ.ಎಸ್. : ಶಿವಲೆಂಕಮಂಚಣ್ಣ ಮತ್ತು ಡಕ್ಕೆಯ ಬೊಮ್ಮಣ್ಣಗಳ ವಚನಗಳು. ಮೈಸೂರು, 1971.

(ಸಂ) ಸಣ್ಣಯ್ಯ ಬಿ.ಎಸ್. : ಹರಿವಂಶಾಭ್ಯುದಯ .ಮೈಸೂರು, 1976.

(ಸಂ) ಸೀತಾರಾಮಯ್ಯ ಎಂ.ವಿ. : ಕವಿರಾಜಮಾರ್ಗ. ಮೈಸೂರು, 1975.

(ಸಂ) ಸುಂಕಾಪುರ ಎಂ.ಎಸ್. : ಸಕಲ ಪುರಾತನರ ವಚನಗಳು II. ಧಾರವಾಡ, 1976.

(ಸಂ) ಸುಂಕಾಪುರ ಎಂ.ಎಸ್. : ಸಿಂಗಳದ ಸಿದ್ಧಬಸವನ ಸರ್ವಪುರಾತನ ಬೆಡಗಿನ ವಚನಗಳು. ಧಾರವಾಡ, 1978.

(ಸಂ) ಸುಂಕಾಪುರ ಎಂ.ಎಸ್. : ಸಕಲ ಪುರಾತನರ ವಚನಗಳು III. ಧಾರವಾಡ 1978.

(ಸಂ) ಹಳಕಟ್ಟಿ ಫ.ಗು. : ಹರಿಹರನ ರಗಳೆಗಳು. ಧಾರವಾಡ, 1968.

(ಸಂ) ಹಿರೇಮಠ ಆರ್. ಸಿ.: ತ್ರಿಷಷ್ಟಿ ಪುರಾತನ ಚಾರಿತ್ರಂ, ಧಾರವಾಡ 1966; ಶಿವಶರಣೆಯರ ವಚನಗಳು, ಧಾರವಾಡ 1968; ಸಕಲ ಪುರಾತನರ ವಚನ ಗಳು I, ಧಾರವಾಡ, 1972; ಚನ್ನಬಸವಣ್ಣನವರ ವಚನಗಳು, ಧಾರವಾಡ, 1971; ಶ್ರೀ ಸಿದ್ಧರಾಮೇಶ್ವರ ವಚನಗಳು, ಧಾರವಾಡ, 1968.

(ಸಂ) ಹಿರೇಮಠ ಆರ್.ಸಿ. ಮತ್ತು ಸುಂಕಾಪುರ. ಎಂ.ಎಸ್. : ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ I ಮತ್ತು II. ಧಾರವಾಡ, 1968.

(ಸಂ) ದೇವೀರಪ್ಪ ಎಚ್. : ರಾಮನಾಥ ಚರಿತ್ರೆ II ಮತ್ತು III. ಮೈಸೂರು.

## ಶಾಸನ ಸಂಪುಟಗಳು

Bombay Karnataka Inscriptions. I. ii.

Epigraphia Carnatica (Mysore Edition). IV.

Epigraphia Carnatica (Rice Edition). V; VIII; IX; X; XII

Epigraphia Indica. XXIX.

Karnataka Inscriptions. I;V.

South Indian Inscriptions. VII;IX.i.

## ಇನ್ನೂ ಕೆಲವು ಗ್ರಂಥಗಳು

ಗುಂಜಾಳ ಎಸ್.ಆರ್. : ಬಸವಣ್ಣನವರ ವಚನಗಳ ಪದಪ್ರಯೋಗ ಕೋಶ.

ಶಾಸ್ತ್ರಿ ಎ.ಕೆ. : ಶೃಂಗೇರಿ ಧರ್ಮ ಸಂಸ್ಥಾನ. ಶೃಂಗೇರಿ, 1983.

Shastry A.K. : Selections from the Kaditas of the Shringeri Matha (Unpublished).

ಗೋವಿಂದ ವೈದ್ಯನ ಕಂಠೀರವ ನರಸರಾಜ ವಿಜಯ.

(ಸಂ) ಹನುಮಂತರಾವ್ ಗೋರಬಾಳ: ಶ್ರೀ ವಿಜಯದಾಸರ ಸಾಧನ ಸುಳಾದಿಗಳು. ಗೋರಬಾಳ. 1950.

## ಇಂಗ್ಲೀಷ್

Ambedkar B.R. : The Untouchables (who were they and why they became untouchables). Balarampur, 1977; Annihilation of Caste. Jullundhur, 1975; Who were the Shudras. Bombay, 1970.

Briggs E. Geo : The Chamaras. Delhi, 1975.

Dumont Louis : Homo Hierarchicus. Delhi, 1970.

Gandhi M.K. : Christian Missions (their place in India). Ahmedabad, 1971.

Ghurye G.S. : Caste and Race in India, Bombay, 1969.

Havanur L.G. : Karnataka Backward Classes Commission's Report, Vol. I, pt.1.

Hayavadana Rao C. : Mysore Gazetteer, I.

Hutton : Caste in India

James Silverberg : (Ed.) Social Mobility in Caste System in India. Mouton Publishers, 1968.

Kane P.V. : History of Dharmashastra. V.ii. Poona, 1962.

Kosambi D.D. : Myth and Reality. Bombay, 1962.

Krishna lyer L.A. : The Coorg Tribes and Castes. Madras, 1948.

Leach E. R. : (Ed.) Aspect of Caste in South India, Ceylon and North West Pakistan. Cambridge, 1969.

Montagu Ashley : Man, his first million years. Signet Books, 1964.

Mumtaz Ali Khan : Scheduled Castes and their status. (Thesis submitted to the Bangalore University for the degree of Doctor of philosophy in Sociology, 1973. Since then published).

(Ed.) Munshi K.M., and Chandrasekhara lyer N: Indian Inheritance. I.

Oliver C. Cox : Caste, Class and Race, New York, 1970.

Ramanujan A.K.: Speaking of Siva. Penguin Classic, 1973.

Ranade R.D. : Pathway to God in Marathi Literature. Bombay, 1961.

Sen S.P. : (Ed). Social Contents of Indian Religious Reform Movements. Calcutta, 1978

Vidyarthi P.L. and Mishra N.: Harijan Today. New Delhi, 1977.

A Survey of Research in Sociology. Vol. I. Bombay, 1974.



---

ಪು. 72ರಲ್ಲಿ ಬರಬೇಕಾದ್ದು–"ಒಬ್ಬ ಶ್ರೀಮಂತ, ಪ್ರಭಾವಶಾಲಿ, ಪ್ರಾಮಾಣಿಕ ಬಡವರ ಶೋಷಣೆ, ಬಡತನಗಳ ಬಗ್ಗೆ ಮಾತನಾಡಿದರೆ ಬರುವಷ್ಟು ಬೆಲೆ ಬಡವನು ಬಡವರ ಪರ ಮಾತನಾಡಿದರೆ ಅಷ್ಟು ಬೆಲೆ ಬರದು. ಶ್ರೀಮಂತನು ಬಡವರ ಪರವಾಗಿ ಕೆಲಸ ಮಾಡಿದರೆ ಅವನು ತನ್ನ ಹಣ ಕಳೆದುಕೊಳ್ಳಬೇಕಾಗುತ್ತದೆ; ಬಡವನು ಬಡವರ ಪರ ಮಾತನಾಡಿದರೆ ಅದರಿಂದ ಅವನಿಗೆ ಲಾಭ. ಬ್ಯಾರಿಸ್ಟರ್ ಗಾಂಧೀಜಿ ಬ್ರಿಟಿಷರ ವಿರುದ್ಧ ನಿಂತದ್ದು ಅದಕ್ಕೊಂದು ಒಳ್ಳೆಯ ಉದಾಹರಣೆ.